ಶ್ರೀ ಮಲ್ಲಿಕಾರ್ಜುನ ಗ್ರಂಥಮಾಲೆಯ ಸಪ್ತಮ ಕುಸುಮ

# ಜಯದೇವನ ಚಂದ್ರಾಲೋಕ

ಮತ್ತು

# ಕೇದಾರಭಟ್ಟನ ವೃತ್ತರತ್ನಾಕರ


*ಅನುವಾದಕ*

ವಿದ್ವಾನ್ ಬಿ. ರಾಜಶೇಖರಯ್ಯ, ಎಂ.ಎ.,

ನಿವೃತ್ತ ಪ್ರಾಧ್ಯಾಪಕ ಅಲಂಕಾರ ವಿಭಾಗ

ಸರ್ಕಾರಿ ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು.



*ಪ್ರಕಾಶಕ*

ವಿದ್ವಾನ್ ಎಂ. ಮಲ್ಲಣ್ಣ, ಎಂ.ಎ.,

ಶ್ರೀ ಮಲ್ಲಿಕಾರ್ಜುನ ಗ್ರಂಥ ಪ್ರಕಾಶನ,

೪೧೫ ೧ನೇ ಕ್ರಾಸ್, ವಿದ್ಯಾನಗರ, ಮೈಸೂರು.

ಮತ್ತು

ವಿದ್ವಾನ್ ಬಿ.ರಾಜಶೇಖರಯ್ಯ ಸನ್ಮಾನ ಸಮಿತಿ

ಸರ್ಕಾರಿ ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು. ೨೪

ಚಂದ್ರಾಲೋಕ ಮತ್ತು ವೃತ್ತರತ್ನಾಕರ - ಅನುವಾದಕ - ವಿದ್ವಾನ್ ಬಿ. ರಾಜಶೇಖರಯ್ಯ

ಪ್ರತಿಗಳು – ೧೦೦೦

ಮುದ್ರಣ – ೨೦೦೨



ಮೌಲ್ಯ – ೭೫ ರೂ

ಮುಖ ಪುಟದ ವೈಶಿಷ್ಟ್ಯ –

ಚಂದ್ರಾಲೋಕಃ - ಚಂದ್ರನ ಬೆಳದಿಂಗಳು, ಕಾವ್ಯವೆಂಬ ಬಾನಿಗೆ ಅಲಂಕಾರವೇ ಬೆಳದಿಂಗಳು.
ವೃತ್ತರತ್ನಾಕರಃ - ವೃತ್ತಗಳೆಂಬ ರತ್ನಗಳ ಆಗರ (ಸಾಗರ)
ಚಂದ್ರೋದಯಕೆ ಉಕ್ಕುವ ಸಾಗರದ ಮುತ್ತುಗಳೇ ಛಂದಸ್ಸುಗಳು ಅದರ ಅಲೆಗಳ ಮೇಲೆ
ತೇಲುತ್ತಿರುವವು ಅಕ್ಷರಗಣ ಮತ್ತು ಮಾತ್ರಾಗಣಗಳು

ಕಲ್ಪನೆ – ವಿದ್ವಾನ್ ಶ್ರೀನಿವಾಸಮೂರ್ತಿ

ವಿನ್ಯಾಸ – ವಿದ್ವಾನ್ ಎನ್. ಸುಬ್ರಹ್ಮಣ್ಯ ಭಟ್

ವಿದ್ವಾನ್ ಎನ್. ಆರ್. ಮುರಳೀಧರ

ಗ್ರಾಫಿಕ್ಸ್ - ಶ್ರೀ ನಂದಿಕೇಶ್ವರ ಆಫ್‌ಸೆಟ್ ಪ್ರಿಂಟ್ಸ್, ಮೈಸೂರು.

ಮುದ್ರಣ

ಶ್ರೀ ನಂದಿಕೇಶ್ವರ ಆಫ್‌ಸೆಟ್ ಪ್ರಿಂಟ್ಸ್, ಹೊಸ ಸಯ್ಯಾಜಿರಾವ್ ರಸ್ತೆ, ಮೈಸೂರು.

# ಮುನ್ನುಡಿ

**ವಿದ್ವಾನ್ ಎಚ್.ವಿ. ನಾಗರಾಜರಾವ್**
ಗೌ|| ಉಪನಿರ್ದೇಶಕರು, ಜೆ.ಎಸ್.ಎಸ್.ಆರ್.ಎಸ್.ವಿ
ಸಂಸ್ಕೃತ ಸಂಶೋಧನಾ ಕೇಂದ್ರ, ಮೈಸೂರು.

ಭಾರತೀಯ ಕಾವ್ಯಮೀಮಾಂಸೆಯ ಸೌಧದಲ್ಲಿ ಹದಿನಾರನೆಯ ಶತಮಾನ ಒಂದು ಮುಖ್ಯ ಮಜಲು. ರಸ, ಧ್ವನಿ,ಅಲಂಕಾರ, ಔಚಿತ್ಯ ಮುಂತಾದ ಪರಿಕಲ್ಪನೆಗಳು ನಿಶ್ಚಿತರೂಪವನ್ನು ಅಷ್ಟು ಹೊತ್ತಿಗೆ ಪಡೆದುಕೊಂಡಿದ್ದವು. ಗಣನೀಯ ಆಲಂಕಾರಿಕರೆಲ್ಲ ಆಗ 'ಧ್ವನಿ'ಯನ್ನು ಪರಮ ತತ್ತ್ವವೆಂದೂ, ಆನಂದವರ್ಧನನನ್ನು ಪರಮಾಚಾರ್ಯನೆಂದೂ ಒಪ್ಪಿಕೊಂಡಿದ್ದರು. ಹೊಸ ಸಿದ್ಧಾಂತಗಳು ಈ ಕಾಲದಲ್ಲಿ ಉದಯಿಸಲಿಲ್ಲವೆಂಬುದು ಸತ್ಯ. ಆದರೆ, ಹಿಂದಿನ ಸಿದ್ಧಾಂತಗಳೆಲ್ಲ ಶಾಸ್ತ್ರೀಯವಾದ ಪರಿಷ್ಕಾರದಿಂದ ಖಚಿತ ರೂಪವನ್ನೂ, ನಿಷ್ಕೃಷ್ಟತೆಯನ್ನೂ ಪಡೆದುಕೊಂಡಿವೆ.

ಈ ಶತಮಾನದಲ್ಲಿ ದಕ್ಷಿಣಭಾರತದಲ್ಲಿ ಅತ್ಯುನ್ನತ ವ್ಯಕ್ತಿತ್ವವನ್ನು ಪಡೆದುಕೊಂಡು ಸಕಲಶಾಸ್ತ್ರಪಾರಂಗತರಾಗಿ ನೂರಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿದ ಅಪ್ಪಯ್ಯ ದೀಕ್ಷಿತರು ಅಲಂಕಾರ ಶಾಸ್ತ್ರಕ್ಕೆ ನೀಡಿರುವ ಕೊಡುಗೆ ಅಪಾರ. ನವೀನನ್ಯಾಯ, ಪೂರ್ವಮೀಮಾಂಸಾ ಮತ್ತು ಅದ್ವೈತ ವೇದಾಂತಗಳಲ್ಲಿ ಅವರಿಗಿದ್ದ ಪಾಂಡಿತ್ಯವೂ, ಕವಿತಾರಚನೆಯ ಸಾಮರ್ಥ್ಯವೂ ಅವರ ಅಲಂಕಾರ ಶಾಸ್ತ್ರಗ್ರಂಥಗಳಿಗೆ ವೈಶಿಷ್ಟ್ಯವನ್ನು ತಂದು ಕೊಟ್ಟಿವೆ.ಅವರ ಕುವಲಯಾನಂದ, ಚಿತ್ರಮೀಮಾಂಸಾ ಮತ್ತು ವೃತ್ತಿವಾರ್ತಿಕ ಎಂಬ ಮೂರು ಗ್ರಂಥರತ್ನಗಳೂ ಲೋಕವಿಖ್ಯಾತವಾಗಿವೆ.

ವಿಜಯನಗರದ ದೊರೆ ವೇಂಕಟಪತಿರಾಯನ ಆಣತಿಯಂತೆ ರಚಿತವಾದ ಕುವಲಯಾನಂದವು ಕುವಲಯಕ್ಕೆ (ಭೂಮಂಡಲಕ್ಕೆ)ಆನಂದವನ್ನು ಕೊಡುವುದಕ್ಕಾಗಿ ರಚಿತವಾಗಿದೆ. ಜಯದೇವನ ಚಂದ್ರಾಲೋಕದ ಸ್ಫೂರ್ತಿಯಿಂದ ಉದಿಸಿದ ಈ ಗ್ರಂಥ ಎಲ್ಲ ಅರ್ಥಾಲಂಕಾರಗಳ ಪರಿಚಯವನ್ನು ಮಾಡಿಕೊಡುತ್ತದೆ. ಅಪ್ಪಯ್ಯ ದೀಕ್ಷಿತರ ಕುವಲಯಾನಂದಕ್ಕೆ ಮೂಲವಾಗಿರುವುದು ಜಯದೇವನ ಚಂದ್ರಾಲೋಕ. ಅದರ ಐದನೆಯ ಮಯೂಖ (ಅಧ್ಯಾಯ)ದಲ್ಲಿ ಅರ್ಥಾಲಂಕಾರಗಳನ್ನು ಸೋದಾಹರಣವಾಗಿ ವಿವರಿಸಲಾಗಿದೆ. ಅಲ್ಲಿರುವ ಕಾರಿಕೆಗಳನ್ನು ಅಪ್ಪಯ್ಯದೀಕ್ಷಿತರು ಕುವಲಯಾನಂದದಲ್ಲಿ ಬಳಸಿಕೊಂಡಿದ್ದಾರೆ. ಆದರೆ, ಎಲ್ಲ ಕಾರಿಕೆಗಳನ್ನೂ ಹಾಗೇ ಇಟ್ಟುಕೊಂಡಿಲ್ಲ. ಆವಶ್ಯಕವಾಗಿದ್ದಾಗ ಬದಲಾಯಿಸಿಕೊಂಡಿದ್ದಾರೆ. ಉದಾಹರಣೆಗೆ, ಉಪಮಾಲಂಕಾರದಲ್ಲಿ—

ಉಪಮಾ ಯತ್ರ ಸಾದೃಶ್ಯಲಕ್ಷ್ಮೀರುಲ್ಲಸತಿ ದ್ವಯೋಃ|
ಹೃದಯೇ ಖೇಲತೋರುಚ್ಚೈಸ್ತನ್ವಂಗೀಸ್ತನಯೋರಿವ ||

ಎಂದು ಚಂದ್ರಾಲೋಕದಲ್ಲಿದೆ. ಇದರ ಉತ್ತರಾರ್ಧವನ್ನು ದೀಕ್ಷಿತರು —

ಹಂಸೀವ ಕೃಷ್ಣ ತೇ ಕೀರ್ತಿಸ್ಸ್ವರ್ಗಂ ಗಾಮವಗಾಹತೇ

ಎಂದು ಬದಲಾಯಿಸಿದ್ದಾರೆ. ಅಲಂಕಾರಗಳ ಪ್ರಭೇದಗಳನ್ನೂ ಅವಾಂತರ ಭೇದಗಳನ್ನೂ ಹೇಳುವಾಗ ಹೊಸ ಕಾರಿಕೆಗಳನ್ನು ರಚಿಸಿದ್ದಾರೆ. ಕುವಲಯಾನಂದದ ಕಾರಿಕೆಗಳನ್ನು ಮಾತ್ರ ಪೃಥಕ್ಕರಿಸಿ "ಚಂದ್ರಾಲೋಕ" ಎಂಬ ಹೆಸರಿನಿಂದ ಸಂಸ್ಕೃತ ವಿದ್ಯಾರ್ಥಿಗಳಿಗೆ ಕಲಿಸುವ ಸಂಪ್ರದಾಯವಿದೆ. ಇದು ಅಲಂಕಾರಗಳ ಸ್ವರೂಪವನ್ನು ಸುಲಭವಾಗಿ ಸೋದಾಹರಣವಾಗಿ ಕಲಿಸುವುದರಿಂದ ಜನಪ್ರಿಯವೂ ಆಗಿದೆ.

ಛಂದಸ್ಸು ವೇದದ ಆರು ಅಂಗಗಳಲ್ಲಿ ಒಂದು. ಪಾಣಿನಿಯ ಪರಿಭಾಷೆಯಲ್ಲಿ ಛಂದಸ್ಸು ಎಂದರೆ ವೇದವೇ. ಇದು ಛಂದಶ್ಶಾಸ್ತ್ರದ ಪ್ರಾಮುಖ್ಯವನ್ನು ತಿಳಿಸುತ್ತದೆ.

ಛಂದಶ್ಶಾಸ್ತ್ರದ ಪ್ರವರ್ತಕ ಪಿಂಗಳ. ಇವನ ಛಂದಸ್ಸೂತ್ರಗಳು ಮುಂದಿನ ಛಂದಶ್ಶಾಸ್ತ್ರ ಗ್ರಂಥಗಳಿಗೆಲ್ಲ ಮೂಲ. ವೇದದಲ್ಲಿದ್ದ ಗಾಯತ್ರೀ, ಅನುಷ್ಟುಭ್, ಜಗತೀ ಮುಂತಾದ ಕೆಲವೇ ಛಂದಸ್ಸುಗಳು ಲೌಕಿಕ ಅಭಿಜಾತ ಸಂಸ್ಕೃತ ಸಾಹಿತ್ಯದಲ್ಲಿ ನೂರಾರು ಆದುವು. ಅಕ್ಷರಗಳ ಗಣನೆಯಿಂದ ಆಗುವ ಅಕ್ಷರ ಛಂದಸ್ಸು ಮತ್ತು ಮಾತ್ರಾಗಣನೆಯಿಂದ ಆಗುವ ಆರ್ಯಾಛಂದಸ್ಸು ಎಂದು ಸ್ಥೂಲವಾಗಿ ಎರಡು ವಿಭಾಗಗಳನ್ನು ಮಾಡಿಕೊಳ್ಳಬಹುದು. ಕಾಳಿದಾಸಾದಿ ಮಹಾಕವಿಗಳ ಕಾವ್ಯ— ನಾಟಕಗಳಲ್ಲಿ ಎರಡು ವಿಧದ ಛಂದಸ್ಸನ್ನೂ ಬಳಸಲಾಗಿದೆ. ಅಲ್ಲದೆ ಅಕ್ಷರ ಛಂದಸ್ಸಿನಲ್ಲಿ ನಾಲ್ಕು ಪಾದಗಳೂ ಸಮಾನವಾಗಿರುವ ಸಮವೃತ್ತ, (ಒಂದು-ಮೂರು,ಎರಡು-ನಾಲ್ಕು)ಎಂಬ ಕ್ರಮದಲ್ಲಿ ಪಾದಗಳ ಸಮಾನತೆಯಿಂದ ಅರ್ಧಸಮವೃತ್ತ, ಅಂಥ ಸಮಾನತೆಯಿಲ್ಲದ ವಿಷಮವೃತ್ತ ಎಂಬ ಮೂರು ಭೇದಗಳಿವೆ. ಸಂಭವದ ದೃಷ್ಟಿಯಿಂದ ನೋಡಿದಾಗ ವೃತ್ತಗಳ ಸಂಖ್ಯೆ ಲಕ್ಷಾಧಿಕವಾಗುತ್ತದೆ. ಆದರೆ ಅವುಗಳಲ್ಲಿ ಶ್ರವ್ಯತ್ವವು (ಎಂದರೆ ಕೇಳಲು ಹಿತವಾಗಿರುವ ಗುಣವು) ಯಾವುಗಳಲ್ಲಿವೆಯೋ ಅವನ್ನು ಮಾತ್ರ ಕವಿಗಳು ಪ್ರಯೋಗಿಸಿದ್ದಾರೆ. ಅಂಥ ವೃತ್ತಗಳನ್ನು ಛಂದಶ್ಶಾಸ್ತ್ರಕಾರರು ಲಕ್ಷಿಸಿದ್ದಾರೆ.

ಪಿಂಗಳನ ಸೂತ್ರಗಳಲ್ಲಿ ಲಕ್ಷಣಗಳನ್ನು ಹೇಳಿದರೂ ಅವುಗಳಿಗೆ ಲಕ್ಷ್ಯಗಳನ್ನು ಬೇರೆಡೆ ಹುಡುಕಬೇಕು. ಅದರ ಬದಲು ಲಕ್ಷಣವೇ ಲಕ್ಷ್ಯವೂ ಆದರೆ ಸ್ಮರಣಕ್ಕೆ ಅನುಕೂಲವೆಂಬುದು ಸ್ಪಷ್ಟ. ಈ ದಿಶೆಯಲ್ಲಿ ಕೇದಾರಭಟ್ಟನ ವೃತ್ತರತ್ನಾಕರ ಅತ್ಯಂತ ಉಪಯೋಗಿ. ಇದರಲ್ಲಿ ಎಲ್ಲ ವೃತ್ತಗಳಿಗೂ ಲಕ್ಷಣವೇ ಲಕ್ಷ್ಯವೂ ಆಗಿದೆ."ಮೋ ಮೋ ಗೋ ಗೋ ವಿದ್ಯುನ್ಮಾಲಾ" ಎಂದರೆ ಎರಡು ಮಗಣಗಳು ಮತ್ತು ಎರಡು ಗುರುಗಳು ಬರುವ ಎಂಟಕ್ಷರದ ವೃತ್ತ ವಿದ್ಯುನ್ಮಾಲಾ. ಅದಕ್ಕೆ ಈ ಲಕ್ಷಣವೇ ಲಕ್ಷ್ಯ. ಇದರಿಂದ ಕೇದಾರಭಟ್ಟನ ವೃತ್ತರತ್ನಾಕರ ಜನಪ್ರಿಯವಾಗಿದೆ. ಇದರ ಅಧ್ಯಯನ ಸಂಸ್ಕೃತಜ್ಞರಿಗೆ ಬಹೂಪಕಾರಿ.

ಶ್ರೀಮನ್ಮಹಾರಾಜ ಸಂಸ್ಕೃತ ಕಾಲೇಜಿನಲ್ಲಿ ಅಲಂಕಾರ ಶಾಸ್ತ್ರ ಪ್ರಾಧ್ಯಾಪಕರಾಗಿ ದುಡಿದು ನೂರಾರು ವಿದ್ಯಾರ್ಥಿಗಳನ್ನು ವಿದ್ವಾಂಸರನ್ನಾಗಿ ಮಾಡಿ ಸಾರ್ಥಕ ಜೀವನವನ್ನು ನಡೆಸಿ, ವಿಶ್ರಾಂತರಾದ ಮೇಲೂ ಶಾರದೆಯ ಸೇವೆಯನ್ನು ಗ್ರಂಥರಚನೆ ಮತ್ತು ಅಧ್ಯಾಪನಗಳಿಂದ ಮುಂದುವರಿಸುತ್ತಿರುವ ಪೂಜ್ಯರಾದ ವಿದ್ವಾನ್ ಬಿ. ರಾಜಶೇಖರಯ್ಯನವರು ಶ್ರೇಷ್ಠ ಪಂಡಿತರಷ್ಟೇ ಅಲ್ಲ, ಸಹೃದಯರೂ ಆಗಿದ್ದಾರೆ. ಅವರೊಡನೆ ಮಾತನಾಡುವಾಗ ಹಲವಾರು ಹೊಸ ಶಾಸ್ತ್ರ ವಿಷಯಗಳು ಬೆಳಕಿಗೆ ಬರುತ್ತವೆ. ಎಲ್ಲರೊಡನೆಯೂ ಪ್ರೀತಿ-ವಿಶ್ವಾಸಗಳಿಂದ ವ್ಯವಹರಿಸುವ ಈ ವಿದ್ವತ್ ಪ್ರಕಾಂಡರು ನಮಗೆಲ್ಲ ಆದರ್ಶಪ್ರಾಯರಾಗಿದ್ದಾರೆ. ಈಗ ಆಗಮ ವಿದ್ಯಾರ್ಥಿಗಳಿಗೆ ಚಂದ್ರಾಲೋಕ ಮತ್ತು ವೃತ್ತರತ್ನಾಕರಗಳು ಪಾಠ್ಯಗ್ರಂಥಗಳಾಗಿರುವುದರಿಂದ ಇವನ್ನು ಕನ್ನಡಾನುವಾದ ಮತ್ತು ವಿವರಣೆಗಳಿಂದ ಭೂಷಿತವಾಗಿ ಮಾಡಿ ಅವರು ಅರ್ಪಿಸಿರುವುದು ಅವರ ವಿದ್ಯಾರ್ಥಿವಾತ್ಸಲ್ಯವನ್ನು ತೋರಿಸುತ್ತದೆ. ವಿದ್ಯಾರ್ಥಿಗಳಿಗೆ ಮಾತ್ರವಲ್ಲ, ಜಿಜ್ಞಾಸುಗಳಿಗೆಲ್ಲರಿಗೂ ಈ ಪುಸ್ತಕಗಳಿಂದ ಪ್ರಯೋಜನವಿದೆ.

ವಿಶ್ವದಲ್ಲಿ ಛಂದಸ್ಸಿನ ಬಗೆಗೆ ಈಚೆಗೆ ಆಸಕ್ತಿ ಕಡಿಮೆಯಾಗಿದೆ ಎಂಬುದು ಸತ್ಯ. ಛಂದಸ್ಸಿನ ನಿಯಮಗಳನ್ನು ಕಡಿದು ಹಾಕಿ ಮುಕ್ತಛಂದಸ್ಸಿನಲ್ಲಿ ಅಥವಾ ಛಂದೋ ಮುಕ್ತವಾಗಿ

ಪದ್ಯಗಳನ್ನು ಅನೇಕರು ರಚಿಸುತ್ತಿರುವುದನ್ನು ಕಾಣಬಹುದು. ಇಂಗ್ಲೀಷಿನಿಂದ ಬಂದ ಈ ಪ್ರವೃತ್ತಿ ದೇಶಭಾಷೆಗಳಲ್ಲೂ ಈಗ ಬೇರೂರಿದೆ. ದೇವಭಾಷೆಯಲ್ಲಿ, ಎಂದರೆ ಸಂಸ್ಕೃತದಲ್ಲಿ ಇನ್ನೂ ಛಂದೋಬದ್ಧವಾದ ಪದ್ಯಗಳೇ ರಚಿತವಾಗುತ್ತಿವೆ. ಛಂದಸ್ಸು ಅನಾವಶ್ಯಕವಾದ ಪಾದ ಶೃಂಖಲೆ ಆಗಬಾರದು ಎಂಬ ವಾದವನ್ನು ಹಲವರು ಪ್ರಸ್ತುತಪಡಿಸಬಹುದು. ಆದರೆ ಹೀಗೆ ವಾದ ಮಾಡುವವರು ಛಂದಸ್ಸಿನಿಂದಾಗುವ ಎರಡು ಮುಖ್ಯ ಪ್ರಯೋಜನಗಳನ್ನು ಮರೆಯಬಾರದು. ಛಂದಸ್ಸು ಪದ್ಯಕ್ಕೆ ತನ್ನ ಲಯದಿಂದ ಸೌಂದರ್ಯವನ್ನು, ಅಥವಾ ಗೇಯಗುಣವನ್ನು ತಂದುಕೊಡುತ್ತದೆ. ಯದ್ವಾ ತದ್ವಾ ಪದಗಳನ್ನು ಉಪಯೋಗಿಸಿ ಇಷ್ಟ ಬಂದಂತೆ ಪದ್ಯವನ್ನು ಬರೆದರೆ ಅದನ್ನು ಹಾಡಲು ಸಾಧ್ಯವಾಗುವುದಿಲ್ಲ. ಗದ್ಯವನ್ನೇ ತುಂಡುತುಂಡಾಗಿ ಕತ್ತರಿಸಿ ಜೋಡಿಸಿಟ್ಟಂತೆ ಭಾಸವಾಗುತ್ತದೆ. ಎರಡನೆಯದಾಗಿ ಛಂದೋಬದ್ಧವಾದ ಪದ್ಯ ಸ್ಮರಣೆಯಲ್ಲಿ ದೃಢವಾಗಿ ನಿಲ್ಲುತ್ತದೆ. ನಿಯತವಾದ ಲೆಕ್ಕಾಚಾರವಿರುವ ಪಾದಗಳು ಮನಸ್ಸಿನಲ್ಲಿ ಆಕಾಂಕ್ಷೆ (expectancy)ಯನ್ನು ಉತ್ಪಾದಿಸಿ ಆ ಪದಗಳು ನೆನಪಿಗೆ ಬರುವಂತೆ ಮಾಡುತ್ತವೆ. ಛಂದೋ ಮುಕ್ತವಾದ ಪದ್ಯದಲ್ಲಿ ಈ ಸೌಲಭ್ಯವಿಲ್ಲ. ವೇದಗಳು ಸಹಸ್ರಾರು ವರ್ಷ ಲಿಖಿತವಾಗಿಲ್ಲದಿದ್ದರೂ ಉಳಿದುಕೊಂಡು ಬರಲು ಇದು ಮುಖ್ಯ ಕಾರಣ.

ಛಂದೋನುಗುಣವಾಗಿ ಪದ್ಯಗಳನ್ನು ಬರೆಯುವುದು ಕಷ್ಟ. ಅದಕ್ಕಾಗಿ ವಿಶೇಷ ಪರಿಶ್ರಮದಿಂದ ಹೊಂದುವ ಪದಗಳನ್ನೇ ಹುಡುಕಬೇಕಾಗುತ್ತದೆ. ಹೀಗೆ ಮಾಡಿದಾಗ ರಸ-ಭಾವಗಳ ಅಭಿವ್ಯಕ್ತಿ ಕುಂಠಿತವಾಗುತ್ತದೆ ಎಂದೂ ಕೆಲವರು ಆಕ್ಷೇಪಿಸಬಹುದು. ಆದರೆ ಕಾಳಿದಾಸಾದಿಗಳು ಛಂದೋಬದ್ಧ ಸಾಹಿತ್ಯವನ್ನೇ ರಚಿಸಿದ್ದರೂ ಅದು ರಸಸ್ಯಂದಿಯಾಗಿ ವಿಶ್ವವಂದ್ಯವಾಗಿಲ್ಲವೆ ? ಛಂದೋಮುಕ್ತವಾಗಿ ಇಂದು ಬರೆಯುತ್ತಿರುವವರ ಪದ್ಯಗಳು ಮೇಘದೂತ, ಗಂಗಾಲಹರಿ ಇತ್ಯಾದಿಗಳಿಗಿಂತ ಹೆಚ್ಚು ರಸಭರಿತವಾಗಿವೆಯೇ ? ಎಂದು ಆಲೋಚಿಸಬೇಕು. ಪ್ರತಿಭೆ ಮತ್ತು ವ್ಯುತ್ಪತ್ತಿ ಯಾವ ಕವಿಯಲ್ಲಿದೆಯೋ, ಅವನಿಗೆ ಛಂದಸ್ಸು ಒಂದು ವರ. ತೊಡಕಲ್ಲ, ಅಡ್ಡಿಯಲ್ಲ, ತೊಂದರೆಯಲ್ಲ. ವೃತ್ತರತ್ನಾಕರವನ್ನು ಅಭ್ಯಸಿಸಿ ಸಂಸ್ಕೃತ ವಿದ್ಯಾರ್ಥಿಗಳು ಕಾವ್ಯ-ನಾಟಕಗಳಲ್ಲಿರುವ ಪದ್ಯಗಳ ಛಂದಸ್ಸುಗಳನ್ನು ಗುರುತಿಸುವುದರಲ್ಲಿ ಮಾತ್ರವಲ್ಲ, ಸ್ವಯಂ ಪದ್ಯರಚನೆಯಲ್ಲೂ ನಿಪುಣರಾಗಬಹುದು.

ಒಂದು ಪಾದದಲ್ಲಿ ಒಂದೇ ಅಕ್ಷರವಿರುವ 'ಶ್ರೀ'ಎಂಬ ಛಂದಸ್ಸಿನಿಂದ ಆರಂಭಿಸಿ, ಒಂದುಪಾದದಲ್ಲಿ ಇಪ್ಪತ್ತಾರು ಅಕ್ಷರಗಳಿರುವ 'ಅಪವಾಹ' ಎಂಬ ವೃತ್ತದವರೆಗೆ ಕೇದಾರನ ನಿರೂಪಣೆ ಹರಿದಿದೆ. ಅಲ್ಲಿಂದ ಮುಂದೆ ದಂಡಕಗಳನ್ನೂ ನಿರೂಪಿಸಿದ್ದಾನೆ. ಪ್ರಸ್ತಾರದ ಭಾಗ ಗಣಿತಕ್ರಮದಲ್ಲಿದೆ. ಇವೆಲ್ಲವುಗಳ ಜ್ಞಾನ ವಿದ್ಯಾರ್ಥಿಗಳಿಗೆ ಲಭ್ಯವಾಗುವಂತೆ ಮಾಡಿ ಗ್ರಂಥಕರ್ತ ರಾದ ಶ್ರೀ ಬಿ. ರಾಜಶೇಖರಯ್ಯನವರು ಮಹೋಪಕಾರವನ್ನು ಮಾಡಿದ್ದಾರೆ. ಸರಳವಾದ ಕನ್ನಡದಲ್ಲಿ ಇಷ್ಟು ವಿವರಣೆಯನ್ನು ನೀಡಿರುವ ಪೂಜ್ಯ ರಾಜಶೇಖರಯ್ಯನವರಿಗೆ ನನ್ನ ಪ್ರಣಾಮ ಪೂರ್ವಕ ಅಭಿನಂದನೆಗಳು.

ಸಂಸ್ಕೃತ ಪುಸ್ತಕಗಳ ಪ್ರಕಟಣೆ ಒಂದು ಸಾಹಸ. ಈ ಕಾರ್ಯವನ್ನು ಸಂಸ್ಕೃತ ಪ್ರೇಮದಿಂದ ಮಾಡಲು ಸಾಧ್ಯವೇ ಹೊರತು ಅರ್ಥಲಾಭಕ್ಕಾಗಿ ಮಾಡಲು ಸಾಧ್ಯವಿಲ್ಲ. ಅಂಥ ಸಾಹಸವನ್ನು ವಿದ್ವಾಂಸರಾದ ಪ್ರಾ. ಮಲ್ಲಣ್ಣನವರು ಮಾಡಿರುವುದರಿಂದ ಅವರೂ ಅಭಿನಂದನೀಯರು.

ಸಂಸ್ಕೃತ ವಿದ್ಯಾರ್ಥಿಗಳು ಈ ಗ್ರಂಥದ ಅಧ್ಯಯನದಿಂದ ಲಾಭಾನ್ವಿತರಾಗಲೆಂದು ಆಶಿಸುತ್ತೇನೆ.

*ಇಂತು ವಿದ್ವಜ್ಜನ ವಿಧೇಯ*

ಎಚ್.ವಿ. ನಾಗರಾಜರಾವ್

# ಸನ್ಮುಡಿ

**ವಿದ್ವಾನ್ ಡಾ. ಟಿ.ವಿ. ಸತ್ಯನಾರಾಯಣ** ಎಂ.ಎ.ಪಿ.ಎಚ್.ಡಿ.,
ಹಿರಿಯ ಸಹಾಯಕ ಸಂಶೋಧಕ
ಪ್ರಾಚ್ಯ ವಿದ್ಯಾಸಂಶೋಧನಾಲಯ, ಮೈಸೂರು

ಲೋಕೋತ್ತರವರ್ಣನಾನಿಪುಣವಾದ ಕವಿಕರ್ಮವಾದ ಕಾವ್ಯಕ್ಕೆ ಶೋಭೆಯನ್ನು ತಂದುಕೊಡುವುವೇ ಅಲಂಕಾರಗಳು. ಸಹೃದಯರನ್ನು ಮುದಗೊಳಿಸುವಂತಹ ಚತುರಮಯವಾದ ಶಬ್ದಜಾಲ ಹಾಗೂ ಮನಸ್ಸಿಗೆ ಆನಂದವನ್ನು ನೀಡುವ ಪ್ರತಿಭಾನ್ವಿತವಾದ ಅರ್ಥಸೌಷ್ಠವ ಕಾವ್ಯದ ಶೋಭೆಯನ್ನು ಹೆಚ್ಚಿಸುತ್ತದೆ. ಇಂತಹ ಕಾವ್ಯಗಳೇ ಚತುರಮತಿಗಳಾದ ಸಹೃದಯ ಸಜ್ಜನರನ್ನು ಆಕರ್ಷಿಸಿ ಅವರಿಗೆ ಆನಂದವನ್ನು ನೀಡುವಂತಹುಗಳು. ಹೀಗಾಗಿ ಸಹೃದಯ ರಸಿಕರು ಕಾವ್ಯಶಾಸ್ತ್ರ ವಿನೋದಗಳಿಂದ ತಮ್ಮ ಕಾಲಯಾಪನೆ ಮಾಡುತ್ತಾರೆ. ಅಂತಹ ಕಾವ್ಯವು ಶಬ್ದಾರ್ಥಯುಗಲ ವಾಗಿರುವುದರಿಂದ ಶಬ್ದಾರ್ಥಗಳು ಅಲಂಕಾರಯುತವಾಗಿದ್ದಾಗಲೇ ಹಾಗೂ ಛಂದೋಬದ್ಧ ವಾದಾಗಲೇ ಸಹೃದಯ ರಂಜನೆ ಉಂಟಾಗುವುದು ಎನ್ನುವುದು ಸರ್ವ ವಿದಿತ. ಶಬ್ದಗಳು ಲಲಿತವಾದ ಮಧುರವಾದ ವರ್ಣಜಾಲಗಳಿಂದ ಕೂಡಿದಾಗ ಅಲ್ಲಿ ಶಬ್ದಾಲಂಕಾರವಿದೆ ಎಂದು ಹೇಳುವರು. ಅರ್ಥವು ಮನಸ್ಸಿಗೆ ಅನಿರ್ವಚನೀಯವಾದ ಆನಂದವನ್ನು ಉಂಟುಮಾಡುವಂತೆ ಸಂಘಟಿತವಾಗಿದ್ದರೆ ಅಲ್ಲಿ ಅರ್ಥಾಲಂಕಾರವಿದೆ ಎಂದು ಹೇಳುವರು. ಇಂತಹ ಅರ್ಥಾಲಂಕಾರಗಳು ಉಪಮಾನ, ರೂಪಕ, ಮೊದಲಾದವುಗಳು ಎಂಬುದು ತಿಳಿದ ವಿಷಯ.

ಶಬ್ದಾಲಂಕಾರ ಅರ್ಥಾಲಂಕಾರಗಳ ನಿರೂಪಣೆಯನ್ನು ಪ್ರಾಚೀನ ಆಲಂಕಾರಿಕರು ಮಾಡಿದ್ದಾರೆ. ಭಾಮಹನಿಂದ ಆರಂಭಿಸಿ ಜಗನ್ನಾಥನವರೆಗೆ ಇವುಗಳ ನಿರೂಪಣೆ ವಿಶದವಾಗಿ ಮೂಡಿಬಂದಿದೆ. ಇವರಿಗಿಂತ ಮೊದಲೇ ಭರತಮುನಿಯೂ ಸಹ ತನ್ನ ನಾಟ್ಯಶಾಸ್ತ್ರದಲ್ಲಿ ಸಂಕ್ಷೇಪವಾಗಿ ಅಲಂಕಾರಗಳ ಬಗ್ಗೆ ಮಾತನಾಡಿದ್ದಾನೆ. ಅಲಂಕಾರಗಳಿಲ್ಲದ ಕಾವ್ಯವು ಸಹೃದಯರಿಗೆ ಸಂತಸವನ್ನು ನೀಡಲಾರದು ಎನ್ನುವುದು ಅನುಭವಿ ಆಲಂಕಾರಿಕರ ಸ್ವಾನುಭವದ ನುಡಿ. ಹೀಗಾಗಿ ಅನೇಕ ಆಲಂಕಾರಿಕರು ಇವುಗಳ ಬಗ್ಗೆ ವಿಸ್ತಾರವಾಗಿ ವಿವೇಚನೆ ಮಾಡಿದ್ದಾರೆ. ಅವರಲ್ಲಿ ಜಯದೇವನೂ ಒಬ್ಬನು. ಜಯದೇವನ ಚಂದ್ರಾಲೋಕ ವೆಂಬ ಗ್ರಂಥವು ಅಲಂಕಾರಶಾಸ್ತ್ರವನ್ನು ಅಧ್ಯಯನ ಮಾಡುವವರಿಗೆ ಚಿರಪರಿಚಿತವಾದ ಗ್ರಂಥ. ಸುಲಭವೂ ಲಲಿತವೂ ಆಗಿರುವ ಈ ಗ್ರಂಥವು ಅಲಂಕಾರಶಾಸ್ತ್ರಗಳನ್ನು ಅಧ್ಯಯನ ಮಾಡುವವರಿಗೆ ಒಂದು ಪ್ರವೇಶ ಗ್ರಂಥವಾಗಿದೆ. ಹದಿಮೂರನೆಯ ಶತಮಾನದ ಜಯದೇವನು ತನ್ನ ಗ್ರಂಥಕ್ಕೆ ಚಂದ್ರಾಲೋಕವೆಂಬ ಹೆಸರನ್ನಿಟ್ಟಿದ್ದಾನೆ. ಚಂದ್ರನ ಆಲೋಕ — ಬೆಳದಿಂಗಳು ಬಿಸಿಲಿನ ತಾಪದಿಂದ ತಪ್ತರಾದ ಜನರಿಗೆ ಶೀತಲತೆಯನ್ನು ಉಂಟುಮಾಡಿ ಆನಂದವನ್ನು ನೀಡುತ್ತದೆ. ಅದರಂತೆ ಈ ಚಂದ್ರಾಲೋಕವೆಂಬ ಕೃತಿಯು ನಿಶಿತಶಾಸ್ತ್ರಗಳ ಅಧ್ಯಯನದಿಂದ ನಿರ್ವಿಣ್ಣರಾದವರಿಗೆ ಆನಂದವನ್ನು ನೀಡುತ್ತದೆ. ಹೀಗಾಗಿ ಈ ಹೆಸರು ಅನ್ವರ್ಥವಾಗಿದೆ. ಜಯದೇವನು ಎಲ್ಲ ಲಕ್ಷಣಕಾರರಂತೆ ತಾನೂ ಸಹ ಕಾವ್ಯದ ವಿವಿಧ ವಿಷಯಗಳನ್ನು ಕೂಲಂಕಷವಾಗಿ ವಿವರಿಸಿದ್ದಾನೆ. ಅದರಲ್ಲಿ ಐದನೆಯ ಮಯೂಖದಲ್ಲಿ ಶಬ್ದಾಲಂಕಾರ ಮತ್ತು ಅರ್ಥಾಲಂಕಾರಗಳನ್ನು ಲಲಿತವೂ ಸುಲಭವೂ ಆದ ಶ್ಲೋಕಗಳಿಂದ ನಿರೂಪಿಸಿದ್ದಾನೆ. ಪೂರ್ವಾರ್ಧ ಲಕ್ಷಣಭಾಗವಾದರೆ ಉತ್ತರಾರ್ಧ ಉದಾಹರಣ

ಭಾಗ. ಉದಾಹರಣೆಗಳು ಹಾಗೂ ಲಕ್ಷಣ ಶ್ಲೋಕಗಳೆಲ್ಲವೂ ಇವನಿಂದಲೇ ಸ್ವತಂತ್ರವಾ/ ರಚಿತವಾಗಿವೆ. ಈ ಅಲಂಕಾರ ಭಾಗವಂತೂ ಸಂಸ್ಕೃತಾಭ್ಯಾಸಿಗಳಾದವರಿಗೆ ಬೇಕೇ ಬೇಕಾಗಿದೆ ಅದರಲ್ಲೂ ಅಲಂಕಾರ ವಿಷಯಗಳನ್ನು ಅರಿಯಲು ಎಲ್ಲರೂ ಇದನ್ನು ಅಭ್ಯಸಿಸುವರು. ಒಟ್ಟು ಒಂದುನೂರು ಅರ್ಥಾಲಂಕಾರಗಳನ್ನು ಪ್ರತಿಪಾದಿಸಿದ್ದಾನೆ. ಇದಕ್ಕೆ ಅಪ್ಪಯ್ಯ ದೀಕ್ಷಿತರ ಕುವಲಯಾನಂದವೆಂಬ ವ್ಯಾಖ್ಯಾನ ಗ್ರಂಥವನ್ನು ರಚಿಸಿದ್ದಾರೆ. ಇಂತಹ ಅಮೂಲ್ಯವಾದ ಚಂದ್ರಾಲೋಕದ ಅಲಂಕಾರಭಾಗವು ಆಗಮಪ್ರವರ ಪರೀಕ್ಷೆಯ ಸಾಹಿತ್ಯ ಪತ್ರಿಕೆಗೆ ಪಾಠ್ಯಗ್ರಂಥವಾಗಿದೆ.

ಚಂದ್ರಾಲೋಕದಂತೆಯೇ ಕಾವ್ಯರಚನೆಗೆ ಅನುಕೂಲವಾಗುವಂತೆ ಛಂದಸ್ಸಿನ ವಿವಿಧ ಬಗೆಯ ವಿಷಯಗಳನ್ನು ನಿರೂಪಿಸುವ ಪುಟ್ಟದಾದ ಛಂದೋಗ್ರಂಥವೆಂದರೆ ಕೇದಾರಭಟ್ಟನ ವೃತ್ತರತ್ನಾಕರ. ಲಘು -ಗುರು -ಗಣಗಳು -ಮಾತ್ರಾ ಛಂದಸ್ಸು-ವರ್ಣ-ಛಂದಸ್ಸು ಸಮ -ಅರ್ಧಸಮ- ವಿಷಮ ವೃತ್ತಗಳು- ಮುಂತಾದವುಗಳನ್ನು ಕ್ಲೇಶವುಂಟಾಗದ ರೀತಿಯಲ್ಲಿ ನೆನಪಿನಲ್ಲಿ ಇಟ್ಟುಕೊಳ್ಳಬಹುದಾದ ತೆರದಲ್ಲಿ ಸರಳವಾಗಿ ಸುಲಭವಾಗಿ ನಿರೂಪಣೆ ಮಾಡುವ ಕೃತಿ ವೃತ್ತರತ್ನಾಕರ. ಇದರ ವಿಶೇಷವೆಂದರೆ ವೃತ್ತಗಳ ಲಕ್ಷಣಗಳನ್ನು ನಿರೂಪಿಸುವ ವಾಕ್ಯವೇ ಉದಾಹರಣೆಯೂ ಆಗುವುದು. ಇಂತಹ ಅದ್ಭುತ ಶೈಲಿಯನ್ನು ಇಲ್ಲಿ ಮಾತ್ರ ಕಾಣಬಹುದು. ಇದೂ ಸಹ ಆಗಮ ಪ್ರವರ ಪರೀಕ್ಷೆಯ ಸಾಹಿತ್ಯ ವಿಭಾಗದ ಪಾಠ್ಯಗ್ರಂಥವಾಗಿರುವುದು ವಿಶೇಷ.

ಈ ಎರಡೂ ಗ್ರಂಥಗಳಿಗೆ ಸಂಸ್ಕೃತದಲ್ಲಿ ಬೇರೆ ಬೇರೆಯವರು ವ್ಯಾಖ್ಯಾನ, ಟೀಕೆಯನ್ನು ಬರೆದಿದ್ದರೂ ಕನ್ನಡದಲ್ಲಿ ಅವುಗಳಿಗೆ ಅನುವಾದ ವಿವರಣೆ ಇತ್ಯಾದಿಗಳನ್ನು ಮಾಡಿರುವವರು ವಿರಳ. ಈ ಹಿಂದೆ ಅಲಂಕಾರ ಶಾಸ್ತ್ರ ಪ್ರಾಧ್ಯಾಪಕರಾಗಿದ್ದ ವಿದ್ವಾನ್ ಜಿ. ವಿಷ್ಣುಮೂರ್ತಿಭಟ್ಟರು ಈ ಎರಡು ಗ್ರಂಥಗಳಿಗೆ ಕನ್ನಡ ಅನುವಾದ ಮಾಡಿದ್ದರು. ಆದರೆ ಈಗ ಆ ಗ್ರಂಥಗಳು ಉಪಲಬ್ಧವಾಗುತ್ತಿಲ್ಲ. ಈ ಅಂಶವನ್ನು ಮನಗಂಡ ಕೆಲವು ಸಹೃದಯಾಸಕ್ತರು ಈ ಎರಡು ಗ್ರಂಥಗಳನ್ನು ಕನ್ನಡಾನುವಾದ ಮಾಡಿಸಿ ಪ್ರಕಟಿಸಲು ತೊಡಗಿರುವುದು ನಿಜಕ್ಕೂ ಶ್ಲಾಘನೀಯ ಕೆಲಸ. ಅದರ ಬಗ್ಗೆ ಒಂದೆರಡು ಒಳ್ಳೆಯ ಮಾತುಗಳನ್ನು ಬರೆಯಲು ನನಗೆ ಹೆಮ್ಮೆ ಎನಿಸುತ್ತದೆ. ಚಂದ್ರಾಲೋಕ ಮತ್ತು ವೃತ್ತರತ್ನಾಕರ ಈ ಎರಡೂ ಗ್ರಂಥಗಳಿಗೆ ಸಂಪೂರ್ಣವಾಗಿ ಕನ್ನಡಾನುವಾದವನ್ನು ಮಾಡಿರುವವರು ನನ್ನ ವಿದ್ಯಾಗುರುಗಳಲ್ಲಿ ಒಬ್ಬರಾದ ವಿದ್ವಾನ್ ಬಿ. ರಾಜಶೇಖರಯ್ಯನವರು. ಇವರು ಅಲಂಕಾರ, ವ್ಯಾಕರಣ, ಜ್ಯೋತಿಷ, ಧರ್ಮಶಾಸ್ತ್ರಗಳಲ್ಲಿ ಉತ್ತಮ ಪಾಂಡಿತ್ಯ — ಪ್ರತಿಭೆಯುಳ್ಳವರು. ಕನ್ನಡ ಸಾಹಿತ್ಯದಲ್ಲೂ ಅಪಾರ ವಿದ್ವತ್ತನ್ನು ಸಂಪಾದಿಸಿರುವವರು. ಬಿಎಸ್‌ಸಿ ಪದವೀಧರರು. ಇಂಗ್ಲೀಷ್ ಹಿಂದಿ ಭಾಷೆಗಳನ್ನೂ ಚೆನ್ನಾಗಿ ಅರಿತವರು. ಸಂಸ್ಕೃತದಲ್ಲಿ ಪರಿಪೂರ್ಣ ಪಾಂಡಿತ್ಯವನ್ನು ಪಡೆದಿರುವವರಲ್ಲಿ ಒಬ್ಬರು. ಇವರು ಮೈಸೂರು ಮಹಾರಾಜ ಸಂಸ್ಕೃತ ಕಾಲೇಜಿನಲ್ಲಿ ಅಲಂಕಾರ ಶಾಸ್ತ್ರ ಪ್ರಾಧ್ಯಾಪಕರಾಗಿದ್ದು ಈಗ ನಿವೃತ್ತರಾಗಿದ್ದಾರೆ. ನಿವೃತ್ತರಾದರೂ ಇವರ ಸಾಹಿತ್ಯಕೃಷಿ ನಿಂತಿಲ್ಲ. ಕುವಲಯಾನಂದ, ರಸಗಂಗಾಧರದಂತಹ ಉದ್ಗ್ರಂಥಗಳಿಗೆ ಕನ್ನಡದಲ್ಲಿ ಉತ್ತಮ ವ್ಯಾಖ್ಯಾನವನ್ನು ರಚಿಸಿದ್ದಾರೆ. ಅವು ಮುದ್ರಣವಾಗಬೇಕಿದೆ. ಇಂತಹ ಪ್ರತಿಭಾನ್ವಿತ ವಿದ್ವಾಂಸರು ಸಂಸ್ಕೃತ ಸಾಹಿತ್ಯಾಭ್ಯಾಸಿಗಳಾದ ವಿದ್ಯಾರ್ಥಿಗಳಿಗೆ ಅನುಕೂಲವಾಗಲೆಂದು ಈ ಎರಡೂ ಕೃತಿಗಳಿಗೆ

ಕನ್ನಡಾನುವಾದವನ್ನು ಮಾಡಿ ಕನ್ನಡಿಗರಿಗೆ ಮಹದುಪಕಾರ ಮಾಡಿದ್ದಾರೆ.

ಚಂದ್ರಾಲೋಕ ವೃತ್ತರತ್ನಾಕರಗಳಿಗೆ ಇವರು ರಚಿಸಿರುವ ಕನ್ನಡಾನುವಾದ ಟೀಕೆ—ಟಿಪ್ಪಣಿಗಳು ಬಹು ಉಪಯುಕ್ತವಾಗಿ ಚಿಕ್ಕದಾಗಿ, ಚೊಕ್ಕವಾಗಿ, ಸರಳವಾಗಿ, ಸುಲಭವಾಗಿ ವಿದ್ಯಾರ್ಥಿಗಳಿಗೆ ಅರ್ಥವಾಗುವಂತೆ ಇರುವುದು ಪ್ರಶಂಸಾರ್ಹವಾದುದು. ವಿದ್ಯಾರ್ಥಿಗಳಿಗೆ ಸುಮಾರು 35ವರ್ಷಗಳಿಗಿಂತಲೂ ಹೆಚ್ಚು ವರ್ಷಗಳ ಕಾಲ ಪಾಠ ಮಾಡಿದ ಅನುಭವವಿರುವ ಕಾರಣ ವಿದ್ಯಾರ್ಥಿಗಳಿಗೆ ಅಷ್ಟೇ ಅಲ್ಲ ಹೊಸದಾಗಿ ಅಲಂಕಾರ ಛಂದಸ್ಸುಗಳನ್ನು ಅರಿಯುವಂತಹವರಿಗೂ ಅರ್ಥವಾಗುವಂತೆ ಕನ್ನಡಾನುವಾದ ಮಾಡಿದ್ದಾರೆ. ಸುಲಭವಾಗಿ ವಿವರಣೆ ನೀಡಿದ್ದಾರೆ. ಎಲ್ಲ ಅಂಶಗಳನ್ನೂ ಸ್ಪಷ್ಟವಾಗಿ ಚೆನ್ನಾಗಿ ನಿರೂಪಿಸಿದ್ದಾರೆ. ಪ್ರಾರಂಭದಲ್ಲಿ ಗ್ರಂಥಕಾರರ ಬಗ್ಗೆ ಚಿಕ್ಕದಾಗಿ ವಿವರಣೆಯನ್ನೂ ನೀಡಿ ಕೃತಿಗಳ ಪರಿಚಯವನ್ನೂ ಮಾಡಿಕೊಟ್ಟಿದ್ದಾರೆ. ನಿಜಕ್ಕೂ ಕನ್ನಡದಲ್ಲಿ ಇದು ಅಪರೂಪದ ಕೃ... ಇದನ್ನು ರಚಿಸಿದಂತಹ ವಿದ್ವಾನ್ ಬಿ. ರಾಜಶೇಖರಯ್ಯನವರು ಅಭಿನಂದನಾರ್ಹರು ಹಾಗೂ ಅಭಿವಂದನಾರ್ಹರು. ನನಗೆ ಗುರುಗಳಾಗಿದ್ದರೆಂದು ಹೇಳಿಕೊಳ್ಳಲು ನನಗೆ ತುಂಬಾ ಸಂತೋಷವಾಗುವುದು. ಅವರಿಂದ ಇಂತಹ ಇನ್ನೂ ಅನೇಕ ಸಂಸ್ಕೃತ ಕೃತಿಗಳು ಕನ್ನಡಕ್ಕೆ ಬರಲೆಂದು ಭಗವಂತನಲ್ಲಿ ಪ್ರಾರ್ಥಿಸುವೆ. ನನ್ನ ಗುರುಗಳಿಗೆ ಪರಮಾತ್ಮನು ಸಂಪದಾದಿ ಸಕಲ ಸನ್ಮಂಗಳಗಳನ್ನು ನೀಡಿ ಸಲಹಲಿ ಎಂದು ಬೇಡುವೆ.

ಈ ಎರಡೂ ಕೃತಿಗಳ ಕನ್ನಡಾನುವಾದವನ್ನು ಒಂದೆಡೆ ಸೇರಿಸಿ ಒಂದು ಕೃತಿಯನ್ನಾಗಿ ಮಾಡಿ ಪ್ರಕಟಿಸಿರುವಂತವರು ಮಹಾರಾಜ ಸಂಸ್ಕೃತ ಕಾಲೇಜಿನ ಶೈವಾಗಮ ಪ್ರಾಧ್ಯಾಪಕರಾದ ಆಗಮ ಪ್ರವೀಣ ವಿದ್ವಾನ್ ಎಮ್. ಮಲ್ಲಣ್ಣನವರು. ಇವರು ನನ್ನ ಆತ್ಮೀಯ ಸ್ನೇಹಿತರು, ಮೈಸೂರು ಮಹಾರಾಜ ಸಂಸ್ಕೃತ ಕಾಲೇಜಿನಲ್ಲಿ ಒಟ್ಟಾಗಿ ಓದಿದವರು ನಾವಿಬ್ಬರು. ಆ ಕಾಲದಿಂದಲೂ ನಮ್ಮಿಬ್ಬರಲ್ಲಿ ಆತ್ಮೀಯತೆ — ಪ್ರೀತಿ ನೆಲಸಿವೆ. ನಾವಿಬ್ಬರು ಅಕ್ಕಪಕ್ಕದ ಊರಿನವರು ಎನ್ನುವುದೂ ವಿಶೇಷ. ಶ್ರೀಯುತ ಮಲ್ಲಣ್ಣನವರು ಶೈವಾಗಮವನ್ನು ಚೆನ್ನಾಗಿ ಅಧ್ಯಯನ ಮಾಡಿ ತಲಸ್ಪರ್ಶಿ ಪಾಂಡಿತ್ಯ ಪಡೆದು ವಿದ್ಯಾರ್ಥಿಗಳಿಗೆ ಬೋಧನೆ ಮಾಡುತ್ತಿದ್ದಾರೆ. ಶೈವಾಗಮಸಾರ ಮೊದಲಾದ ಆಗಮ ಗ್ರಂಥಗಳನ್ನು ಕನ್ನಡಕ್ಕೆ ತಂದಿದ್ದಾರೆ. ತಮ್ಮದೇ ಆದ ಪ್ರಕಾಶನ ಸಂಸ್ಥೆಯೊಂದನ್ನು ಹುಟ್ಟುಹಾಕಿ ಉಪಯುಕ್ತ ಗ್ರಂಥಗಳನ್ನು ಕನ್ನಡಕ್ಕೆ ತರುವ ಕೆಲಸ ಮಾಡುತ್ತಿದ್ದಾರೆ. ಅಂತಹ ಮಲ್ಲಣ್ಣನವರು ಈ ಕೃತಿಯನ್ನು ಪ್ರಕಾಶನ ಮಾಡಿ ಮುದ್ರಿಸಿರುವುದು ಸಂಸ್ಕೃತ ಸಾಹಿತ್ಯಾಭ್ಯಾಸಿಗಳಿಗೆ ಅಷ್ಟೇ ಅಲ್ಲ, ಎಲ್ಲ ಸಂಸ್ಕೃತಾಭ್ಯಾಸಿಗಳಿಗೂ ಹಾಗೂ ಕನ್ನಡಿಗರಿಗೂ ಮಹದುಪಕಾರವಾಗಿದೆ. ಈ ಕಾರ್ಯವನ್ನು ಮಾಡಿರುವ ಶ್ರೀಯುತ ಮಲ್ಲಣ್ಣನವರೂ ಸಪ ಅಭಿನಂದನಾರ್ಹರು, ಇವರಿಂದ ಇನ್ನೂ ಅನೇಕ ಕೃತಿಗಳು ಪ್ರಕಟವಾಗಲಿ ಎಂದು ಹಾರೈಸುವೆ. ಭಗವಂತನು ಇವರಿಗೆ ಸಕಲ ಶ್ರೇಯಸ್ಸನ್ನೂ ನೀಡಲೆಂದು ಪ್ರಾರ್ಥಿಸುವೆ.

ನಮ್ಮ ಗುರುಗಳಿಂದ ಅನುವಾದಗೊಂಡಿರುವ ಈ ಕೃತಿಗೆ ಸನ್ನುಡಿಯನ್ನು ಬರೆಯಲು ಅವಕಾಶ ಮಾಡಿಕೊಟ್ಟ ಶ್ರೀಯುತ ಮಲ್ಲಣ್ಣನವರಿಗೆ ನನ್ನ ಹೃದಯಭರಿತವಾದ ನಮನಗಳನ್ನು ಸಲ್ಲಿಸುವೆ. ನನ್ನ ಗುರುಗಳ ಈ ಕೃತಿಯನ್ನು ವಿಮರ್ಶಿಸುವ ಶಕ್ತಿ ನನಗಿಲ್ಲ. ಆದರೆ ಅವರು ನೀಡಿರುವ ಜ್ಞಾನದ ಬೆಳಕಿನಿಂದ ಇಲ್ಲಿನ ವಿಷಯಗಳನ್ನು ಜನತೆಗೆ ನೀಡುವ ಸಾಮರ್ಥ್ಯವನ್ನು ಪಡೆದಿರುವೆ. ಅದಕ್ಕಾಗಿ ಆ ಗುರುವಿನ ಪದತಲದಲ್ಲಿ ಸಹಸ್ರ ಪ್ರಣಾಮಗಳು.

ಟಿ.ವಿ. ಸತ್ಯನಾರಾಯಣ

# ಅಭಿಪ್ರಾಯ

ವಿದ್ವಾನ್. ಡಾ|| ಕೆ.ಎಲ್. ಶಂಕರನಾರಾಯಣ ಜೋಯ್ಸ್
ಎಂ.ಎ., ಪಿ.ಎಚ್.ಡಿ
ಉಪಪ್ರಾಧ್ಯಾಪಕರು, ಅಲಂಕಾರ ವಿಭಾಗ, ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು.

ಜೀವನದ ಧ್ಯೇಯ ಧೋರಣೆ ಹಾಗೂ ಸರಣಿ ಬದಲಾಗಿರುವ ಮತ್ತು ದಿನೇ ದಿನೇ ಬದಲಾಗುತ್ತಿರುವ ಈ ದಿನಗಳಲ್ಲಿ, ಹೊಸನೀರು ಬಂದು ಹಳೆನೀರು ಕೊಚ್ಚಿ ಹೋಯಿತೆಂಬ ಗಾದೆಯಂತೆ 'ಹಳತು'ವಿನ ಪಟ್ಟಿಯಲ್ಲಿ ಸೇರಿಕೊಂಡ ವೇದ ಶಾಸ್ತ್ರ ಮೊದಲಾದವುಗಳು ಮೂಲೆ ಪಾಲಾಗಿವೆಯೆಂದರೆ ತಪ್ಪಾಗಲಾರದು. ಆದರೆ ಭಾರತೀಯರ ನರನಾಡಿಗಳಲ್ಲಿ ಓತಪ್ರೋತ ವಾಗಿ ಸೇರಿಕೊಂಡ ಹಾಗೂ ಮಾನವನಷ್ಟೇ ಪ್ರಾಚೀನವಾಗಿ ಬಹುದೊಡ್ಡ ಐತಿಹ್ಯವನ್ನು ಹಿನ್ನೆಲೆ ಯಾಗಿ ಉಳ್ಳ ಈ ವೇದ ಶಾಸ್ತ್ರಗಳಿಗೆ ಮುಪ್ಪು ಮರಣಗಳ ಹಾವಳಿಯಿರಲಾರದು. ಮಹಾ ವಟವೃಕ್ಷದಂತೆ ಒಂದೆಡೆ ಮುಪ್ಪಾಯಿತೆನಿಸುವ ವೇಳೆಗೆ ಇನ್ನೊಂದೆಡೆ ಬೇರುಬಿಟ್ಟು ತನ್ನ ನೆಲೆಯನ್ನು ಭದ್ರಪಡಿಸಿಕೊಂಡೇ ಇರುತ್ತವೆ. ಏರಿಳಿತಗಳ ತವರಾದ ಈ ಪ್ರಪಂಚದಲ್ಲಿ ಒಮ್ಮೆ ಮುಳಿಗಿಯೇ ಹೋಯಿತೆಂಬ ಆತಂಕ ಬಂದೊದಗಿದ್ದರೂ ಇನ್ನೊಂದು ಕಾಲಘಟ್ಟದಲ್ಲಿ ಪ್ರಕೃತಿಗರ್ಭದಿಂದ ಮತ್ತೆ ನೂರ್ಮಡಿಯಾಗಿ ಚಿಗುರಿ ಅಜರಾಮರವಾದ ತನ್ನತನವನ್ನು ತೋರದೆ ಬಿಡವು.

ಈಚಿನ ದಿನಗಳಲ್ಲಿ ಕಂಡುಬರುವುದೇನು ? ಆಧುನಿಕ ಜೀವನ ಸರಣಿಯಲ್ಲಿ ನಾಗಾಲೋಟ ದಿಂದ ಮುಂದುವರೆದ ಜನಸ್ತೋಮ ನೆಮ್ಮದಿಯ ನೆಲೆಗಾಣದೆ ಬಸವಳಿದು ಹಿನ್ನೋಟದಿಂದೊಮ್ಮೆ ನೋಡಲಾರಂಭಿಸಿದೆ! ವೇದ ಶಾಸ್ತ್ರ ಇತಿಹಾಸ ಕಾವ್ಯಗಳತ್ತ ಅಕ್ಕರೆಯ ನೋಟವು ಅಲ್ಲಲ್ಲಿ ಪ್ರಪಂಚದ ಮೂಲೆ ಮೂಲೆಗಳಲ್ಲಿ ಪಸರಿಸದಿಲ್ಲ. ಭಾರತೀಯ ಋಷಿ ಮಹರ್ಷಿಗಳು ಯೋಗದೃಷ್ಟಿಯಿಂದ ಅನ್ವೇಷಿಸಿ ಹೊರತಂದ ವಿದ್ಯೆಗಳ ಬಗ್ಗೆ ಕೌತುಕ ತಲೆ ಎತ್ತದಿಲ್ಲ. ಆ ಕೌತುಕ ಹೊಸ ಮುಖದಲ್ಲಿ ಮೈತಳೆದುಬಂದಾಗ ಅದರಲ್ಲೊಂದು ನವೀನತೆಯ ಮೆರಗು. ನಿತ್ಯನೂತನವಾದ ಭಾರತೀಯರ ಸಾಹಿತ್ಯಕ್ಕೆ ಹೊಸ ಮುಖದ ಅವಶ್ಯಕತೆಯಿಲ್ಲವಾದರೂ ಹೊಸತಿನ ಗೀಳಿನಲ್ಲಿ ಮೈಮರೆವ ಜನತೆಗೆ ಅದು ಅನಿವಾರ್ಯ.

ಪ್ರಕೃತ ಇಂದು ಸಂಸ್ಕೃತ ಶಿಕ್ಷಣಕ್ಷೇತ್ರ ಕಾಲದ ಪ್ರಭಾವದಂತೆ ಕೆಲವಾರು ಹೊಸ ಮಾರ್ಪಾಟುಗಳೊಡನೆ ಅಲ್ಲಲ್ಲಿ ಹೆಜ್ಜೆಹಾಕುತ್ತಿದೆ. 'ಆಡು ಸಂಸ್ಕೃತ ಹಾಡು ಸಂಸ್ಕೃತ' ಎಂಬ ಘೋಷದೊಂದಿಗೆ ಮನೆ ಮನೆಗೂ ಬಂದು ತಲುಪುವ ಸನ್ನಾಹದಿಂದ ಕೂಡಿದೆ. ಅಮೇರಿಕಾ, ಇಂಗ್ಲೆಂಡ್, ಜರ್ಮನಿಯಂತಹ, ವೈಜ್ಞಾನಿಕ ಶೋಧನೆಗಳಲ್ಲಿ ಮುಂದುವರೆದ ರಾಷ್ಟ್ರಗಳಲ್ಲೂ ಆಯುರ್ವೇದ, ಯೋಗ, ಜ್ಯೋತಿಷ, ಅರ್ಥಶಾಸ್ತ್ರ ಮೊದಲಾದ ಆರ್ಷವಿದ್ಯೆಗಳ ಬಗ್ಗೆ ಆಸಕ್ತಿಯ ಅಲೆ ತಲೆದೋರಿದೆ. ಹೊಸ ಮಾದರಿಯ ಇಂದಿನ ಈ ಶಿಕ್ಷಣಕ್ರಮ ಸಂಪ್ರದಾಯದ ಅಚ್ಚಿನಲ್ಲಿ

ಹೊರಬಂದವರಿಗೆ ಒಮ್ಮೆ ಸಲ್ಲದ ವಸ್ತುವಾಗಬಹುದಾದರೂ ಅದು ಅನಿವಾರ್ಯ. ಹಿಂದಿನಂತೆ ಸುದೀರ್ಘಕಾಲ ಗುರುಮುಖೇನ ವಿದ್ಯಾಧ್ಯಯನ ಮಾಡುವ ಪರಿಸ್ಥಿತಿಯಿಂದು ದುರ್ಭರ ಇಂತಹ ಕಾಲಘಟ್ಟದಲ್ಲಿ ಯತ್ಕಿಂಚಿತ್ತಾದರೂ ವೇದ ಶಾಸ್ತ್ರಾದಿ ವಿದ್ಯೆಗಳ ಬಗ್ಗೆ ಜನಗಳ ಅಭಿರುಚಿ ಉಳಿಯಬೇಕಾದರೆ ಸುಲಭೋಪಾಯಗಳನ್ನು ಚಿಂತಿಸಲೇಬೇಕು. ಅದರ ಹೆಜ್ಜೆಯಾಗಿ ಶಾಸ್ತ್ರ ಗ್ರಂಥಗಳ ಭಾಷಾಂತರ ಸ್ವಾಗತಾರ್ಹವಾಗಿದೆಯಷ್ಟೆ.

ಸಾಹಿತ್ಯ ವಿದ್ಯೆಯ ಅವಯವವಾದ ಅಲಂಕಾರ ಮತ್ತು ಛಂದಸ್ಸುಗಳನ್ನು ಕುರಿತು ಸಂಸ್ಕೃತ ಮೂಲಗ್ರಂಥದ ಕನ್ನಡ ಭಾಷಾನುವಾದ ಈ ಹೊತ್ತಗೆ ಚಂದ್ರಾಲೋಕ ಮತ್ತು ವೃತ್ತರತ್ನಾಕರ ಸಮಯೋಚಿತವಾದ ಕೊಡುಗೆಯಾಗಿದೆ.

ವಿದ್ವಾನ್ ಬಿ. ರಾಜಶೇಖರಯ್ಯನವರು ಸ್ವತಃ ಅಲಂಕಾರಶಾಸ್ತ್ರದಲ್ಲಿ ಅಧ್ಯಾಪಕರಾಗಿಯೂ ಪ್ರಾಧ್ಯಾಪಕರಾಗಿಯೂ ಸುದೀರ್ಘಕಾಲದ ಸೇವೆಸಲ್ಲಿಸಿದವರು. ಶ್ರೀಯುತರು ಕನ್ನಡ ಹಿಂದಿ ಭಾಷೆಗಳಲ್ಲೂ ಪಂಡಿತರಾಗಿದ್ದು ಹೆಚ್ಚಿನ ಪರಿಣತಿಯುಳ್ಳವರು. ಅವರ ದೀರ್ಘಕಾಲದ ಅಧ್ಯಯನ ಅಧ್ಯಾಪನಗಳ ಫಲಿತವನ್ನು ಅವರ ಬರಹದಲ್ಲಿ ಸಹೃದಯರು ಮನಗಾಣಬಹುದಾಗಿದೆ. ಸರಳವೂ, ಸುಂದರವೂ ಆದ ಭಾಷೆ, ಸ್ಫುಟವಾದ ಬರಹ ವಿಧಾನವು ಅನಾಯಾಸವಾಗಿ ವಿಷಯ ಪ್ರವೇಶವನ್ನು ಮಾಡಿಸುವುದು. ಸಂಸ್ಕೃತ ಪದಪ್ರಯೋಗಗಳು ಇಂತಹ ಶಾಸ್ತ್ರಗ್ರಂಥಗಳ ನಿರೂಪಣೆಗೆ ಅನಿವಾರ್ಯವಾದರೂ ಶ್ರೀಯುತರು ಜನಸಾಮಾನ್ಯರ ಬುದ್ಧಿಯ ಮಟ್ಟಕ್ಕೆ ಎಟಕುವಂತೆ ಸಾಕಷ್ಟು ಸಾರಳ್ಯವನ್ನು ತರುವುದರಲ್ಲಿ ಯಶಸ್ವಿಯಾಗಿದ್ದಾರೆ. ಸಂಕ್ಷೇಪ ವಿಸ್ತಾರವಾದ ವಿವರಣೆಗಳಿಂದ ಕೂಡಿದ ಅವರ ಬರಹ ಇಂದಿನ ಜಿಜ್ಞಾಸುಗಳಾದ ವಿದ್ಯಾರ್ಥಿಗಳಿಗೆ ಪ್ರವೇಶ ಸೌಕರ್ಯವನ್ನುಂಟು ಮಾಡಿದೆಯೆಂಬುದರಲ್ಲಿ ಯಾವ ಸಂಶಯಕ್ಕೂ ಎಡೆಯಿಲ್ಲ.

ಬಹುಕಾಲದಿಂದ ಸಂಸ್ಕೃತ ಕ್ಷೇತ್ರದಲ್ಲಿದ್ದ ಈ ವರ್ಗದ ಅನುವಾದ ಗ್ರಂಥದ ಕೊರತೆಯನ್ನು ಈ ಹೊತ್ತಗೆ ಒಂದು ದೃಷ್ಟಿಯಿಂದ ಬಗೆಹರಿಸಬಹುದೆಂದು ಅನ್ನಿಸಿದೆ. ಸಾಹಿತ್ಯಾಭ್ಯಾಸಿಗಳೂ, ಅಭಿಮಾನಿಗಳೂ ಮಾತ್ರವಲ್ಲದೆ ವಿದ್ವಾಂಸರೂ ಸಹ ಈ ಹೊತ್ತಗೆಗೆ ತಮ್ಮ ತುಂಬು ಹೃದಯದ ಸ್ವಾಗತವನ್ನು ನೀಡುವರೆಂದು ಭಾವಿಸಿದ್ದೇನೆ. ಸಂಸ್ಕೃತ ಮೂಲದ ಇನ್ನೂ ಹಲವು ಗ್ರಂಥಗಳು ಇದೇ ಸರಣಿಯಲ್ಲಿ ಕನ್ನಡ ಭಾಷೆಯಲ್ಲಿ ಅನುವಾದಗೊಂಡು ಕನ್ನಡಿಗರ ಕಣ್ಣುಗಳಿಗೆ ಶಾಸ್ತ್ರಗಳ ಸಿರಿಯು ಗೋಚರಿಸುವಂತೆ ಶ್ರೀಯುತರಿಂದ ಆಗಬೇಕೆಂದು ಹಾರ್ದಿಕವಾಗಿ ಬಯಸುವ

*ತಮ್ಮ ವಿಶ್ವಾಸಿ*

ಶಂಕರನಾರಾಯಣ ಜೋಯ್ಸ್

# ಶುಭ ಹಾರೈಕೆ

ವಿದ್ವಾನ್. ಕೆ.ಎಸ್. ವೆಂಕಟಾಚಾರಿ ಎಂ.ಎ. ಬಿ.ಎಡ್.
ಪ್ರಾಂಶುಪಾಲರು, ಸರ್ಕಾರಿ ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು

"ಶ್ರೀ ಮಲ್ಲಿಕಾರ್ಜುನ ಗ್ರಂಥ ಪ್ರಕಾಶನ" ದವರು ಸಂಸ್ಕೃತ ಸಾಹಿತ್ಯದ ಅತ್ಯಮೂಲ್ಯ ಕೃತಿಗಳಾದ "ಚಂದ್ರಾಲೋಕ" ಹಾಗೂ 'ವೃತ್ತರತ್ನಾಕರ" ವನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಾಶಿಸುತ್ತಿರುವುದು ಅತ್ಯಂತ ಸ್ತುತ್ಯಕೃತ್ಯ. ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಇಂಥಹ ಅನುವಾದಗಳ ಪ್ರಕಾಶನವನ್ನು ಆದ್ಯತೆಯ ಮೇರೆಗೆ ಮಾಡಬೇಕಾಗಿದೆ. ವಿದ್ವಾಂಸರೂ, ಬೋಧನಾನುಭವಿಗಳೂ ಆದ ಶ್ರೀ ಬಿ. ರಾಜಶೇಖರಯ್ಯನವರಂಥವರಿಂದ ಮಾತ್ರವೇ ಇಂಥ ಕೃತಿಗಳ ರಚನೆಯು ಸಾಧ್ಯವಾಗುತ್ತದೆ. ಅಂತಹ ವಿದ್ವಾಂಸರನ್ನು ಗುರುತಿಸಿ, ಅವರನ್ನು ಗೌರವಿಸುವ ಹಾಗೂ ಅವರ ಕೃತಿಗಳನ್ನು ಪ್ರಕಾಶಿಸುವ ಕಾರ್ಯವನ್ನು ಪ್ರಕಾಶಕರು ಕೈಗೊಂಡು ವಿದ್ವಾಂಸರಿಗೂ ವಿದ್ಯಾರ್ಥಿಗಳಿಗೂ ನ್ಯಾಯ ಒದಗಿಸಿದ್ದಾರೆ. ಸರಳ ಕನ್ನಡದಲ್ಲಿ ಮೂಲಗ್ರಂಥದ ಸಾರವನ್ನು ಈ ಕೃತಿಯಲ್ಲಿ ನೀಡಿದ್ದಾರೆ. ಇದನ್ನು ಸಾರಸ್ವತ ವರ್ಗವು ಸವಿಯಲಿ, ಹಾಗೂ ಸಹೃದಯ ವಿದ್ವಾಂಸರಿಂದ ಇಂಥ ಕೃತಿಗಳು ಹೊರಹೊಮ್ಮುತ್ತಿರಲಿ. ಶ್ರೀ ಮಲ್ಲಿಕಾರ್ಜುನ ಗ್ರಂಥ ಪ್ರಕಾಶನವು ಇಂಥಹ ಕೃತಿಗಳನ್ನು ಮುಂದೆಯೂ ಪ್ರಕಾಶಿಸಲಿ ಎಂದು ನಾನು ಹಾರೈಸುತ್ತೇನೆ.

ಇತಿ

ಕೆ.ಎಸ್. ವೆಂಕಟಾಚಾರಿ

ooooooo

# ಕೃತಜ್ಞತೆಗಳು

ಕಾರ್ಯಕ್ಕೆ ಕಾರಣ ಅನಿವಾರ್ಯ. ಒಂದೆಕಾರಣ ಅಥವಾ ಹಲವು ಕಾರಣಗಳಿರಬೇಕೆಂದು ಚಿಂತಕರ ಅಭಿಪ್ರಾಯವಾಗಿದೆ. ಆದರೆ ಕಾರಣ ಕಾರ್ಯಗಳಿಗೆ ಪ್ರೇರಕಶಕ್ತಿ ಅಥವಾ ಕಾಣದ ಕೈಗಳ ವರದಹಸ್ತ ಸತ್‌ಕಾರ್ಯಗಳಿಗೆ ಇದೆ ಎಂಬುದು ಧರ್ಮವಂತರ ನಂಬಿಕೆ. ಏನೇ ಇರಲಿ, ಒಂದು ಒಳ್ಳೆಯ ಕಾರ್ಯ ಆಗಬೇಕಾದರೆ ಹಲವು ಕೈಗಳು ಅಲ್ಲಿ ಕೆಲಸ ಮಾಡಿವೆ ಎಂದರೆ ಆಶ್ಚರ್ಯವಿಲ್ಲ. ನಮ್ಮ ಹಲವು ವರ್ಷಗಳ ಬಯಕೆ ಹಾಗೂ ವಿದ್ಯಾರ್ಥಿಗಳಿಗೆ ಪಠ್ಯಗ್ರಂಥಗಳ ಅಭಾವವೇ ಮೊದಲಾದ ಹಲವು ಕಾರಣಗಳು ಇದ್ದಾಗ್ಯೂ ನೈಜವಾದ ಸತ್ಕಾರ್ಯ ಆಗುವುದರಲ್ಲಿ ದೈವದ ಕೃಪಾದೃಷ್ಟಿ ಇದೆ. ಅಥವಾ ಇರಲೇ ಬೇಕೆಂಬುದು ಅನುಭಾವಿಗಳ ಸೂಳ್ನುಡಿ.

ಪ್ರಕೃತ ಚಂದ್ರಾಲೋಕ ಮತ್ತು ವೃತ್ತರತ್ನಾಕರ ಎಂಬ ಎರಡು ಸಾಹಿತ್ಯದ ಲಕ್ಷಣ ಗ್ರಂಥಗಳು. ಆಗಮ ಪ್ರವರ ತರಗತಿಯ ಪಠ್ಯಗ್ರಂಥಗಳಾಗಿವೆ. ಇವೆರಡರ ಕನ್ನಡ ಅನುವಾದ ಸಮೇತ ಮುದ್ರಿಸಬೇಕೆಂಬ ಆಸೆಗೆ ತಕ್ಕಂತೆ ನಮ್ಮ ಸಂಸ್ಕೃತ ಕಾಲೇಜಿನಲ್ಲಿ ಅಲಂಕಾರಶಾಸ್ತ್ರದ

ಪ್ರಾಧ್ಯಾಪಕರಾಗಿದ್ದ ಪೂಜ್ಯ ವಿದ್ವಾನ್ ಬಿ. ರಾಜಶೇಖರಯ್ಯರವರನ್ನು ಕೇಳಿಕೊಂಡಾಗ ಅವರು ಒಪ್ಪಿ ಒಂದೇ ತಿಂಗಳಿನಲ್ಲಿ ತಮ್ಮ ವಿದ್ವತ್ ಪೂರ್ಣವಾದ ಅನುಭವದಿಂದ ಸರಳ ಕನ್ನಡದಲ್ಲಿ ಸಾಮಾನ್ಯನಿಗೂ ಅರ್ಥವಾಗುವ ರೀತಿಯಲ್ಲಿ ಅನುವಾದ ಮಾಡಿದ್ದಾರೆ. ಇವರನ್ನು ಶ್ರೀಮಲ್ಲಿಕಾರ್ಜುನಗ್ರಂಥ ಪ್ರಕಾಶನ ಸಂಸ್ಥೆ ಹಾಗೂ ಸಾಹಿತ್ಯಲೋಕ ಎಂದೆಂದಿಗೂ ಮರೆಯುವಂತಿಲ್ಲ. ಅವರಿಗೆ ನಾನು ಚಿರಋಣಿಯಾಗಿದ್ದೇನೆ. ಈ ಸುವರ್ಣ ಕುಸುಮಕ್ಕೆ ಸುಗಂಧವನ್ನು ನೀಡುವ ರೀತಿಯಲ್ಲಿ ಸಂಸ್ಕೃತ ಭಾಷೆಯ ಖ್ಯಾತ ವಿದ್ವಾಂಸರಾದ ಮಾನ್ಯ ಶ್ರೀ ವಿದ್ವಾನ್ ಎಚ್.ವಿ. ನಾಗರಾಜರಾವ್‌ರವರು ಮುನ್ನುಡಿ ನೀಡಿದ್ದಾರೆ. ಅವರಿಗೆ ಅನೇಕ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಈ ಗ್ರಂಥವನ್ನು ಆಮೂಲಾಗ್ರ ಪರಿಶೀಲಿಸಿ ತಮ್ಮ ಅಭಿಪ್ರಾಯವನ್ನು ನೀಡಿದ ನಮ್ಮ ಸಂಸ್ಕೃತ ಕಾಲೇಜಿನ ಅಲಂಕಾರಶಾಸ್ತ್ರದ ಪ್ರಾಧ್ಯಾಪಕರೂ ಯೋಗಾದಿ ಪ್ರಾಚೀನ ಸಂಸ್ಕೃತ ಸಾಹಿತ್ಯದ ಖ್ಯಾತ ವಿದ್ವಾಂಸರೂ ಆದ ವಿದ್ವಾನ್ ಡಾ|| ಕೆ.ಎಲ್. ಶಂಕರನಾರಾಯಣಜೋಯ್ಸರವರಿಗೆ ಅನೇಕ ನಮನಗಳನ್ನು ಅರ್ಪಿಸುತ್ತೇನೆ. ನನ್ನ ಆತ್ಮೀಯ ಸ್ನೇಹಿತರಾದ ವೇದ, ಅಲಂಕಾರ-ವ್ಯಾಕರಣಾದಿ ಶಾಸ್ತ್ರಗಳಲ್ಲಿ ನಿಷ್ಣಾತರಾದ ವಿದ್ವಾನ್ ಡಾ|| ಟಿ.ವಿ. ಸತ್ಯನಾರಾಯಣ ಹಿರಿಯ ಸಂಶೋಧಕರು ಪ್ರಾಚ್ಯವಿದ್ಯಾ ಸಂಶೋಧನಾಲಯ ಮೈಸೂರು ಇವರು ಈ ಗ್ರಂಥವನ್ನು ಪರಿಶೀಲಿಸಿ ಗ್ರಂಥದ ಸೊಗಸನ್ನು ತಮ್ಮ "ಸನ್ನುಡಿ"ಯಿಂದ ಹೆಚ್ಚಿಸಿದ್ದಾರೆ. ಇವರಿಗೆ ಅನಂತ ನಮನಗಳು, ಅದರಂತೆ ನಮ್ಮ ಸಂಸ್ಕೃತ ಕಾಲೇಜಿನ ವ್ಯಾಕರಣ ವಿಭಾಗದ ಪ್ರಾಧ್ಯಾಪಕರು, ಪ್ರಾಂಶುಪಾಲರಾದ ವಿದ್ವಾನ್ ಕೆ.ಎಸ್. ವೆಂಕಟಚಾರಿಯವರು ತಮ್ಮ ಅಮೂಲ್ಯವಾದ "ಶುಭ ಹಾರೈಕೆ"ಯನ್ನು ನೀಡಿ ಪ್ರಕಾಶನ ಸಂಸ್ಥೆಯನ್ನು ಹರಸಿದ್ದಾರೆ. ಇವರಿಗೆ ಪ್ರಕಾಶನದವರ ಪರವಾಗಿ ಹಾರ್ದಿಕ ನಮನಗಳನ್ನು ಅರ್ಪಿಸುತ್ತೇನೆ. ಈ ಸಾಹಿತ್ಯ ಗ್ರಂಥವು ಪ್ರಕಾಶಗೊಳ್ಳಲು ನಮ್ಮ ಶ್ರೀಮಲ್ಲಿಕಾರ್ಜುನ ಪ್ರಕಾಶನ ಸಂಸ್ಥೆಯ ಜೊತೆಯಲ್ಲಿ ನಮ್ಮ ಕಾಲೇಜಿನಲ್ಲಿರುವ ವಿದ್ವಾನ್ ಬಿ. ರಾಜಶೇಖರಯ್ಯ ಸನ್ಮಾನ ಸಮಿತಿಯು ಸಹಕಾರ ನೀಡಿ ಇದಷ್ಟುಬೇಗ ಮುದ್ರಣ ಮಾಡಿಸಲು ಪ್ರೇರಕವಾಗಿದೆ. ಅದರ ಎಲ್ಲಾ ಪದಾಧಿಕಾರಿಗಳಿಗೂ ನಮಸ್ಕರಿಸುತ್ತೇನೆ.

ಈ ಗ್ರಂಥ ಇಷ್ಟು ಸುಂದರವಾಗಿ ಹಾಗೂ ದೋಷಮುಕ್ತವಾಗಿ ಮುದ್ರಣಗೊಳ್ಳಲು ಎಲೆ ಮರೆಕಾಯಿಯಂತೆ ಅಚ್ಚಿನ ಕರಡನ್ನು ತಿದ್ದಿದ ನಮ್ಮ ಕಾಲೇಜಿನ ಅಲಂಕಾರಶಾಸ್ತ್ರದ ಪ್ರಾಧ್ಯಾಪಕರಾದ ಆತ್ಮೀಯರಾದ ವಿದ್ವಾನ್. ಶ್ರೀನಿವಾಸಮೂರ್ತಿಯವರನ್ನು ಮರೆಯುವಂತಿಲ್ಲ, ಇವರಿಗೆ ಅನಂತ ನಮಸ್ಕಾರಗಳು. ಮುಖ್ಯವಾಗಿ ಗ್ರಂಥ ಇದಷ್ಟು ಬೇಗ ಸುಂದರವಾಗಿ ಮುದ್ರಣ ಮಾಡಿದ ಶ್ರೀನಂದಿಕೇಶ್ವರ ಆಫ್‌ಸೆಟ್ ಪ್ರಿಂಟ್ಸ್ ಮಾಲಿಕರಾದ ಶ್ರೀ ಜ್ಞಾನಶಂಕರರವರಿಗೂ ಅವರ ಸಿಬ್ಬಂದಿ ವರ್ಗದವರಿಗೂ ಅನೇಕ ನಮಸ್ಕಾರಗಳನ್ನು ಅರ್ಪಿಸುತ್ತೇನೆ.

ವಿದ್ವಜ್ಜನ ವಿಧೇಯ<br>ಎಂ. ಮಲ್ಲಣ್ಣ,<br>ಪ್ರಕಾಶಕರು

# ಚಂದ್ರಾಲೋಕದ ಪರಿವಿಡಿ


| | | |
|---|---|---|
| 1. | ಪ್ರಾರಂಭಿಕ ನುಡಿ | 01 |
| 2 | ಮಂಗಳ ಶ್ಲೋಕ | 04 |
| 3. | ಉಪಮಾಲಂಕಾರಃ (ಅ) | 06 |
| 4. | (೧) ಲುಪ್ತೋಮಾಲಂಕಾರಃ (ಆ) | 07 |
| 5. | 1) ವಾಚಕ ಲುಪ್ತಾ (2) ಧರ್ಮ ಲುಪ್ತಾ 3) ಧರ್ಮವಾಚಕ ಲುಪ್ತಾ | 08 |
| 6. | 4) ವಾಚಕೋಪಮೇಯ ಲುಪ್ತಾ 5) ಉಪಮಾನ ಲುಪ್ತಾ | 09 |
| 7. | 6) ವಾಚಕೋಪಮಾನ ಲುಪ್ತಾ, 7) ಧರ್ಮೋಪಮಾನ ಲುಪ್ತಾ, | 10 |
| | 8) ಧರ್ಮೋಪಮಾನವಾಚಕ ಲುಪ್ತಾ, | |
| | ೨) ಅನನ್ವಯಾಲಂಕಾರಃ | |
| 8. | ೩. ಉಪಮೇಯೋಪಮಾಲಂಕಾರಃ | 11 |
| 9 | ೪. ಪ್ರತೀಪಾಲಂಕಾರಃ 1, 2 ಭೇದಗಳು | 12 |
| | 3, 4, 5, ಭೇದಗಳು | 13-14 |
| 10 | ೫- ರೂಪಕಾಲಂಕಾರಃ | 15 |
| | 1) ಅನುಭಯಾಭೇದರೂಪಕಂ 2) ನ್ಯೂನಾಭೇದರೂಪಕಂ | 16 |
| | 3) ಅಧಿಕಾಭೇದ ರೂಪಕಂ 4) ಅನುಭಯತಾದ್ರೂಪ್ಯರೂಪಕಂ | |
| 11. | 5) ನ್ಯೂನತಾದ್ರೂಪ್ಯ ರೂಪಕಂ 6) ಅಧಿಕತಾದ್ರೂಪ್ಯರೂಪಕಂ | 17 |
| | ೬. ಪರಿಣಾಮಾಲಂಕಾರಃ | |
| 12. | ೭- ಉಲ್ಲೇಖಾಲಂಕಾರಃ 1, 2 ಭೇದಗಳು- | 18 |
| 13. | ೮, ೯, ೧೦- ಸ್ಮೃತಿ - ಭ್ರಾಂತಿ - ಸಂದೇಹಾಲಂಕಾರ: | 19-20 |
| 14 | ೧೧. ಅಪಹ್ನವಾಲಂಕಾರ: | 20 |
| 15. | 1. ಶುದ್ಧಾಪಹ್ನುತಿಃ, 2. ಹೇತ್ವಪಹ್ನುತಿಃ, | 21 |
| 16. | 3. ಪರ್ಯಸ್ತಾಪಹ್ನುತಿಃ 4. ಭ್ರಾಂತಾಪಹ್ನುತಿಃ, | 22 |
| 17. | 5. ಛೇಕಾಪಹ್ನುತಿಃ 6. ಕೈತವಾಪಹ್ನುತಿಃ, | 23-24 |
| 18. | ೧೨ - ಉತ್ಪ್ರೇಕ್ಷಾಲಂಕಾರಃ (ತದ್ಭೇದಾಃ) | 24 |
| 19. | 1. ಸ್ವರೂಪೋತ್ಪ್ರೇಕ್ಷಾ 2. ಹೇತೂತ್ಪ್ರೇಕ್ಷಾ- | 25-26 |
| | 3) ಸಿದ್ಧವಿಷಯಹೇತೂತ್ಪ್ರೇಕ್ಷಾ 4) ಅಸಿದ್ಧವಿಷಯ ಹೇತೂತ್ಪ್ರೇಕ್ಷಾ | |
| 20. | 5, ಫಲೋತ್ಪ್ರೇಕ್ಷಾ- (ಅ) ಸಿದ್ಧವಿಷಯ (ಆ) ಅಸಿದ್ಧವಿಷಯ ಫಲೋತ್ಪ್ರೇಕ್ಷಾ | 25-27 |

21. ೧೩- ಅತಿಶಯೋಕ್ತ್ಯಲಂಕಾರಃ 27
22 1) ರೂಪಕಾತಿಶಯೋಕ್ತಿಃ 2) ಸಾಪಹ್ನವಾತಿಶಯೋಕ್ತಿಃ 28
23 3) ಭೇದಕಾತಿಶಯೋಕ್ತಿಃ 4) ಸಂಬಂಧಾತಿಶಯೋಕ್ತಿಃ 29
24. 5) ಅಸಂಬಂಧಾತಿಶಯೋಕ್ತಿಃ 6) ಅಕ್ರಮಾತಿಶಯೋಕ್ತಿಃ 7) ಚಪಲಾತಿಶಯೋಕ್ತಿಃ 30
8) ಅತ್ಯಂತಾತಿಶಯೋಕ್ತಿಃ 31
25. ೧೪- ತುಲ್ಯಯೋಗಿತಾಲಂಕಾರಃ (ತದ್ಭೇದಾಃ) 32
26. 1) ಹಿತಾಹಿತವೃತ್ತಿ ತೌಲ್ಯರೂಪತುಲ್ಯಯೋಗಿತಾ 33
2) ಉತ್ಕೃಷ್ಟಗುಣಸಮೀಕರಣರೂಪ ತುಲ್ಯಯೋಗಿತಾ
27. ೧೫-ದೀಪಕಾಲಂಕಾರಃ ೧೬- ಆವೃತ್ತಿದೀಪಕಾಲಂಕಾರಃ (ತದ್ಭೇದಾಃ) 34
28. 1) ಪದಾವೃತ್ತಿದೀಪಕಂ 2) ಅರ್ಥಾವೃತ್ತಿದೀಪಕಂ 35
3) ಉಭಯಾವೃತ್ತಿದೀಪಕಂ
29. ೧೮-ದೃಷ್ಟಾಂತಾಲಂಕಾರಃ 36
30. ೧೯- ನಿದರ್ಶನಾಲಂಕಾರಃ (ತದ್ಭೇದಾಃ) 37
1) ವಾಕ್ಯಾರ್ಥವೃತ್ತಿ ನಿದರ್ಶನಾ 2) ಪದಾರ್ಥವೃತ್ತಿ ನಿದರ್ಶನಾ
31. 3) ಸದರ್ಥ ಬೋಧನಾರೂಪಾ ನಿದರ್ಶನಾ 38
32. 4) ಅಸದರ್ಥಬೋಧನರೂಪಾ ನಿದರ್ಶನಾ ೨೦. ವ್ಯತಿರೇಕಾಲಂಕಾರಃ 37
33. ೨೧- ಸಹೋಕ್ತ್ಯಲಂಕಾರಃ ೨೨ - ವಿನೋಕ್ತ್ಯಲಂಕಾರಃ (ತದ್ಭೇದಾಃ) 40
1) ಕಿಂಚಿದ್ವಿನಾ ಹೇಯಸ್ವರೂಪ ವಿನೋಕ್ತ್ಯಲಂಕಾರಃ
34 2) ಕಿಂಚಿದ್ವಿನಾ ರಮ್ಯಸ್ವರೂಪ ವಿನೋಕ್ತ್ಯಲಂಕಾರಃ ೨೩- ಸಮಾಸೋಕ್ತ್ಯಲಂಕಾರಃ 41
35 ೨೪- ಪರಿಕರಾಲಂಕಾರಃ ೩೫-ಪರಿಕರಾಂಕುರಾಲಂಕಾರಃ 42
36. ೨೬- ಶ್ಲೇಷಾಲಂಕಾರಃ (ತದ್ಭೇದಾಃ) 43
37. 1) ಕೇವಲ ಪ್ರಕೃತಗೋಚರಶ್ಲೇಷಃ 2) ಕೇವಲ ಅಪ್ರಕೃತಗೋಚರಶ್ಲೇಷಃ 44
3) ಉಭಯಗೋಚರಶ್ಲೇಷಃ -
38. ೨೭- ಅಪ್ರಸ್ತುತಪ್ರಶಂಸಾಲಂಕಾರಃ ೨೮- ಪ್ರಸ್ತುತಾಂಕುರಾಲಂಕಾರಃ 45
39. ೨೯- ಪರ್ಯಾಯೋಕ್ತಾಲಂಕಾರಃ (ತದ್ಭೇದಾಃ)
1) ಗಮ್ಯಸ್ಯ ರೂಪಾಂತರವರ್ಣನರೂಪಂ ಪರ್ಯಾಯೋಕ್ತಂ 46
41 2) ವ್ಯಾಜೇನ ಇಷ್ಟಸಾಧನರೂಪಂ ಪರ್ಯಾಯೋಕ್ತಂ 47
೩೦- ವ್ಯಾಜಸ್ತುತ್ಯಲಂಕಾರಃ

41. ೧) ನಿಂದಾವ್ಯಾಜೇನ ಸ್ತುತಿರೂಪಾವ್ಯಾಜಸ್ತುತಿಃ 2) ಸ್ತುತಿವ್ಯಾಜೇನ ನಿಂದಾರೂಪಾವ್ಯಾಜಸ್ತುತಿಃ 48
೩೧- ವ್ಯಾಜನಿಂದಾಲಂಕಾರಃ
42. ೩೨- ಆಕ್ಷೇಪಾಲಂಕಾರಃ (ತದ್ಭೇದಾಃ) (1) ಸ್ವಯಂ ಉಕ್ತಸ್ಯೈವ ವಿಚಾರಣಾತ್- ಪ್ರತಿಷೇಧರೂಪಃ ಆಕ್ಷೇಪಃ 49
43. 2) ನಿಷೇಧಾಭಾಸರೂಪಃ ಆಕ್ಷೇಪಃ (3) ತಿರೋಹಿತ ನಿಷೇಧವ್ಯಕ್ತವಿಧಿರೂಪಃ ಆಕ್ಷೇಪಃ 50
44. ೩೩- ವಿರೋಧಾಭಾಸಾಲಂಕಾರಃ ೩೪- ವಿಭಾವನಾಲಂಕಾರಃ (ತದ್ಭೇದಾಃ) 51
45. 1) ಕಾರಣಂವಿನಾ ಕಾರ್ಯೋತ್ಪತ್ತಿರೂಪಾ ವಿಭಾವನಾ 2) ಹೇತುವೈಕಲ್ಯೇಽಪಿ ಕಾರ್ಯೋತ್ಪತ್ತಿರೂಪಾ ವಿಭಾವನಾ 52
46. 3) ಪ್ರತಿಬಂಧಕಸತ್ತ್ವೇಽಪಿ ಕಾರ್ಯೋತ್ಪತ್ತಿರೂಪಾ ವಿಭಾವನಾ
4) ಅಕಾರಣಾತ್ ಕಾರ್ಯೋತ್ಪತ್ತಿರೂಪಾ ವಿಭಾವನಾ 53
47. 5) ವಿರುದ್ಧಾತ್ ಕಾರಣಾತ್ ಕಾರ್ಯೋತ್ಪತ್ತಿರೂಪಾ ವಿಭಾವನಾ 54
೬) ಕಾರ್ಯಾತ್ ಕಾರಣೋತ್ಪತ್ತಿರೂಪಾ ವಿಭಾವನಾ
48. ೩೫- ವಿಶೇಷೋಕ್ತ್ಯಲಂಕಾರಃ ೩೬- ಅಸಂಭವಾಲಂಕಾರಃ 55
49. ೩೭. ಅಸಂಗತ್ಯಲಂಕಾರಃ (ತದ್ಭೇದಾಃ) (1) ಕಾರ್ಯಹೇತ್ವೋಃ ಭಿನ್ನದೇಶತ್ವರೂಪಾ ಅಸಂಗತಿಃ 56
50. 2) ಏಕತ್ರ ಕರಣೀಯಸ್ಯ ಅನ್ಯತ್ರ ಕೃತಿರೂಪಾ ಅಸಂಗತಿಃ
3) ಅನ್ಯತ್ ಚಿಕೀರ್ಷೋಃ ತದ್ವಿರುದ್ಧಕೃತಿರೂಪಾ ಅಸಂಗತಿಃ 57
51. ೩೮-ವಿಷಮಾಲಂಕಾರಃ(ತದ್ಭೇದಾಃ)
1) ಅನನುರೂಪ ಘಟನಾರೂಪ ವಿಷಮಾಲಂಕಾರಃ 58
2) ವಿರೂಪಕಾರ್ಯೋತ್ಪತ್ತಿರೂಪ ವಿಷಮಾಲಂಕಾರಃ
52. 3) ಇಷ್ಟಾರ್ಥೋದ್ಯಮಾತ್ ಅನಿಷ್ಟಾವಾಪ್ತಿರೂಪ ವಿಷಮಾಲಂಕಾರಃ 59
೩೯- ಸಮಾಲಂಕಾರಃ(ತದ್ಭೇದಾಃ) 1) ಅನುರೂಪ ವರ್ಣನರೂಪ ಸಮಾಲಂಕಾರಃ
53. 2) ಕಾರಣಸಾರುಪ್ಯ ವರ್ಣನರೂಪ ಸಮಾಲಂಕಾರಃ 3) ಅಕ್ಲೇಶೇನ — ಕಾರ್ಯಸಿದ್ಧಿವರ್ಣನರೂಪ ಸಮಾಲಂಕಾರಃ 60
54. ೪೦ - ಚಿತ್ರಾಲಂಕಾರಃ ೪೧ - ಅಧಿಕಾಲಂಕಾರಃ 61
1) ಆಧಾರಾತ್ ಆಧೇಯಾಧಿಕ್ಯವರ್ಣನರೂಪ - ಅಧಿಕಾಲಂಕಾರಃ
55. 2) ಆಧೇಯಾತ್ ಆಧಾರಾಧಿಕ್ಯ ವರ್ಣನರೂಪ - ಅಧಿಕಾಲಂಕಾರಃ 62
೪೨. ಅಲ್ಪಾಲಂಕಾರಃ

| | | |
|---|---|---|
| 56. | ೪೩ ಅನ್ಯೋನ್ಯಾಲಂಕಾರಃ ೪೪ ವಿಶೇಷಾಲಂಕಾರಃ (ತದ್ಭೇದಾಃ) | 63 |
| | 1, 2, 3, ಭೇದಗಳು | 64 |
| 57. | ೪೫ - ವ್ಯಾಘಾತಾಲಂಕಾರಃ (ತದ್ಭೇದಾಃ) 1) ತಥಾಕಾರಿಣೆ ಅತಥಾಕಾರಿತ ಕ್ರಿಯಾ | 65 |
| 58. | 2) ಸೌಕರ್ಯನಿಬದ್ಧಕಾರ್ಯ ವಿರೋಧಿಕ್ರಿಯಾ | 66 |
| 59. | ೪೬ - ಕಾರಣಮಾಲಾಲಂಕಾರಃ 1) ಉತ್ತರೋತ್ತರಕಾರಣಭೂತ ಪೂರ್ವಪೂರ್ವ | 67 |
| | ಸಂದರ್ಭಃ 2) ಪೂರ್ವಪೂರ್ವಕಾರಣಭೂತ ಉತ್ತರೋತ್ತರ ಸಂದರ್ಭಃ | |
| 60. | ೪೭ - ಏಕಾವಲ್ಯಲಂಕಾರಃ 1) ಉತ್ತರೋತ್ತರಸ್ಯ ಪೂರ್ವಪೂರ್ವ ವಿಶೇಷಣತ್ವಂ | 68 |
| 61. | ೪೮ - ಮಾಲಾದೀಪಕಾಲಂಕಾರಃ ೪೯- ಸಾರಾಲಂಕಾರಃ | 69 |
| 62. | ೫೦-ಯಥಾಸಂಖ್ಯಾಲಂಕಾರಃ ೫೧-ಪರ್ಯಾಯಾಲಂಕಾರಃ (ತದ್ಭೇದಾಃ) | 70 |
| | 1) ಏಕಸ್ಯ ಅನೇಕಾಶ್ರಯರೂಪಃ ಪರ್ಯಾಯಾಲಂಕಾರಃ | |
| 63. | 2) ಅನೇಕಸ್ಯ ಏಕಾಶ್ರಯರೂಪಃ ಪರ್ಯಾಯಾಲಂಕಾರಃ | 71 |
| | ೫೨ - ಪರಿವೃತ್ತ್ಯಲಂಕಾರಃ (ತದ್ಭೇದಾಃ) | |
| 64. | 1) ಸ್ವಲ್ಪವ್ಯಯೇನ ಅಧಿಕ ಸ್ವೀಕರಣರೂಪಃ ಪರಿವೃತ್ತ್ಯಲಂಕಾರಃ | 72 |
| | ೫೩ - ಪರಿಸಂಖ್ಯಾಲಂಕಾರಃ | |
| 65. | ೫೪ - ವಿಕಲ್ಪಾಲಂಕಾರಃ ೫೫ ಸಮುಚ್ಚಯಾಲಂಕಾರಃ (ತದ್ಭೇದಾಃ) | 73 |
| 66. | 1) ಅವಿರುದ್ಧ ಅನೇಕ ಸಂದರ್ಭರೂಪಃ ಸಮುಚ್ಚಯಾಲಂಕಾರಃ | 74 |
| | 2) ಅಹಂ ಪೂರ್ವಿಕಾವತಾಂ ಏಕಾನ್ವಯರೂಪಃ ಸಮುಚ್ಚಯಾಲಂಕಾರಃ | |
| | ೫೬ - ಕಾರಕದೀಪಕಾಲಂಕಾರಃ | |
| 67. | ೫೭ - ಸಮಾಧ್ಯಲಂಕಾರಃ | 75 |
| 68. | ೫೮ - ಪ್ರತ್ಯನೀಕಾಲಂಕಾರಃ ೫೯- ಕಾವ್ಯಾರ್ಥಾಪತ್ತ್ಯಲಂಕಾರಃ | 76 |
| 69. | ೬೦ - ಕಾವ್ಯಲಿಂಗಾಲಂಕಾರಃ ೬೧- ಅರ್ಥಾಂತರನ್ಯಾಸಃ (ತದ್ಭೇದಾಃ) | 77 |
| 70. | 1) ಸಾಮಾನ್ಯೇನ ವಿಶೇಷ ಸಮರ್ಥನರೂಪಃ 2) ವಿಶೇಷೇಣ | 78 |
| | ಸಾಮಾನ್ಯ ಸಮರ್ಥನರೂಪಃ ೬೨. ವಿಕಸ್ವರಾಲಂಕಾರಃ | |
| 71. | ೬೩- ಪ್ರೌಢೋಕ್ತ್ಯಲಂಕಾರಃ | 79 |
| 72. | ೬೪ - ಸಂಭವನಾಲಂಕಾರಃ ೬೫-ಮಿಥ್ಯಾಧ್ಯವಸಿತ್ಯಲುಕಾರಃ | 80 |
| 73. | ೬೬- ಲಲಿತಾಲಂಕಾರಃ ೬೭- ಪ್ರಹರ್ಷಣಾಲಂಕಾರಃ (ತದ್ಭೇದಾಃ) | 81 |
| 74. | 1) ಯತ್ನಂ ವಿನಾ ಈಪ್ಸಿತಾರ್ಥಸಿದ್ಧಿರೂಪಃ ಪ್ರಹರ್ಷಣಾಲಂಕಾರಃ | 82 |
| | 2) ವಾಂಛಿತಾರ್ಥಾತ್ ಅಧಿಕಾರ್ಥಸಿದ್ಧಿರೂಪ ಪ್ರಹರ್ಷಣಾಲಂಕಾರಃ | |
| | 3) ಉಪಾಯಾರ್ಥಯತ್ನಾತ್ ಫಲಸಿದ್ಧಿರೂಪ ಪ್ರಹರ್ಷಣಾಲಂಕಾರಃ | |
| 75. | ೬೮ - ವಿಷಾದನಾಲಂಕಾರಃ ೬೯. ಉಲ್ಲಾಸಾಲಂಕಾರಃ (ತದ್ಭೇದಾಃ) | 83 |

| | | |
|---|---|---|
| 76. | 1) ಅನ್ಯಗುಣೇನ ತದನ್ಯಸ್ಯ ಗುಣೋತ್ಪತ್ತಿವರ್ಣನರೂಪಃ | 84 |
| | 2) ಅನ್ಯದೋಷೇಣ ತದನ್ಯಸ್ಯ ದೋಷೋತ್ಪತ್ತಿವರ್ಣನರೂಪಃ | |
| | 3) ಅನ್ಯಗುಣೇನ ತದನ್ಯಸ್ಯ ದೋಷೋತ್ಪತ್ತಿವರ್ಣನರೂಪಃ | |
| 77. | 4) ಅನ್ಯದೋಷೇಣ ತದನ್ಯಸ್ಯ ಗುಣೋತ್ಪತ್ತಿವರ್ಣನರೂಪಃ | 85 |
| 78. | ೭೦- ಅವಜ್ಞಾಲಂಕಾರಃ (ತದ್ಭೇದಾಃ) | |
| | 1) ಅನ್ಯಗುಣೇನ ಅನ್ಯಗುಣಾಭಾವಃ | |
| 79. | 2) ಅನ್ಯದೋಷೇಣ ಅನ್ಯದೋಷಾಭಾವಃ | 86 |
| | ೭೧ - ಅನುಜ್ಞಾಲಂಕಾರಃ ೭೨ - ಲೇಶಾಲಂಕಾರಃ | |
| 80. | ೭೩- ಮುದ್ರಾಲಂಕಾರಃ | 87 |
| 81. | ೭೪ - ರತ್ನಾವಲ್ಯಲಂಕಾರಃ ೭೫ - ತದ್ಗುಣಾಲಂಕಾರಃ | 88 |
| 82. | ೭೬ - ಪೂರ್ವರೂಪಾಲಂಕಾರಃ ( ತದ್ಭೇದಾಃ) 1, 2, ಭೇದಗಳು | 89 |
| 83. | ೭೭ - ಅತದ್ಗುಣಾಲಂಕಾರಃ ೭೮- ಅನುಗುಣಾಲಂಕಾರಃ (ತದ್ಭೇದಾಃ) | 90 |
| 84. | ೭೯- ಮೀಲಿತಾಲಂಕಾರಃ (ತದ್ಭೇದಾಃ) | 91 |
| 85. | ೮೦ - ಸಾಮಾನ್ಯಾಲಂಕಾರಃ | 92 |
| 86. | ೮೧, ೮೨ - ಉನ್ಮೀಲಿತಾಲಂಕಾರಃ ವಿಶೇಷಕಾಲಂಕಾರಃ | 93 |
| | ೮೩- ಗೂಢೋತ್ತರಾಲಂಕಾರಃ (ತದ್ಭೇದಾಃ) | |
| 87. | ೮೪-ಸೂಕ್ಷ್ಮಾಲಂಕಾರಃ ೮೫- ಪಿಹಿತಾಲಂಕಾರಃ | 95 |
| 88. | ೮೬ -ವ್ಯಾಜೋಕ್ತ್ಯಲಂಕಾರಃ | 96 |
| 89. | ೮೭-ಗೂಢೋಕ್ತ್ಯಲಂಕಾರಃ ೮೮- ವಿವೃತೋಕ್ತ್ಯಲಂಕಾರಃ | 97 |
| 90. | ೮೯- ಯುಕ್ತ್ಯಲಂಕಾರಃ ೯೦ - ಲೋಕೋಕ್ತ್ಯಲಂಕಾರಃ | 98 |
| 91. | ೯೧ - ಛೇಕೋಕ್ತ್ಯಲಂಕಾರಃ ೯೨ - ವಕ್ರೋಕ್ತ್ಯಲಂಕಾರಃ | 99 |
| 92. | ೯೩- ಸ್ವಭಾವೋಕ್ತ್ಯಲಂಕಾರಃ | 100 |
| 93. | ೯೪ - ಭಾವಿಕಾಲಂಕಾರಃ ೯೫ - ಉದಾತ್ತಾಲಂಕಾರಃ | 101 |
| 94. | ೯೬- ಅತ್ಯುಕ್ತ್ಯಲಂಕಾರಃ ೯೭- ನಿರುಕ್ತ್ಯಲಂಕಾರಃ | 102 |
| 95. | ೯೮ - ಪ್ರತಿಷೇಧಾಲಂಕಾರಃ ೯೯- ವಿಧ್ಯಲಂಕಾರಃ | 103 |
| 96. | ೧೦೦ - ಹೇತ್ವಲಂಕಾರಃ | 104 |
| 97. | ಶಬ್ದಾಲಂಕಾರಾಃ | 105 |
| 98. | ಛೇಕಾನುಪ್ರಾಸಃ | 106 |
| 99. | ವೃತ್ತ್ಯನುಪ್ರಾಸಃ - ಲಾಟಾನುಪ್ರಾಸಃ | 107 |
| 100. | ಯಮಕಾಲಂಕಾರಃ - ಮುಕ್ತಾಯ ವಾಕ್ಯಂ | 108 |

# ವೃತ್ತರತ್ನಾಕರದ ಪರಿವಿಡಿ


| | | |
|---|---|---|
| 1. | ವೃತ್ತರತ್ನಾಕರಃ | 109 |
| 2. | ಪ್ರಥಮೋಽಧ್ಯಾಯಃ | 110 |
| 3. | ದ್ವಿತೀಯೋಽಧ್ಯಾಯಃ | 116 |
| 4. | ೧ - ಆರ್ಯಾ ಪ್ರಕರಣಂ -1) ಆರ್ಯಾ ವೃತ್ತದಲಕ್ಷಣ | 116 |
| 5. | 2) ಪಥ್ಯಾರ್ಯಾಲಕ್ಷಣಂ 3) ವಿಪುಲಾರ್ಯಾಲಕ್ಷಣಂ | 117 |
| 6. | 4) ಚಪಲಾರ್ಯಾ | 118 |
| 7. | 5) ಮುಖಚಪಲಾರ್ಯಾ 6) ಜಘನಚಪಲಾರ್ಯಾ | 119 |
| 8. | ೨ - ಗೀತಿ ಪ್ರಕರಣಂ - 1) ಗೀತಿಃ 2) ಉಪ ಗೀತಿಃ | 120 |
| 9. | 3) ಉದ್ಗೀತಿಃ 4) ಆರ್ಯಾ ಗೀತಿಃ | 121 |
| 10. | ೩- ವೈತಾಲೀಯ ಪ್ರಕರಣಮ್ - | 122 |
| | 1) ವೈತಾಲೀಯ ಲಕ್ಷಣಂ 2) ಔಪಚ್ಛಂದಸಿಕ ಲಕ್ಷಣಂ | |
| 11. | 3) ಆಪಾತಲಿಕಾ ಲಕ್ಷಣಂ 4) ದಕ್ಷಿಣಾಂತಿಕಾ ಲಕ್ಷಣಂ | 123 |
| | 5) ಉದೀಚ್ಯವೃತ್ತಿ ಲಕ್ಷಣಂ | |
| 12. | 6) ಪ್ರಾಚ್ಯವೃತ್ತಿ ಲಕ್ಷಣಂ 7) ಪ್ರವೃತ್ತಕ ಲಕ್ಷಣಂ 8) ಅಪರಾಂತಿಕ ಲಕ್ಷಣಂ | 124 |
| 13. | 9) ಚಾರುಹಾಸಿನಿ ಲಕ್ಷಣಂ | 125 |
| 14. | ೪ - ಅನುಷ್ಟುಪ್ ಪ್ರಕರಣಮ್ - | 125 |
| | 1) ವಕ್ತ್ರ ಲಕ್ಷಣಂ 2) ಪಥ್ಯಾವಕ್ತ್ರ ಲಕ್ಷಣಂ | |
| | 3) ವಿಪರೀತಪಥ್ಯಾವಕ್ತ್ರ ಲಕ್ಷಣಂ | |
| 15. | 4) ಚಪಲಾವಕ್ತ್ರ ಲಕ್ಷಣಂ 5) ಯುಗ್ಮ ವಿಪುಲಾ ಲಕ್ಷಣಂ | 126 |
| | 6) ವಿಪುಲಾ ಲಕ್ಷಣಂ 7) ಭಾದ್ವಿಪುಲ 8) ರವಿಪುಲಾ 9) ನವಿಪುಲಾ | |
| 16. | 10) ತವಿಪುಲಾ ಲಕ್ಷಣಂ | 127 |
| | ೫ - ಸಮಮಾತ್ರಾಪ್ರಕರಣಂ - 1) ಅಚಲಧೃತಿ ಲಕ್ಷಣಂ | |
| | 2) ಮಾತ್ರಾಸಮಕ ಲಕ್ಷಣಂ 3) ವಿಶ್ಲೋಕ ಲಕ್ಷಣಂ | |
| 17. | 4) ವಾನವಾಸಿಕಾ ಲಕ್ಷಣಂ 5) ಚಿತ್ರಾ ಲಕ್ಷಣಂ 6) ಉಪಚಿತ್ರಾ ಲಕ್ಷಣಂ | 128 |
| | 7) ಪಾದಾಕುಲಕ ಲಕ್ಷಣಂ | |
| 18. | ಗುರು-ಲಘೋಃ ಸಂಖ್ಯಾ ನಿಯಮಃ | 129 |
| 19. | ೬) ದ್ವಿಪಾತ್ಪ್ರಕರಣಂ - 1) ಶಿಖಾ 2) ಖಂಜಾ | 130 |

20. 3) ಅನಂಗಕ್ರೀಡಾ 4) ಅತಿರುಚಿರಾ 131

21. ತೃತೀಯೋಧ್ಯಾಯಃ — (ವರ್ಣಛಂದಸ್) 132

೧) ಉಕ್ತಾಯಾಮ್ — 1) ಶ್ರೀಃ ವೃತ್ತ

೨) ಅತ್ಯುಕ್ತಾಯಾಮ್ — 1) ಸ್ತ್ರೀ ವೃತ್ತ

೩) ಮಧ್ಯಾಯಾಮ್ — 1) ನಾರೀ ವೃತ್ತ 2) ಮೃಗೀ ವೃತ್ತ 3) ಕೇಸಾ ವೃತ್ತ

22. ೪) ಪ್ರತಿಷ್ಠಾಯಾಮ್ — 1) ಕನ್ಯಾ ವೃತ್ತ 2) ವ್ರೀಡಾ ವೃತ್ತ 133

3) ಲಾಸಿನೀವೃತ್ತ 4) ಸುಮುಖೀ ವೃತ್ತ 5) ಸುಮತಿ ವೃತ್ತ 6) ಸಮೃದ್ಧಿ ವೃತ್ತ

23. ೫) ಸುಪ್ರತಿಷ್ಠಾಯಾಮ್ — 1) ಪಂಕ್ತಿ ವೃತ್ತ 2) ಪ್ರೀತಿ ವೃತ್ತ 134

3) ಸತೀ ವೃತ್ತ 4) ಮಂದಾ ವೃತ್ತ

೬) ಗಾಯತ್ರ್ಯಾಮ್ — 1) ತನುಮಧ್ಯಾ ವೃತ್ತ 2) ಶಶಿವದನಾ ವೃತ್ತ

3) ಸಾವಿತ್ರೀ ವೃತ್ತ

24. 4) ನದೀ ವೃತ್ತ 5) ಮುಕುಲ ವೃತ್ತ 6) ಮಾಲಿನೀ ವೃತ್ತ 135

7) ರಮಣೀ ವೃತ್ತ 8) ವಸುಮತೀ ವೃತ್ತ

೭) ಉಷ್ಣಿಹಿ — 1) ಮಾದಲೇಖಾ ವೃತ್ತ 2) ಕುಮಾರಲಲಿತಾ ವೃತ್ತ

25. 3) ಮಧುಮತೀ ವೃತ್ತ 4) ಹಂಸಮಾಲಾ ವೃತ್ತ 136

೮) ಅನುಷ್ಟುಭಿ — 1) ಚಿತ್ರಪದಾ ವೃತ್ತ 2) ವಿದ್ಯುನ್ಮಾಲಾ ವೃತ್ತ

3) ಮಾಣವಕ ವೃತ್ತ

26. 1) ಹಂಸರುತ ವೃತ್ತ 2) ನಾಗರಕ ವೃತ್ತ 3) ನಾರಾಚಿಕಾ ವೃತ್ತ 137

4) ಸಮಾನಿಕಾ ವೃತ್ತ 5) ಪ್ರಮಾಣಿಕಾ ವೃತ್ತ 6) ವಿತಾನ ವೃತ್ತ

೯) ಬೃಹತ್ಯಾಮ್ — 1) ಹಲಮುಖೀ ವೃತ್ತ

27. 2) ಭುಜಗಶಿಶುಭೃತಾ ವೃತ್ತ 138

೧೦) ಪಂಕ್ತೌ — 1) ಶುದ್ಧವಿರಾಟ್ ವೃತ್ತ

2) ಪಣವ ವೃತ್ತ 3) ಮಯೂರಸಾರಿಣೀ ವೃತ್ತ,

4) ರುಕ್ಮವತೀ ವೃತ್ತ 5) ಮತ್ತಾ ವೃತ್ತ 6) ಮನೋರಮಾ ವೃತ್ತ

28. 7) ಮೇಘವಿತಾನ ವೃತ್ತ 8) ಮಣಿರಾಗ ವೃತ್ತ 139

9) ಚಂಪಕಮಾಲಾ ವೃತ್ತ 10) ತ್ವರಿತಗತಿ ವೃತ್ತ

೧೧) ತ್ರಿಷ್ಟುಭಿ — 1) ಉಪಸ್ಥಿತಾ ವೃತ್ತ 2) ಏಕರೂಪ ವೃತ್ತ

3) ಇಂದ್ರವಜ್ರಾ ವೃತ್ತ

| | | |
|---|---|---|
| 29. | 4) ಉಪೇಂದ್ರವಜ್ರಾ ವೃತ್ತ 5) ಉಪಜಾತಿ ವೃತ್ತ<br>6) ಸುಮುಖೀ ವೃತ್ತ 7) ದೋಧಕ ವೃತ್ತ | 140 |
| 30. | 8) ಶಾಲಿನೀ ವೃತ್ತ 9) ವಾತೋರ್ಮೀ ವೃತ್ತ<br>10) ಭ್ರಮರವಿಲಸಿತ ವೃತ್ತ 11) ಸ್ತ್ರೀ ವೃತ್ತ<br>12) ರಥೋದ್ಧತಾ ವೃತ್ತ 13) ಸ್ವಾಗತಾ ವೃತ್ತ | 141 |
| 31. | 14) ಪೃಥ್ವೀ (ವೃತ್ತಾ) ವೃತ್ತ 15) ಸುಭದ್ರಿಕಾ (ಚಂದ್ರಿಕಾ) ವೃತ್ತ,<br>16) ವೈತಿಕಾ ವೃತ್ತ 17) ಮೌಕ್ತಿಕಮಾಲಾ ವೃತ್ತ 18) ಉಪಸ್ಥಿತ ವೃತ್ತ | 142 |
| 32. | ೧೨) ಜಗತ್ಯಾಮ್ — 1) ಚಂದ್ರವರ್ತ್ಮ್ವವೃತ್ತ 2) ವಂಶಸ್ಥ ವೃತ್ತ<br>3) ಇಂದ್ರವಂಶಾ ವೃತ್ತ 4) ತೋಟಕ ವೃತ್ತ 5) ದ್ರುತವಿಲಂಬಿತ ವೃತ್ತ<br>6) ಪುಟ ವೃತ್ತ | 143 |
| 33. | 7) ಪ್ರಮುದಿತವದನಾ ವೃತ್ತ 8) ಕುಸುಮವಿಚಿತ್ರಾ ವೃತ್ತ<br>9) ಉಜ್ವಲಾವೃತ್ತ 10) ವೈಶ್ವದೇವೀ ವೃತ್ತ 11) ಜಲಧರಮಾಲಾ ವೃತ್ತ<br>12) ನವಮಾಲಿನೀ ವೃತ್ತ | 144 |
| 34. | 13) ಪ್ರಭಾ ವೃತ್ತ 14) ಮಾಲತೀ ವೃತ್ತ 15) ತಾಮರಸ ವೃತ್ತ<br>16) ಜಲೋದ್ಧತಗತಿ ವೃತ್ತ 17) ಭುಗಂಜಪ್ರಯಾತ ವೃತ್ತ | 145 |
| 35. | 18) ಸ್ರಗ್ವಿಣೀ ವೃತ್ತ 19) ಪ್ರಿಯಂವದಾ ವೃತ್ತ 20) ಮಣಿಮಾಲಾ ವೃತ್ತ<br>21) ಲಲಿತಾ ವೃತ್ತ 22) ಪ್ರಮಿತಾಕ್ಷರಾ ವೃತ್ತ<br>೧೩) ಅತಿಜಗತ್ಯಾಮ್ — 1) ಕ್ಷಮಾ ವೃತ್ತ | 146 |
| 36. | 2) ಪ್ರಹರ್ಷಿಣೀ ವೃತ್ತ 3) ರುಚಿರಾ ವೃತ್ತ 4) ಮತ್ತಮಯೂರ ವೃತ್ತ<br>5) ಚಂಚರೀಕಾವಲೀ ವೃತ್ತ 6) ಮಂಜುಭಾಷಿಣೀ ವೃತ್ತ | 147 |
| 37. | 7) ಚಂದ್ರಿಕಾ ವೃತ್ತ ೧೪) ಶಕ್ವರ್ಯಾಮ್ — 1) ಅಸಂಬಾಧಾ ವೃತ್ತ,<br>2) ಅಪರಾಜಿತಾ ವೃತ್ತ 3) ಪ್ರಹರಣಕಲಿಕಾ ವೃತ್ತ 4) ವಸಂತತಿಲಕಾ ವೃತ್ತ | 148 |
| 38. | 5) ಸಿಂಹೋನ್ನತಾ ವೃತ್ತ 6) ಇಂದುವದನಾ ವೃತ್ತ 7) ಅಲೋಲಾ ವೃತ್ತ<br>೧೫) ಅತಿಶಕ್ವರ್ಯಾಮ್ — 1) ಶಶಿಕಲಾ ವೃತ್ತ 2) ಸ್ರಗ್ ವೃತ್ತ | 149 |
| 39. | 3) ಮಣಿಗಣಕಿರಣ ವೃತ್ತ 4) ಮಾಲಿನೀ ವೃತ್ತ 5) ಪ್ರಭದ್ರಕ ವೃತ್ತ<br>6) ಅತಿರೇಖಾ ವೃತ್ತ | 150 |
| 40. | 7) ಚಂದ್ರಲೇಖಾ ವೃತ್ತ ೧೬) ಅಷ್ಟ್ಯಾ — 1) ಋಷಭಗಜವಿಲಸಿತ ವೃತ್ತ<br>2) ಬಾಣಿನೀ ವೃತ್ತ ೧೭) ಅತ್ಯಷ್ಟ್ಯಾ — 1) ಶಿಖರಿಣೀ ವೃತ್ತ | 151 |

| | | |
|---|---|---|
| 41. | 2) ಪೃಥ್ವೀ ವೃತ್ತ 3) ವಂಶಪತ್ರಪತಿತ ವೃತ್ತ | 152 |
| | 4) ಹರಿಣೀ ವೃತ್ತ 5) ಮಂದಾಕ್ರಾಂತಾ ವೃತ್ತ | |
| 42. | 6) ಕುಟಕ ವೃತ್ತ 7) ಕೋಕಿಲಕ ವೃತ್ತ | 153 |
| | ೧೮) ಧೃತೌ — 1) ಕಸುಮಿತಲತಾವೇಲ್ಲಿತಾ ವೃತ್ತ | |
| 43. | 2) ಹರನರ್ತಕ ವೃತ್ತ 3) ಸಿಂಹವಿಕ್ರೀಡಿತ ವೃತ್ತ | 154 |
| | ೧೯) ಅತಿಧೃತೌ — 1) ಮೇಘವಿಸ್ಫೂರ್ಜಿತಾ ವೃತ್ತ | |
| | 2) ಶಾರ್ದೂಲವಿಕ್ರೀಡಿತ ವೃತ್ತ | |
| 44. | ೨೦) ಕೃತೌ — 1) ಮತ್ತೇಭವಿಕ್ರೀಡಿತ ವೃತ್ತ | 155 |
| | 2) ಸುವದನಾ ವೃತ್ತ 3) ವೃತ್ತ ವೃತ್ತ 4) ಪ್ರಮದಾನನ ವೃತ್ತ | |
| 45. | ೨೧) ಪ್ರಕೃತೌ — 1) ಸ್ರಗ್ಧರಾ ವೃತ್ತ 2) ಮತ್ತವಿಲಾಸಿನೀ ವೃತ್ತ | 156 |
| | ೨೨) ಆಕೃತೌ — 1) ಪ್ರಭದ್ರಕ ವೃತ್ತ | |
| | ೨೩) ವಿಕೃತೌ — 1) ಅಶ್ವಲಲಿತ ವೃತ್ತ | |
| 46. | 2) ಮತ್ತಾಕ್ರೀಡಾ ವೃತ್ತ 3) ಮಯೂರಗತಿ ವೃತ್ತ | 157 |
| | ೨೪) ಸಂಕೃತೌ — 1) ತನ್ವೀ ವೃತ್ತ | |
| 47. | ೨೫) ಅತಿಕೃತೌ — 1) ಕ್ರೌಂಚಪದಾ ವೃತ್ತ | 158 |
| | ೨೬) ಉತ್ಕೃತೌ — 1) ಭುಜಂಗವಿಜೃಂಭಿತ ವೃತ್ತ 2) ಅಪವಾಹ ವೃತ್ತ | |
| 48. | ೨೭) ಅಥ ದಂಡಕಾ — 1) ಚಂಡವೃಷ್ಟಿಪ್ರಯಾತ ದಂಡಕ | 159 |
| | 2) ಇತರದಂಡಕ ಪ್ರಕಾರಗಳು | |
| 49. | 3) ಪ್ರಚಿತಕ ದಂಡಕ 4) ಈ ದಂಡಕದ ಇತರ ಭೇದಗಳು | 160 |
| | 5) ಇದರ ಇತರ ವೈಲಕ್ಷಣ್ಯಗಳು | |
| 50. | ಚತುರ್ಥೋಧ್ಯಾಯಃ — ಅರ್ಧ ಸಮವೃತ್ತಗಳ ವಿವರಣೆ | 161 |
| | 1) ಉಪಚಿತ್ರ 2) ದ್ರುತಮಧ್ಯಾ 3) ವೇಗವತೀ | |
| 51. | 4) ಭದ್ರವಿರಾಟ್ 5) ಕೇತುಮತೀ 6) ಲಲಿತಾ | 162 |
| 52. | 7) ಆಖ್ಯಾತಕೀ 8) ವಿಪರೀತಪೂರ್ವಾ 9) ಹರಿಣಪ್ಲುತಾ | 163 |
| 53. | 10) ಅಪರವಕ್ತ್ರ 11) ಪುಷ್ಪಿತಾಗ್ರಾ 12) ಅಪರವಕ್ತ್ರ, | 164 |
| | ವೈತಾಲೀಯ, ಪುಷ್ಪಿತಾಗ್ರಾ, ಔಪಚ್ಛಂದಸಿಕ ಇವುಗಳ ಅಭಿನ್ನತೆ | |
| | ಅ) ವೈತಾಲೀಯ — | |
| 54. | ಆ) ಔಪಚ್ಛಂದಸಿಕ 13) ಯವಮತೀ | 165 |

| | | |
|---|---|---|
| 55. | ಪಂಚಮೋಽಧ್ಯಾಯಃ — | 166 |
| | (ವಿಷಮವೃತ್ತಗಳ ವಿವರಣೆ) (ಪದಚತುರೂರ್ಧ್ವಪ್ರಕರಣ) | |
| | 1) ಪದಚತುರೂರ್ಧ್ವ 2) ಆಪೀಡ | |
| 56. | 3) ಕಲಿಕಾ 4) ಲವಲೀ | 167 |
| 57. | 5) ಅಮೃತಧಾರಾ | 168 |
| 58. | ಉದ್ಗತಾ ಪ್ರಕರಣ — | 169 |
| | 1) ಉದ್ಗತಾ ವೃತ್ತ 2) ಸೌರಭಕ ವೃತ್ತ | |
| 59. | 3) ಲಲಿತ | 170 |
| 60. | ೧) ಉಪಸ್ಥಿತ ಪ್ರಚುಪಿತ ಪ್ರಕರಣ | 171 |
| | 1) ಉಪಸ್ಥಿತಪ್ರಚುಪಿತ 2) ಪ್ರವರ್ಧಮಾನ | |
| 61. | 3) ಶುದ್ಧವಿರಾಡಾರ್ಷಭ | 172 |
| 62. | ೧) ಗಾಥಾ | 173 |
| | ಷಷ್ಠೋಽಧ್ಯಾಯ — ಷಟ್‌ಪ್ರತ್ಯಯಗಳು | 173-175 |
| | ೧) ಪ್ರಸ್ತಾರವಿಧಿ | |
| 63. | ೨) ನಷ್ಟವೃತ್ತವಿಧಿ | 175 |
| 64. | ೩) ಉದ್ದಿಷ್ಟಪಾದ ಸಂಖ್ಯಾವಿಧಿ | 176 |
| 65. | ಏಕ — ದ್ವ್ಯಾದಿಗುರುಲಘುಸಂಖ್ಯಾವಿಧಿ | 177 |
| 66. | ೫) ವೃತ್ತ ಸಂಖ್ಯಾವಿಧಿ | 178 |
| 67. | ಪ್ರಸ್ತಾರ ಭೂಮಿಮಾನವಿಧಿ | 179 |
| 68. | ಮುಕ್ತಾಯ ವಾಕ್ಯ | 180 |

# ಪ್ರಾರಂಭಿಕ ನುಡಿ

ಭಗವಂತನ ಈ ಸೃಷ್ಟಿಯಲ್ಲಿ ಮನುಷ್ಯನೇ ಅತ್ಯಂತ ಶ್ರೇಷ್ಠ. ಏಕೆಂದರೆ, ಇವನಲ್ಲಿ 'ವಾಕ್' ಎಂಬ ಒಂದು ಅಪೂರ್ವ ಶಕ್ತಿಯಿದೆ ಮತ್ತು ಅಪೂರ್ವವಾದ ಬುದ್ಧಿಶಕ್ತಿ ಇದೆ. ಈ ಎರಡರ ಬಲದಿಂದ ತನ್ನೆಲ್ಲ ಭಾವನೆಗಳನ್ನೂ ಮಾತಿನ ಮುಖಾಂತರ, ಕರ - ಚರಣಾದಿಗಳ ಅಭಿನಯದ ಮುಖಾಂತರ ವ್ಯಕ್ತಪಡಿಸಬಲ್ಲ. ಇವನ ಬುದ್ಧಿಶಕ್ತಿ ಬೆಳೆದಂತೆಲ್ಲ ವಾಕ್ ಶಕ್ತಿ, ಭಾಷೆ, ಭಾಷಾಭಿವ್ಯಕ್ತಿ ಇತ್ಯಾದಿಗಳು ಬೆಳೆದವು. ತನ್ನಮಾತುಗಳಲ್ಲಿ ಚಮತ್ಕಾರತೆಯನ್ನೂ ಅಳವಡಿಸಿ ಕೊಂಡು, ಇವನ್ನು ಕಾವ್ಯಮಯವಾಗಿಸಬಲ್ಲ.

ಭರತಖಂಡದ ಅತ್ಯಂತ ಪ್ರಾಚೀನ ಸಾಹಿತ್ಯವೆಂದರೆ ವೇದಾದಿಗಳು. ಇವು ಋಷಿಗಳ ಆತ್ಮಾನುಭವದಿಂದ ಹೊರಬಂದವು. ಅಂತೆಯೇ ಇವು ಅಪೌರುಷೇಯವೆನಿಸಿವೆ. ಪೌರುಷೇಯವಾದ ಕಾವ್ಯದ ಸೃಷ್ಟಿಗೆ ಈ ವೈದಿಕ ಸಾಹಿತ್ಯ ಪ್ರಮುಖ ಪ್ರೇರಕವಾಗಿದೆಯೆನ್ನಬಹುದು. ಸ್ವಾಭಾವಿಕವಾಗಿಯೇ ಸೌಂದರ್ಯೋಪಾಸಕನಾದ ಕವಿಯು, ಲೋಕದಲ್ಲಿ ತಾನು ಕಂಡು ಅನುಭವಿಸಿದ ತನ್ನೆಲ್ಲ ಭಾವನೆಗಳಿಗೆ ಸೌಂದರ್ಯವನ್ನುತುಂಬಿ ಕಾವ್ಯರಚನೆ ಮಾಡುತ್ತಾನೆ. ಇವನ ಕಾವ್ಯದಲ್ಲಿನ ಸೌಂದರ್ಯಗಳ ಅಂಶಗಳನ್ನು ಸಹೃದಯನು ಪರಿಶೀಲಿಸಿ ತಾನು ಕಾವ್ಯಾನಂದಿಯಾಗುತ್ತಾನೆ. ಇಂತಹ ಕವಿಗಳ ಸೌಂದರ್ಯಪೂರ್ಣವಾಣಿಗಳಲ್ಲಿ ಅಡಗಿರುವ ಚಮತ್ಕಾರಗಳನ್ನು ಪ್ರತ್ಯೇಕಿಸಿ, ಚಿಂತಿಸಿ, ಪರಿಶೀಲನೆಮಾಡುವ ಸಲುವಾಗಿಯೇ ಅಲಂಕಾರಶಾಸ್ತ್ರದ ಉಗಮವಾಯಿತು.

ಈ ಶಾಸ್ತ್ರದ ಆದ್ಯ ಪ್ರವರ್ತಕನೆಂದರೆ ಭರತಮುನಿ. ಇವನ ನಾಟ್ಯಶಾಸ್ತ್ರವೇ ಮೊದಲ ಗ್ರಂಥ. ಇದಕ್ಕೂ ಮುನ್ನ ಇದ್ದಿರಬಹುದಾದ ಕೃತಿಗಳು ಇನ್ನೂ ದೊರೆತಿಲ್ಲ. ದೊರೆತಿರುವವುಗಳ ಪೈಕಿ ಈ ನಾಟ್ಯಶಾಸ್ತ್ರವೇ ಆದಿಮ ಗ್ರಂಥ. ಇದರಲ್ಲಿ ದೃಶ್ಯಕಾವ್ಯಕ್ಕೆ ಬೇಕಾದ ಎಲ್ಲ ಅಂಶಗಳನ್ನೂ ಭರತನು ಪರಿಶೀಲಿಸಿ ವಿವರಿಸಿರುವನು. ಇವುಗಳಲ್ಲಿ ಗುಣ, ಅಲಂಕಾರ, ದೋಷ, ರಸಾದಿಗಳೂ ಸಹ ಸೇರಿರುತ್ತವೆ. ಇವನು ಕೇವಲ ಯಮಕ (ಶಬ್ದಾಲಂಕಾರ), ಉಪಮಾ, ರೂಪಕ, ದೀಪಕ, (ಅರ್ಥಾಲಂಕಾರಗಳು) ಎಂಬ ನಾಲ್ಕು ಅಲಂಕಾರಗಳನ್ನು ಮಾತ್ರ ಹೆಸರಿಸುವನು. ಇವನ ಅನಂತರ ಭಾಮಹ, ದಂಡಿ, ವಾಮನ, ರುದ್ರಟ, ಉದ್ಭಟ, ಮಮ್ಮಟ, ವಿಶ್ವನಾಥ, ಅಪ್ಪಯ್ಯದೀಕ್ಷಿತ, ಜಯದೇವ, ಜಗನ್ನಾಥ ಮೊದಲಾದ ಅನೇಕ ಆಲಂಕಾರಿಕರು ಅಲಂಕಾರಗಳ ಬಗ್ಗೆ ಹೆಚ್ಚು ವಿಶ್ಲೇಷಣಾತ್ಮಕ ಕೃತಿಗಳನ್ನು ರಚಿಸಿರುವರು. ಇವರಲ್ಲಿ ಸುಮಾರು ಹದಿಮೂರನೆಯ ಶತಮಾನದಲ್ಲಿದ್ದವನೆಂದು ಹೇಳಲಾಗುವ ಜಯದೇವನು 'ಚಂದ್ರಾಲೋಕ' ಎಂಬ ಅಲಂಕಾರಶಾಸ್ತ್ರ ಗ್ರಂಥವೊಂದನ್ನು ರಚಿಸಿದನು. ಇದರ ಐದನೆಯ ಮಯೂಖದಲ್ಲಿ ಶಬ್ದಾಲಂಕಾರ ಮತ್ತು ಅರ್ಥಾಲಂಕಾರಗಳನ್ನು ವಿವರಿಸಿರುವನು. ಅನಂತರದ ಅಪ್ಪಯ್ಯದೀಕ್ಷಿತನು (ಕಾಲ ಕ್ರಿ.ಶ. 15-16ನೇ ಶತಮಾನ) ಈ ಗ್ರಂಥವನ್ನೂ, ರುಯ್ಯಕನ ಅಲಂಕಾರಸರ್ವಸ್ವ ಮೊದಲಾದ ಇತರ ಅಲಂಕಾರಶಾಸ್ತ್ರಸಂಬಂಧಿ ಗ್ರಂಥಗಳನ್ನೂ ಆಧಾರವಾಗಿಟ್ಟುಕೊಂಡು 'ಕುವಲಯಾನಂದ'ವೆಂಬ ಕೃತಿಯನ್ನು ರಚಿಸಿದನು. ಇದರಲ್ಲಿ ಒಂದು ನೂರು ಅಲಂಕಾರಗಳನ್ನು ಯೋಜಿಸಲಾಗಿದೆಯಲ್ಲದೆ,

ರಸವದಾದಿ ಇಪ್ಪತ್ತನಾಲ್ಕು ಅಲಂಕಾರಗಳನ್ನೂ ವಿವರಿಸಲಾಗಿದೆ. ರಸವದಾದ್ಯಲಂಕಾರಗಳನ್ನು ಬಿಟ್ಟು, ಒಂದುನೂರು ಅರ್ಥಾಲಂಕಾರಗಳ ಕಾರಿಕೆಗಳನ್ನೂ, ಮತ್ತು ಈ ಕಾರಿಕೆಗಳಿಗೆ ದೀಕ್ಷಿತರ ಬರೆದಿರುವ (ಕೆಲವೆಡೆ ಬರೆದಿರುವ, ಕೆಲವೆಡೆ ಬರೆಯದೇ ಇರುವ) ವೃತ್ತಿಯನ್ನೂ ಅವಲಂಬಿಸಿ, ಕೇವಲ ಕಾರಿಕೆಗಳನ್ನು ತೆಗೆದುಕೊಂಡು, ಇದಕ್ಕೆ 'ಚಂದ್ರಾಲೋಕ' ಎಂಬ ಹೆಸರನ್ನೇ ಇಟ್ಟು 1952ರಲ್ಲಿ ಚೆನ್ನಪುರಿಯ ವಾವಿಳ್ಳರಾಮಸ್ವಾಮಿ ಸನ್ಸ್‌ರವರು ಮುದ್ರಣ ಮಾಡಿಸಿರುವರು. ಈ ಗ್ರಂಥವೇ ಸದ್ಯಃ ಎಲ್ಲ ಆಗಮಗಳ ಪ್ರವರ ಪರೀಕ್ಷೆಯ ಸಾಹಿತ್ಯಪತ್ರಿಕೆಗೆ ಪಾಠ್ಯಗ್ರಂಥವಾಗಿರುತ್ತದೆ.

ಈಗ ಈ ಗ್ರಂಥವು ದೊರೆಯದೇ ಇರುವುದರಿಂದ, ವಿದ್ಯಾರ್ಥಿಗಳ ಅನುಕೂಲಕ್ಕೋಸ್ಕರ ಮೂಲಕಾರಿಕೆ, ಇವುಗಳಿಗೆ ಕನ್ನಡದ ಅನುವಾದ, ಲಕ್ಷಣಸಮನ್ವಯ, ಇತ್ಯಾದಿ ಅಂಶಗಳನ್ನು ಬರೆದು ಪ್ರಕಟಪಡಿಸಲಾಗುತ್ತಿದೆ .

ಕಾವ್ಯಕ್ಕೆ ಶಬ್ದ ಮತ್ತು ಅರ್ಥಗಳೇ ಶರೀರ, ರಸವೇ ಆತ್ಮ ಎಂಬುದು ಆಲಂಕಾರಿಕರ ಅಭಿಪ್ರಾಯ. ಕೆಲವು ಆಲಂಕಾರಿಕರು 'ವಾಕ್ಯಂ ಕಾವ್ಯಂ' ಎಂದು ಹೇಳಿರುವರು. ಮತ್ತೆ ಕೆಲವರು 'ಶಬ್ದಃ ಕಾವ್ಯಂ' ಎಂದಿರುವರು. ಮತ್ತೆ ಹಲವರು 'ಶಬ್ದಾರ್ಥೌ ಕಾವ್ಯಂ' ಎಂದು ಮೊದಲಾಗಿ ಕಾವ್ಯಲಕ್ಷಣವನ್ನು ಹೇಳಿರುವುದು ಕಂಡುಬರುತ್ತದೆ. ಶಬ್ದಾರ್ಥಗಳಿಗೆ ನಿತ್ಯಸಂಬಂಧವುಂಟಷ್ಟೆ! ಇದನ್ನು ಕಾಳಿದಾಸ ಮಹಾಕವಿಯು ವಾಗಾರ್ಥಾವಿವಸಂಪೃಕ್ತೌ..... ಎಂಬ ತನ್ನ ಮಂಗಳ ಪದ್ಯದಲ್ಲಿ ಸುಂದರವಾಗಿ ಹೇಳಿರುವನು. ಅರ್ಥವಿಲ್ಲದ ಶಬ್ದವೇ ಆಗಲಿ, ಶಬ್ದದಿಂದ ಹೊರತಾದ ಅರ್ಥವೇ ಆಗಲಿ ಇರುವುದಿಲ್ಲ. ಒಂದು ಶಬ್ದದ ಅಥವಾ ಒಂದು ಪದದ ಉಚ್ಚಾರಣೆಯಾಯಿತೆಂದರೆ ಅದಕ್ಕೆ ಒಂದು ಅರ್ಥ ಇದ್ದೇ ಇರುತ್ತದೆ. ಅಥವಾ ಒಂದೇ ಅರ್ಥ ಇರಬೇಕೆಂದೇನೂ ಅಲ್ಲ, ಅನೇಕ ಅರ್ಥಗಳೂ ಕೆಲವು ಪದಗಳಿಗೆ ಇರುತ್ತವೆ. ಇಂತಹ ಪದಗಳಿಗೆ ಹಾಗೂ ಈ ಪದಗಳ ಅರ್ಥಗಳಿಗೆ ಚಮತ್ಕಾರವನ್ನು ನೀಡುವುದೇ 'ಅಲಂಕಾರ'. ಅಲಂಕಾರಾರ್ಹವಾದ ಅಂದರೆ ಅಲಂಕಾರ್ಯವಾದ ರಸಾದಿಯೂ ಸಹ ಈ ಅಲಂಕಾರಗಳಿಂದ ಪರಿಪೋಷಿತವಾಗಿರುತ್ತದೆ. ಅಂತೆಯೇ ಮಾಧುರ್ಯಾದಿ ಗುಣಗಳನ್ನು ರಸಾದಿಧರ್ಮಗಳೆಂದೂ, ಅಲಂಕಾರಗಳನ್ನು ಶಬ್ದಾರ್ಥಧರ್ಮಗಳೆಂದೂ ಶಾಸ್ತ್ರಕಾರರು ವಿವರಿಸಿರುವರು. ಈ ದೃಷ್ಟಿಯಿಂದ ಈ ಅಲಂಕಾರಗಳನ್ನು 'ಅಂಗ' ಅಂದರೆ 'ಪೋಷಕ' ಎಂದೂ, ರಸಾದಿಯನ್ನು 'ಅಂಗೀ' ಎಂದರೆ 'ಪೋಷ್ಯ' ಅಥವಾ 'ಮುಖ್ಯ' ವೆಂದೂ ಹೇಳಲಾಗುತ್ತದೆ. ಒಂದು ಪದದಲ್ಲಿನ 'ಅಭಿಧಾ' ಎಂಬ ಶಕ್ತಿಯಿಂದ 'ವಾಚ್ಯಾರ್ಥ' ಪ್ರತೀತಿಯೂ, 'ವ್ಯಂಜನಾ' ಎಂಬ ವ್ಯಾಪಾರದಿಂದ ಅಥವಾ ಶಕ್ತಿಯಿಂದ 'ವ್ಯಂಗ್ಯಾರ್ಥ' ಪ್ರತೀತಿಯೂ ಆಗುತ್ತದೆ. ಉಪಮಾದ್ಯರ್ಥಾಲಂಕಾರಗಳು ಅಭಿಧೆಯಿಂದಲೂ ತೋರುತ್ತವೆ ಮತ್ತು ವ್ಯಂಜನೆಯಿಂದಲೂ ತೋರುತ್ತವೆ. ವಾಚ್ಯಕ್ಕಿಂತ ವ್ಯಂಗ್ಯವು ಹೆಚ್ಚು ಚಮತ್ಕಾರಾಧಾಯಕವಾಗಿದ್ದಲ್ಲಿ ಅದನ್ನು 'ಧ್ವನಿ' ಅಥವಾ 'ಉತ್ತಮ' ಕಾವ್ಯವೆಂದು ಹೇಳಲಾಗುತ್ತದೆ.

ಅಲಂಕಾರ ಎಂದರೆ 'ಆಭರಣ, ಶೋಭಾಧಾಯಕ' ಎಂದು ಅರ್ಥ. 'ಚಮತ್ಕಾರಜನಕ' ಎಂಬುದು ಶಾಸ್ತ್ರೀಯವಾದ ಅರ್ಥ. ಹಾರ, ಕಂಕಣ, ಕುಂಡಲಾದಿಗಳು ಶರೀರದ ಕಾಂತಿಯನ್ನು ಹೆಚ್ಚಿಸುವುದರಿಂದ ಅವುಗಳಿಗೆ 'ಆಭರಣ' ಎಂಬ ಪದವು ಅನ್ವರ್ಥವಾಗಿ ಪ್ರಯುಕ್ತವಾಗುವಂತೆ, ಕಾವ್ಯದಲ್ಲಿ ಶಬ್ದದ

ಮುಖಾಂತರ ಅಥವಾ ಅರ್ಥದ ಮುಖಾಂತರ ಕಾವ್ಯಕ್ಕೆ ಚಮತ್ಕಾರವನ್ನುಂಟುಮಾಡುವವೇ ಕ್ರಮವಾಗಿ ಶಬ್ದಾಲಂಕಾರ, ಅರ್ಥಾಲಂಕಾರ ಎನಿಸುತ್ತವೆ. ಅಂದರೆ ಶಬ್ದನಿಷ್ಠವಾದ ಚಮತ್ಕಾರವು ಶಬ್ದಾಲಾಂಕಾರವೆನಿಸಿದರೆ, ಅರ್ಥನಿಷ್ಠವಾದ ಚಮತ್ಕಾರವು ಅರ್ಥಾಲಂಕಾರ ವೆನಿಸುತ್ತದೆ. ಇವುಗಳ ಪರಸ್ಪರ ವೈಲಕ್ಷಣ್ಯವೆಂದರೆ ಶಬ್ದಾಲಂಕಾರದಲ್ಲಿ ಶಬ್ದಗಳ ಪರಿವೃತ್ತಿ ಸಾಧ್ಯವಿಲ್ಲ. ಆದರೆ ಅರ್ಥಾಲಂಕಾರದಲ್ಲಿ ಶಬ್ದಪರಿವೃತ್ತಿ ಸಾಧ್ಯ. ಅಂದರೆ ಶಬ್ದಪರಿವೃತ್ತಿಯನ್ನು ಸಹಿಸದಿರುವುದು ಶಬ್ದಾಲಂಕಾರವಾದರೆ ಶಬ್ದಪರಿವೃತ್ತಿಯನ್ನು ಸಹಿಸುವುದು ಅರ್ಥಾಲಂಕಾರ - ಇದೇ ಇವುಗಳ ಪ್ರಮುಖ ವೈಲಕ್ಷಣ್ಯ.

'ಅಲಂ' ಉಪಸರ್ಗಪೂರ್ವಕ 'ಕೃ' ಧಾತುವಿಗೆ 'ಚಮತ್ಕಾರಜನಕ' ಎಂಬ ಅರ್ಥವು ಸಂಗತ ವಾಗುತ್ತದೆಯಾಗಿ 'ಅಲಂಕಾರ' ಪದವು ನಿಷ್ಪನ್ನವಾಗಿರುತ್ತದೆಯಾದ್ದರಿಂದ, 'ಅಲಂಕಾರ' ಪದಕ್ಕೆ ನಾಲ್ಕು ರೀತಿಯಲ್ಲಿ ವಿವರಣೆಯನ್ನು ನೋಡಬಹುದು. ಹೇಗೆಂದರೆ

1. ಅಲಂಕರೋತಿ ಕಾವ್ಯಶರೀರಂ ಇತಿ ಅಲಂಕಾರಃ (ಕರ್ತರಿ ವ್ಯುತ್ಪತ್ತಿಃ) - 'ಯಾವುದು ಕಾವ್ಯ ಶರೀರವಾದ ಶಬ್ದಾರ್ಥಗಳನ್ನು ಅಲಂಕರಿಸಲ್ಪಡುತ್ತದೆಯೋ ಅದು ಅಲಂಕಾರ'.
2. ಅಲಂಕರೋತಿ ಕಾವ್ಯಶರೀರಂ ಅನೇನ (ಕರಣೇನ) ಇತ್ಯಲಂಕಾರಃ (ಕರಣವ್ಯುತ್ಪತ್ತಿಃ) -'ಯಾವ ಸಾಧನದ ಮುಖಾಂತರ ಕಾವ್ಯ ಶರೀರವಾದ ಶಬ್ದಾರ್ಥಗಳು ಅಲಂಕರಿಸಲ್ಪಡುತ್ತವೆಯೋ ಅದು ಅಲಂಕಾರ.
3. ಅಲಂಕ್ರಿಯತೇ ಇತಿ ಅಲಂಕಾರಃ (ಕರ್ಮವ್ಯುತ್ಪತ್ತಿಃ) - 'ಅಲಂಕರಿಸಲ್ಪಡುವುದರಿಂದ ಅಲಂಕಾರ ವೆನಿಸುತ್ತದೆ.
4. ಅಲಂಕರಣಂ ಅಥವಾ ಅಲಂಕೃತಿಃ ಅಲಂಕಾರಃ (ಭಾವವ್ಯುತ್ಪತ್ತಿಃ) - ಅಲಂಕರಿಸುವಿಕೆ ಅಲಂಕಾರವೆನಿಸುತ್ತದೆ.

ಈ ವ್ಯುತ್ಪತ್ತಿಗಳಿಂದ ಶಬ್ದಾರ್ಥಗಳು ಅಲಂಕಾರವೆನಿಸುವಂತೆ, ವ್ಯಂಗ್ಯವಾದ ರಸಾದಿಯೂ, ಸಮಗ್ರ ಸಾಹಿತ್ಯವೂ ಸಹ 'ಅಲಂಕಾರ' ಪದ ವಾಚ್ಯವಾಗುತ್ತದೆ - ಎಂಬುದು ನಮಗೆ ಸ್ಪಷ್ಟವಾಗುತ್ತದೆ. ಪ್ರಕೃತ ಚಂದ್ರಾಲೋಕದಲ್ಲಿ ಕೇವಲ ಅರ್ಥಾಲಂಕಾರಗಳ ವಿವರಣೆ ಇರುವುದರಿಂದ ಇನ್ನು ಮುಂದೆ ಅರ್ಥಾಲಂಕಾರಗಳ ಪರಿಶೀಲನೆಯನ್ನು ಮಾತ್ರ ಮಾಡಲಾಗುವುದು.

ಗ್ರಂಥಾರಂಭದಲ್ಲಿ ಮಂಗಳವನ್ನು ಆಚರಿಸುವುದು ಒಂದು ಶಿಷ್ಟಾಚಾರ. ಅಷ್ಟೇ ಅಲ್ಲ, ಗ್ರಂಥಾರಂಭದಲ್ಲಿ ಮಾಡುವಂತೆ ಗ್ರಂಥದ ಮಧ್ಯದಲ್ಲಿ ಹಾಗೂ ಗ್ರಂಥದ ಅಂತ್ಯದಲ್ಲಿ ಸಹ ಮಂಗಳವನ್ನು ಆಚರಿಸುವುದು ಶುಭಕರ.

ಅಂತೆಯೇ ಮಹಾಭಾಷ್ಯದಲ್ಲಿ ಹೀಗೆ ಹೇಳಲಾಗಿದೆ. ಮಂಗಲಾದೀನಿ, ಮಂಗಲಮಧ್ಯಾನಿ, ಮಂಗಲಾಂತಾನಿ ವಿಹಿತಾನಿ ಶಾಸ್ತ್ರಾಣಿ ಪ್ರಥಂತೇ ವೀರಪುರುಷಾಣ್ಯಾಯುಷ್ಮತ್ಪುರುಷಾಣಿ ಚ ಭವಂತಿ ಅಧ್ಯೇತಾರಶ್ಚ ಪ್ರವಕ್ತಾರೋ ಭವಂತಿ '.

ಮಂಗಳಕ್ಕೆ ವಿಷಯವಾದ ದೇವತೆಯು 1. ಇಷ್ಟದೇವತೆ 2. ಉಚಿತದೇವತೆ ಮತ್ತು 3. ಉಚಿತೇಷ್ಟದೇವತೆಯೆಂದು ಮೂರು ವಿಧ. ಕಾಲಿದಾಸನಿಗೆ ಪಾರ್ವತೀಪರಮೇಶ್ವರರು ಇಷ್ಟ ದೇವತೆಗಳು. ಕಾಮಶಾಸ್ತ್ರಕ್ಕೆ ಮನ್ಮಥನು ಉಚಿತದೇವತೆ. ವಿದ್ಯಾಧಿದೇವತೆ ಸರಸ್ವತಿ ಅಥವಾ ವಿಘ್ನೇಶ್ವರ ಉಚಿತೇಷ್ಟದೇವತೆ. ಅಂತೆಯೇ ಮಂಗಳದಲ್ಲಿ ಸಹ 1. ಆಶೀರ್ವಾದಾತ್ಮಕ 2. ನಮಸ್ಕಾರಾತ್ಮಕ 3. ವಸ್ತುನಿರ್ದೇಶಾತ್ಮಕ ಎಂದು ಮೂರು ವಿಧ. ಅಪ್ಪಯ್ಯದೀಕ್ಷಿತನು ತನ್ನ ಕುವಲಯಾನಂದದಲ್ಲಿ ಮೊದಲಿಗೆ ತನ್ನ ಇಷ್ಟದೇವತೆಗಳಾದ ಪಾರ್ವತೀಪರಮೇಶ್ವರರನ್ನು ಸ್ತೋತ್ರ ಮಾಡಿರುವನು. ಅದರಲ್ಲಿಯೂ ಮೊದಲ ಶ್ಲೋಕವಾದ 'ಅಮರೀಕಬರೀಭಾರ ...' ಪದ್ಯದಲ್ಲಿ ಪಾರ್ವತಿಯನ್ನು ಕುರಿತಾದ ಆಶೀರ್ವಾದಾತ್ಮಕ ಮಂಗಳವನ್ನು ಆಚರಿಸಿ, ಎರಡನೆಯದಾದ 'ಪರಸ್ಪರತಪಸ್ಸಂಪತ್ ...' ಪದ್ಯದಲ್ಲಿ ಪಾರ್ವತೀಪರಮೇಶ್ವರರ ನಮಸ್ಕಾರಾತ್ಮಕ ಮಂಗಳವನ್ನು ಮಾಡಿರುವನು. ವಸ್ತುನಿರ್ದೇಶಾತ್ಮಕ ಮಂಗಳಕ್ಕೆ ಕಾಳಿದಾಸನು ತನ್ನ ಕುಮಾರ ಸಂಭವದಲ್ಲಿ ಪ್ರಾರಂಭಿಸಿರುವ ಹಿಮಾಲಯದ ವರ್ಣನೆಯ ರೂಪವಾದ -'ಅಸ್ತ್ಯುತ್ತರಸ್ಯಾಂ ದಿಶಿ ದೇವತಾತ್ಮಾ'- ಎಂಬ ಪದ್ಯವೇ ಉದಾಹರಣೆ.

ಗ್ರಂಥಾರಂಭಕ್ಕೆ ಮುನ್ನ ಅನುಬಂಧ ಚತುಷ್ಟಯವನ್ನು ತಿಳಿಯುವುದು ಅತ್ಯಾವಶ್ಯಕವಾಗಿರುತ್ತದೆ. 1. ಅಧಿಕಾರಿ 2. ವಿಷಯ 3. ಸಂಬಂಧ 4. ಪ್ರಯೋಜನ ಇವೇ ಆ ಅನುಬಂಧ ಚತುಷ್ಟಯ.

1 **ಅಧಿಕಾರಿ** : ಎಲ್ಲ ಶಾಸ್ತ್ರಗಳನ್ನು ಬಲ್ಲವನಾಗಿದ್ದರೂ, ಅಧ್ಯಯನ ಮಾಡದೇ ಇರುವ ಅಲಂಕಾರಶಾಸ್ತ್ರವನ್ನು ಅಧ್ಯಯನಮಾಡತೊಡಗಿದವನೇ ಅಧಿಕಾರಿ.

2 **ವಿಷಯ** : ಇದೀಗ ಅಧ್ಯಯನಮಾಡತೊಡಗಿರುವ ಅಲಂಕಾರಶಾಸ್ತ್ರವೇ ವಿಷಯ.

3 **ಸಂಬಂಧ** : ಅಲಂಕಾರಶಾಸ್ತ್ರ ಸಂಬಂಧಿ ವಿಷಯವು ಪ್ರತಿಪಾದ್ಯವೆನಿಸುತ್ತದೆ. ಈ ವಿಷಯವನ್ನು ಪ್ರತಿಪಾದನೆಮಾಡುವ ಗ್ರಂಥವು ಪ್ರತಿಪಾದಕವೆನಿಸುತ್ತದೆ. ಆದ್ದರಿಂದ ವಿಷಯಕ್ಕೂ ಗ್ರಂಥಕ್ಕೂ ಇರುವ ಸಂಬಂಧವೆಂದರೆ ಪ್ರತಿಪಾದ್ಯ - ಪ್ರತಿಪಾದಕಭಾವ ಸಂಬಂಧ.

4 **ಪ್ರಯೋಜನ** : ಈ ಗ್ರಂಥದ ಅಧ್ಯಯನದಿಂದ ನಮಗೆ ಒದಗುವ ಅಲಂಕಾರಶಾಸ್ತ್ರದ ಪರಿಜ್ಞಾನವೇ ಪ್ರಯೋಜನ.

## ಮಂಗಳಶ್ಲೋಕಃ

**ಅಮರೀಕಬರೀಭಾರಭ್ರಮರೀಮುಖರೀಕೃತಮ್ ।**
**ದೂರೀಕರೋತು ದುರಿತಂ ಗೌರೀಚರಣಪಂಕಜಮ್ ॥ ೧ ॥**

ಗೌರೀದೇವಿಯ ಪಾದಕಮಲಗಳನ್ನು ದೇವತಾಸ್ತ್ರೀಯರು ನಮಸ್ಕಾರವಮಾಡುತ್ತಿರುವ ಸಂದರ್ಭದಲ್ಲಿ ,ಆ ದೇವತಾಸ್ತ್ರೀಯರ ಕೇಶಪಾಶದಲ್ಲಿನ ಹೂಗಳಲ್ಲಿ ಇದ್ದ ಭ್ರಮರಗಳ ಝುಂಕಾರವು

ಗೌರಿಯ ಪಾದಕಮಲದಲ್ಲಿ ಪ್ರತಿಧ್ವನಿಗ್ಗೆಯುತ್ತಿತ್ತು. ಇಂತಹ ಗೌರೀದೇವಿಯ ಪಾದಕಮಲವು ನಮ್ಮ ಎಲ್ಲ ದುರಿತಗಳನ್ನೂ ನಾಶಮಾಡಲಿ.

**ಪರಸ್ಪರತಪಸ್ಸಂಪತ್ಫಲಾಯಿತಪರಸ್ಪರೌ ।**
**ಪ್ರಪಂಚಮಾತಾಪಿತರೌ ಪ್ರಾಂಚೌ ಜಾಯಾಪತೀ ಸ್ತುಮಃ ॥ ೨ ॥**

ಪರಮೇಶ್ವರನ ತಪಸ್ಸೆಂಬ ಸಂಪತ್ತಿಗೆ ಫಲರೂಪವಾಗಿ ದೊರೆತವಳು ಪಾರ್ವತಿ; ಹಾಗೆಯೇ ಪಾರ್ವತಿಯ ತಪಸ್ಸೆಂಬ ಸಂಪತ್ತಿಗೆ ಫಲರೂಪವಾಗಿ ದೊರೆತವನು ಪರಮೇಶ್ವರ. ಹೀಗೆ ಪರಸ್ಪರರ ತಪಸ್ಸೆಂಬ ಸಂಪತ್ತಿಗೆ ಪರಸ್ಪರ ಫಲರೂಪವಾಗಿ ದೊರೆತಿರುವ, ಪ್ರಪಂಚಕ್ಕೆಲ್ಲಾ ತಾಯಿತಂದೆಯರೂ ಆಗಿರುವ ಪ್ರಾಚೀನ ದಂಪತಿಗಳಾದ ಪಾರ್ವತೀ ಪರಮೇಶ್ವರರನ್ನು ಸ್ತೋತ್ರ ಮಾಡುತ್ತೇವೆ.

**ಅಲಂಕಾರೇಷು ಬಾಲಾನಾಮವಗಾಹನಸಿದ್ಧಯೇ ।**
**ಲಲಿತಃ ಕ್ರಿಯತೇ ತೇಷಾಂ ಲಕ್ಷ್ಯಲಕ್ಷಣಸಂಗ್ರಹಃ ॥ ೩ ॥**

'ಅಧೀತಸರ್ವಶಾಸ್ತ್ರತ್ವೇ ಸತಿ ಅನಧೀತ - ಅಲಂಕಾರಶಾಸ್ತ್ರತ್ವಂ ಅಲಂಕಾರ ಶಾಸ್ತ್ರಬಾಲತ್ವಂ'. ಇತರ ಎಲ್ಲ ಶಾಸ್ತ್ರಗಳನ್ನು ಅಧ್ಯಯನಮಾಡಿದ್ದರೂ ಹೊಸದಾಗಿ ಅಲಂಕಾರಶಾಸ್ತ್ರವನ್ನು ಅಧ್ಯಯನಮಾಡತೊಡಗಿದವನೇ ಅಲಂಕಾರಶಾಸ್ತ್ರದ ಬಾಲಕ ಎನಿಸುವನು. ಹೀಗೆ ಅಲಂಕಾರಶಾಸ್ತ್ರದಲ್ಲಿ ಹೇಳಲ್ಪಟ್ಟಿರುವ ಅಲಂಕಾರಗಳನ್ನು ಅಧ್ಯಯನ ಮಾಡಲಾರಂಭಿಸಿರುವ ಅಧ್ಯೇತೃಬಾಲಕರಿಗೆ ಸುಲಭವಾಗಿ ಈ ಅಲಂಕಾರಗಳ ಪರಿಜ್ಞಾನವಾಗಲೆಂಬ ಪರಮ ಪ್ರಯೋಜನದಿಂದ, ಈ ಅಲಂಕಾರಗಳ ಸರಳವಾದ ಲಕ್ಷಣ ಮತ್ತು ಲಕ್ಷ್ಯಗಳನ್ನು ಸಂಗ್ರಹವಾಗಿ ನಿರೂಪಿಸಲಾಗುತ್ತದೆ.

## ೧. ಉಪಮಾಲಂಕಾರಃ

ಉಪಮಾ - ಎಂದರೆ ಸಾದೃಶ್ಯ. ಈ ಅಲಂಕಾರದಲ್ಲಿ ಉಪಮೇಯ, ಉಪಮಾನ, ಸಾಧಾರಣಧರ್ಮ ಮತ್ತು ವಾಚಕಶಬ್ದ ಎಂಬ ನಾಲ್ಕು ಅವಯವಗಳಿರುತ್ತವೆ. ಯಾವುದನ್ನು ವರ್ಣಿಸುತ್ತೇವೆಯೋ ಅದು ಉಪಮೇಯ. 'ಉಪಮಾತುಂ ಯೋಗ್ಯಂ ಉಪಮೇಯಂ'. ಉಪಮೇಯದ ಅತಿಶಯತೆಗಾಗಿ ಲೋಕಪ್ರಸಿದ್ಧವಾದ ಯಾವ ವಸ್ತುವನ್ನು ಹೋಲಿಕೆಯಾಗಿ ಹೇಳಲಾಗುತ್ತದೋ ಅದು ಉಪಮಾನ. 'ಉಪಮೀಯತೆ ಅನೇನ ಇತಿ ಉಪಮಾನಂ'. ಈ ಉಪಮೇಯ ಮತ್ತು ಉಪಮಾನಗಳಲ್ಲಿ ಸಮಾನವಾಗಿರುವ ಅಂಶವೇ 'ಸಾಧಾರಣಧರ್ಮ'. ಈ ರೀತಿಯ ಸಾಧರ್ಮ್ಯ ಅಥವಾ ಸಾದೃಶ್ಯವನ್ನು ಹೇಳುವುದೇ ವಾಚಕಶಬ್ದ. ಮತ್ತು ಉಪಮಾನವು ಲೋಕಪ್ರಸಿದ್ಧವೇ ಆಗಿರುವುದರಿಂದ, ಇದು ಸ್ವಾಭಾವಿಕವಾಗಿಯೇ ಅಧಿಕಗುಣವುಳ್ಳದ್ದು. ಉಪಮೇಯವು ಸ್ವಾಭಾವಿಕವಾಗಿಯೇ ನ್ಯೂನಗುಣವುಳ್ಳದ್ದು. ಆದರೂ ವರ್ಣನೆಗೆ ಯೋಗ್ಯವಾಗಿರುವುದರಿಂದ, ಉಪಮೇಯದಲ್ಲಿ ಚಮತ್ಕಾರ ವಿಶೇಷವನ್ನು ತೋರಿಸುವ ಸಲುವಾಗಿ

ಉಪಮಾನ ವಸ್ತುವನ್ನು ಹೋಲಿಕೆಯಾಗಿ ಕೊಡಲಾಗುತ್ತದೆ. 'ಉಪಮಾನಂ ಅಧಿಕಗುಣಕಂ, ಉಪಮೇಯಂ ನ್ಯೂನಗುಣಕಂ. ಉಪಮೇಯಕ್ಕೆ ವರ್ಣ್ಯ, ಪ್ರಸ್ತುತ, ಪ್ರಕೃತ, ವಿಷಯ ಇವು ಪರ್ಯಾಯ ಪದಗಳು. ಹಾಗೆಯೇ ಉಪಮಾನಕ್ಕೆ - ಅವರ್ಣ್ಯ, ಅಪ್ರಸ್ತುತ, ಅಪ್ರಕೃತ,ವಿಷಯೀ ಇವು ಪರ್ಯಾಯಪದಗಳು.

ಪ್ರತಿಯೊಂದು ಅಲಂಕಾರದ ವಿವರಣಾತ್ಮಕ ಕಾರಿಕೆಯಲ್ಲಿ ಲಕ್ಷಣ ಮತ್ತು ಲಕ್ಷ್ಯ ಎಂಬ ಎರಡು ಅಂಶಗಳಿರುತ್ತವೆ. ಲಕ್ಷಣವಾಕ್ಯವು ಅಲಂಕಾರದ ಸ್ವರೂಪವನ್ನು ತಿಳಿಸಿದರೆ, ಲಕ್ಷ್ಯವಾಕ್ಯವು ಉದಾಹರಣೆಯಾಗಿರುತ್ತದೆ. ಲಕ್ಷ್ಯವೆಂದರೆ ಉದಾಹರಣೆ ಎಂದೇ ಇಲ್ಲಿ ಅರ್ಥ. ಲಕ್ಷಣವಾಕ್ಯದಲ್ಲಿ ಸಹ ಉದ್ದೇಶ್ಯವಿಧೇಯಗಳೆಂಬ ಎರಡು ಅಂಶಗಳಿರುತ್ತವೆ.

ಬಹುಮಟ್ಟಿಗೆ ಎಲ್ಲ ಅಲಂಕಾರಗಳೂ ಸಹ 'ಕವಿಸಮಯ'ವನ್ನಾಶ್ರಯಿಸಿಯೇ ಕಾವ್ಯಶೋಭೆಯನ್ನುಂಟುಮಾಡುವುದರಿಂದ, ಇವುಗಳಿಗೆ 'ಅಲಂಕಾರ' ಎಂಬ ಹೆಸರು ಅನ್ವರ್ಥವಾಗಿರುತ್ತದೆ.

## ೧. ಉಪಮಾಲಂಕಾರಃ (ಅ)

**ಉಪಮಾ ಯತ್ರ ಸಾದೃಶ್ಯಲಕ್ಷ್ಮೀರುಲ್ಲಸತಿ ದ್ವಯೋಃ |**
**ಹಂಸೀವ ಕೃಷ್ಣ ತೇ ಕೀರ್ತಿಃ ಸ್ವರ್ಗಂಗಾಮವಗಾಹತೇ ||೧||**

ಲಕ್ಷಣ : ದ್ವಯೋಃ = ಉಪಮಾನೋಪಮೇಯಯೋಃ ಯತ್ರ = ಯತ್ರ ಕಾವ್ಯೇ ಸಾದೃಶ್ಯ ಲಕ್ಷ್ಮೀ : = ಸುಂದರಂ ಸಾದೃಶ್ಯಂ, ಉಲ್ಲಸತಿ (ಚೇತ್) = ಸ್ಪಷ್ಟಂ ಪ್ರಕಾಶತೇ ಚೇತ್ (ತತ್ರ) ಉಪಮಾ ಇತಿ ಅಲಂಕಾರಃ ಭವತಿ|

ಉಪಮಾನ ಮತ್ತು ಉಪಮೇಯಗಳಿಗೆ ಸುಂದರ ಸಾದೃಶ್ಯವನ್ನು ವರ್ಣಿಸಿದ್ದೇ ಆದರೆ, ಅದು ಉಪಮಾಲಂಕಾರವೆನಿಸುತ್ತದೆ.

**ಉದಾಹರಣೆ** : ಹೇ ಕೃಷ್ಣ ತೇ ಕೀರ್ತಿಃ ಹಂಸೀ ಇವ ಸ್ವರ್ಗಂಗಾಂ ಅವಗಾಹತೇ 'ಎಲೈ ಕೃಷ್ಣನೇ ನಿನ್ನ ಕೀರ್ತಿಯು ಸ್ವರ್ಗಗಂಗೆಯಲ್ಲಿ ಹಂಸಪಕ್ಷಿಯಂತೆ ತೇಲಾಡುತ್ತಿದೆ. (ಈಜಾಡುತ್ತಿದೆ)'.

ಈ ಉದಾಹರಣೆಯಲ್ಲಿ ಹಂಸೀ-ಉಪಮಾನ, ಕೀರ್ತಿ-ಉಪಮೇಯ , ಸ್ವರ್ಗಂಗಾವಗಾಹನಂ-ಸಾಧಾರಣಧರ್ಮ, ಇವ ವಾಚಕ ಶಬ್ದ. ಹೀಗೆ ಈ ನಾಲ್ಕೂ ಸಾಮಗ್ರಿಗಳು ಅಥವಾ ಅವಯವಗಳು ಶಬ್ದದ ದ್ವಾರಾ ಉಕ್ತವಾಗಿರುವುದರಿಂದ, ಇದು ಪೂರ್ಣೋಪಮಾಲಂಕಾರವಾಗುತ್ತದೆ.

ಸ್ವರ್ಗಂಗಾವಗಾಹನ ಎಂಬಲ್ಲಿ - ಹಂಸವೇನೋ ಆ ಗಂಗಾನದಿಯಲ್ಲಿ ಈಜಾಡುತ್ತಿದೆಯೆಂಬುದು ಸ್ಪಷ್ಟವಾಗುತ್ತದೆ. ಆದರೆ, ಭಾವನಾಮವಾದ ಮತ್ತು ಅಮೂರ್ತವಾದ ಕೀರ್ತಿಯು ಈಜಾಡುವುದೆಂದರೆ ಹೇಗೆ ? ಎಂಬ ಸಂದೇಹ ಬರುತ್ತದೆ. ಅಂದರೆ ದೇವತಾಸ್ತ್ರೀಯರು ಅಲ್ಲಿಸ್ನಾನ ಮಾಡುತ್ತಾ, ಕೃಷ್ಣನ ಕೀರ್ತಿಯನ್ನು ಗಾನರೂಪವಾಗಿ ಹೊಗಳುತ್ತಿರುವರೆಂದು ತಾತ್ಪರ್ಯ.

ಬಿಂಬ ಪ್ರತಿಬಿಂಬಭಾವದಿಂದಲೂ ಸಾಧಾರಣಧರ್ಮವು ವರ್ಣಿತ ವಾಗಿರುತ್ತದೆಂಬುದಕ್ಕೆ ಉದಾಹರಣೆ -

ಗುಣದೋಷೌ ಬುಧೋ ಗೃಹ್ಣನ್ನಿಂದುಕ್ಷ್ವೇಡಾವಿವೇಶ್ವರಃ ।
ಶಿರಸಾಶ್ಲಾಘತೇ ಪೂರ್ವಂ ಪರಂ ಕಂಠೇ ನಿಯಚ್ಛತಿ ॥

ಇಲ್ಲಿ ಗುಣ-ಚಂದ್ರ, ದೋಷ-ವಿಷ ಇವುಗಳಿಗೆ ಬಿಂಬಪ್ರತಿಬಿಂಬಭಾವದಿಂದ ಸಾದೃಶ್ಯ ವಿರುತ್ತದೆ. 'ಬಿಂಬಪ್ರತಿಬಿಂಬಭಾವ' ವೆಂದರೆ - ವಸ್ತುತಃ ಭಿನ್ನಯೋರಪಿ ಉಪಮಾನೋಪಮೇಯಧರ್ಮಯೋಃ ಪರಸ್ಪರಸಾದೃಶ್ಯಾದಭಿನ್ನಯೋಃ ಪೃಥಗುಪಾದಾನಂ ಬಿಂಬಪ್ರತಿಬಿಂಬ ಭಾವಃ 'ಉಪಮಾನದ ಧರ್ಮ ಹಾಗೂ ಉಪಮೇಯದ ಧರ್ಮಗಳು ಪರಸ್ಪರ ಭಿನ್ನವೇ ಆಗಿದ್ದರೂ, ಅವೆರಡರಲ್ಲಿ ಇರಬಹುದಾದ ಸಾದೃಶ್ಯದಿಂದಾಗಿ ಅವುಗಳನ್ನು ಅಭಿನ್ನಗಳೆಂದು ಪರಿಗಣಿಸಿ, ಪ್ರತ್ಯೇಕ ಪ್ರತ್ಯೇಕಪದದ ರೂಪದಲ್ಲಿ ಹೇಳುವುದೇ ಬಿಂಬಪ್ರತಿಬಿಂಬಭಾವ'. ಪ್ರಕೃತ ಗುಣ-ಚಂದ್ರರಲ್ಲಿ ಶುಭ್ರತೆ, ದೋಷ-ವಿಷಗಳಲ್ಲಿ ನೀಲತ್ವರೂಪಧರ್ಮಗಳಿಂದ ಬಿಂಬ ಪ್ರತಿಬಿಂಬ ಭಾವವಿದೆ.

## ೧. ಲುಪ್ತೋಪಮಾಲಂಕಾರ : (ಅ)

ಇದು ಉಪಮಾಲಂಕಾರದ ಭೇದವೇ ಆಗಿರುತ್ತದೆ. ಪೂರ್ವೋಕ್ತ ನಾಲ್ಕು ಅವಯವಗಳ ಪೈಕಿ ಯಾವುದಾದರೊಂದು, ಎರಡು ಅಥವಾ ಮೂರು ಅವಯವಗಳು ಶಬ್ದದ ಮುಖಾಂತರ ಅನುಕ್ತವಾಗಿದ್ದಲ್ಲಿ ಅದು ಲುಪ್ತೋಪಮಾಲಂಕಾರವಾಗುತ್ತದೆ.

ವರ್ಣ್ಯೋಪಮಾನಧರ್ಮಾಣಾಮುಪಮಾವಾಚಕಸ್ಯ ಚ ।
ಏಕದ್ವಿತ್ರ್ಯನುಪಾದಾನೈರ್ಭಿನ್ನಾ ಲುಪ್ತೋಪಮಾಷ್ಟಧಾ ॥ ೨ ॥

'ಲುಪ್ತಾಃ ಅವಯವಾಃ ಯಸ್ಯಾಂ ಸಾ ಲುಪ್ತಾವಯವಾ / ಲುಪ್ತಾವಯವಾ ಚ ಅಸೌ ಉಪಮಾ ಚ ಲುಪ್ತೋಪಮಾ'. ವರ್ಣ್ಯ (ಉಪಮೇಯ,) ಉಪಮಾನ, ಸಾಧಾರಣ ಧರ್ಮ ಮತ್ತು ಉಪಮಾವಾಚಕ-ಈ ನಾಲ್ಕರ ಪೈಕಿ ಯಾವುದಾದರೊಂದು, ಎರಡು ಅಥವಾ ಮೂರು ಅವಯವಗಳು ಶಬ್ದದ್ವಾರಾ ಅನುಕ್ತವಾಗಿದ್ದಲ್ಲಿ ಅದು ಲುಪ್ತೋಪಮಾಲಂಕಾರವೆನಿಸುತ್ತದೆ. ಇದು ಒಟ್ಟು ಎಂಟು ವಿಧವಾಗಿರುತ್ತದೆ.

'ವರ್ಣ್ಯಂ ಚ ಉಪಮಾನಂ ಚ ಧರ್ಮಶ್ಚ ವರ್ಣ್ಯೋಪಮಾನಧರ್ಮಾ:, ತೇಷಾಂ ಉಪಮಾಯಾಃ ವಾಚಕಸ್ಯಚ ಮಧ್ಯೇ, ಏಕಸ್ಯ, ದ್ವಯೋಃ, ತ್ರಯಾಣಾಂ ವಾ ಅನುಪಾದಾನೇನ ಯಾ ಭವತಿ ಲುಪ್ತೋಪಮಾ, ಸಾ ಅಷ್ಟಧಾ ಭಿನ್ನಾ ।

1. ವಾಚಕಲುಪ್ತಾ 2. ಧರ್ಮಲುಪ್ತಾ 3. ಧರ್ಮವಾಚಕಲುಪ್ತಾ 4. ವಾಚಕೋಪಮೇಯಲುಪ್ತಾ 5. ಉಪಮಾನಲುಪ್ತಾ 6. ವಾಚಕೋಪಮಾನಲುಪ್ತಾ 7. ಧರ್ಮೋಪಮಾನಲುಪ್ತಾ 8. ಧರ್ಮೋಪಮಾನವಾಚಕಲುಪ್ತಾ - ಎಂಬಿವೇ ಆ ಎಂಟು ಭೇದಗಳು. ಇವುಗಳಿಗೆ ಕ್ರಮವಾಗಿ

ಉದಾಹರಣೆ -

> ತಡಿದ್ಗೌರೀಂದುತುಲ್ಯಾಸ್ಯಾ ಕರ್ಪೂರಂತೀ ದೃಶೋರ್ಮಮ ।
> ಕಾಂತ್ಯಾ ಸ್ಮರವಧೂಯಂತೀ ದೃಷ್ಟಾ ತನ್ವೀ ರಹೋ ಮಯಾ ॥ ೩ ॥
> ಯತ್ತಯಾ ಮೇಲನಂ ತತ್ರ ಲಾಭೋ ಮೇ ಯಶ್ಚ ತದ್ರತೇಃ ।
> ತದೇತತ್ಕಾಕತಾಲೀಯಮವಿತರ್ಕಿತಸಂಭವಂ ॥ ೪ ॥

1. ತಡಿದ್ಗೌರೀ 2. ಇಂದುತುಲ್ಯಾಸ್ಯಾ 3. ಮಮ ದೃಶೋಃ ಕರ್ಪೂರಂತೀ
4. ಕಾಂತ್ಯಾಸ್ಮರವಧೂಯಂತೀ ತನ್ವೀ ಮಯಾ ರಹಃ ದೃಷ್ಟಾ

1. ಮಿಂಚಿನಂತೆ ಗೌರವರ್ಣವುಳ್ಳವಳೂ 2. ಚಂದ್ರನಂತೆ ಮುಖವುಳ್ಳವಳೂ 3.ನನ್ನ ನೇತ್ರಗಳಿಗೆ ಕರ್ಪೂರದಂತೆ ತಂಪನ್ನು ನೀಡತಕ್ಕವಳೂ 4. ತನ್ನ ಕಾಂತಿಯಿಂದ ತಾನು ಸಾಕ್ಷಾತ್ ಸ್ಮರಪತ್ನೀ (ರತಿ) ಎಂದು ತನ್ನನ್ನು ತೋರಿಸಿಕೊಳ್ಳುವವಳೂ ಆದ ತರುಣಿಯು ನನ್ನಿಂದ ಏಕಾಂತದಲ್ಲಿ ನೋಡಲ್ಪಟ್ಟಳು. 'ತತ್ರ ತಯಾ (ಸಹ) ಯತ್‌ಮೇಲನಂ (ಜಾತಂ), ಚ, ಮೇ ಯಃ ತದ್ರತೇಃ **ಲಾಭಃ (ಅಭವತ್) (ಇತಿ) ತದೇತತ್,ಅವಿತರ್ಕಿತಸಂಭವಂ ಕಾಕತಾಲೀಯಂ(ಅಭವತ್).**

ಆ ಏಕಾಂತಸ್ಥಳದಲ್ಲಿ ಅವಳ ಭೇಟಿಯಾಗುವಿಕೆ ಮತ್ತು ಅವಳೊಡನೆ ನನಗೆ ರತಿಸುಖ ಪ್ರಾಪ್ತಿ ಇವು ನಾನು ಊಹಿಸದೇ ಇದ್ದ ಕಾಕತಾಲೀಯವೇ ಆಯಿತು.

'ತಡಿದ್ಗೌರೀ' ಎಂಬ ಉದಾಹರಣೆಯಲ್ಲಿ ಮೊದಲ ನಾಲ್ಕು ಭೇದಗಳ ಸಮನ್ವಯ, ಹಾಗೂ 'ಯತ್ತಯಾ' ಎಂಬ ಉದಾಹರಣೆಯಲ್ಲಿ ಕಡೆಯ ನಾಲ್ಕು ಭೇದಗಳ ಸಮನ್ವಯವಾಗುತ್ತದೆ. ಹೇಗೆಂದರೆ

೧. **ವಾಚಕಲುಪ್ತಾ** : **'ತಡಿದ್ಗೌರೀ ತನ್ವೀ ರಹಃ ಮಯಾ ದೃಷ್ಟಾ'** ಎಂಬಲ್ಲಿ ತಡಿದಿವ ಗೌರೀ **ತಡಿದ್ಗೌರೀ** ಎಂದು ವಿಗ್ರಹ. ಉಪಮಾನಾನಿ ಸಾಮಾನ್ಯವಚನೈಃ, ಎಂಬ ಪಾಣಿನಿಯ ಸೂತ್ರದಿಂದ ಇಲ್ಲಿ ಸಮಾಸವಾಗಿರುತ್ತದೆ. ತಡಿತ್- ಉಪಮಾನ, ತನ್ವೀ - ಉಪಮೇಯ, ಗೌರೀ - ಸಾಧಾರಣಧರ್ಮ, ಇವ ವಾಚಕಶಬ್ದವು ಸಮಾಸದಲ್ಲಿ ಸೇರಿರುವುದರಿಂದ ವಾಚಕಲುಪ್ತೋಪಮಾಲಂಕಾರ.

೨. **ಧರ್ಮಲುಪ್ತಾ** : **'ಇಂದು ತುಲ್ಯಾಸ್ಯಾ ತನ್ವೀ ಮಯಾ ದೃಷ್ಟಾ'** ಇಲ್ಲಿ **'ಇಂದುನಾ ತುಲ್ಯಂ ಆಸ್ಯಂ ಯಸ್ಯಾಃ ಸಾ'** ಎಂದು ವಿಗ್ರಹವಾಕ್ಯ. ಇಲ್ಲಿ ಇಂದು- ಉಪಮಾನ, ಆಸ್ಯಂ - ಉಪಮೇಯ, ತುಲ್ಯಂ - ವಾಚಕಶಬ್ದ, 'ಕಾಂತ್ಯಾ = ತನ್ನ ಕಾಂತಿಯಿಂದ' ಎಂಬ ಸಾಧಾರಣಧರ್ಮವು ಅನುಪಾತ್ರವಾಗಿರುವುದರಿಂದ, ಇದು ಧರ್ಮಲುಪ್ತೋಪಮಾಲಂಕಾರ. ಈ ಲೋಪವು ಐಚ್ಛಿಕ ವಾದುದು, ಶಾಸ್ತ್ರಕೃತವಲ್ಲ.

೩. **ಧರ್ಮವಾಚಕಲುಪ್ತಾ** : 'ಮಮ ದೃಶೋಃ ಕರ್ಪೂರಂತೀ ತನ್ವೀ ದೃಷ್ಟಾ' ಇಲ್ಲಿ ಕರ್ಪೂರಂತೀ ಎಂಬಲ್ಲಿ **'ಕರ್ಪೂರಂ ಇವ ಆಚರತೀ'** ಎಂದು ವಿಗ್ರಹ. ಕರ್ಪೂರಶಬ್ದದ ಮೇಲೆ

ಆಚಾರಾರ್ಥದಲ್ಲಿ 'ಕ್ವಿಪ್' ಪ್ರತ್ಯಯ ಬಂದು ಲೋಪವಾಗಿದೆ. ಕರ್ಪೂರ-ಉಪಮಾನ, ತನ್ವೀ-ಉಪಮೇಯ, ಆಚರಣ - ಸಾಧಾರಣಧರ್ಮ ಇವ - ವಾಚಕ ಶಬ್ದ. ಇಲ್ಲಿ ಸಾಧಾರಣಧರ್ಮ ಮತ್ತು ವಾಚಕಶಬ್ದಗಳು ಅನುಪಾತ್ತವಾಗಿರುವುದರಿಂದ *ಧರ್ಮವಾಚಕಲುಪ್ತೋಪಮಾಲಂಕಾರ.*

೪. ವಾಚಕೋಪಮೇಯಲುಪ್ತಾ : 'ಕಾಂತ್ಯಾ ಸ್ಮರವಧೂಯಂತೀ ತನ್ವೀ ದೃಷ್ಟಾ' ಇಲ್ಲಿ (ಆತ್ಮಾನಂ) ಸ್ಮರವಧೂಂ ಇವ ಆಚರಂತೀ' ಎಂದು ವಿಗ್ರಹ. ಆಚಾರಾರ್ಥದಲ್ಲಿ 'ಕ್ಯಚ್' ಪ್ರತ್ಯಯ ಬಂದು 'ಸ್ಮರವಧೂಯಂತೀ' ಎಂದಾಗಿದೆ. ಆದ್ದರಿಂದ ಇಲ್ಲಿ ಸ್ಮರವಧೂಃ ಉಪಮಾನ, ಅಧ್ಯಾಹಾರಗೊಳ್ಳುವ 'ಆತ್ಮಾ' ಉಪಮೇಯ, ಕಾಂತ್ಯಾ-ಸಾಧಾರಣಧರ್ಮ, ಇವ - ವಾಚಕ ಶಬ್ದ. ಇಲ್ಲಿ ವಾಚಕ ಶಬ್ದ ಹಾಗೂ ಉಪಮೇಯವು ಶಬ್ದದ್ವಾರಾ ಅನುಕ್ತವಾಗಿರುವುದರಿಂದ. ವಾಚಕೋಪಮೇಯಲುಪ್ತೋಪಮಾಲಂಕಾರ. ಮುಂದಿನ ನಾಲ್ಕು ಭೇದಗಳ ಸಮನ್ವಯಕ್ಕೆ ಮುನ್ನ ವಿಚಾರಣೀಯವಾದ ಅಂಶವೆಂದರೆ - ಕಾಕತಾಲೀಯಂ ಎಂಬ ಪದದ ವಿಗ್ರಹವನ್ನು ಹೀಗೆ ನೋಡಬಹುದು.

1. **ಕಾಕಾಗಮನಮಿವ ತಾಲಪತನಮಿವ ಕಾಕತಾಲಂ,**
2. **ಕಾಕತಾಲಮಿವ ಕಾಕತಾಲೀಯಂ** ಮೊದಲನೆಯ ವಿಗ್ರಹ **'ಸಮಾಸಾರ್ಥೋಪಮಾ'** ಎನಿಸಿದರೆ ಎರಡನೆಯ ವಿಗ್ರಹ 'ಪ್ರತ್ಯಯಾರ್ಥೋಪಮಾ' ಎನಿಸಿದೆ.

   ಪ್ರತ್ಯಯಾರ್ಥೋಪಮಾದಲ್ಲಿ, ಇವಾರ್ಥದಲ್ಲಿ 'ಛ' ಪ್ರತ್ಯಯ ಬಂದು, ಈ 'ಛ' ಪ್ರತ್ಯಯಕ್ಕೆ **'ಈಯ್'** ಎಂಬ ಆದೇಶ ಬಂದು ಕಾಕತಾಲೀಯಂ ಆಗಿದೆ. 'ಯತ್ ತಯಾ ಮೇಲನಂ' ಎಂಬುದು ಉಪಮೇಯ, 'ಕಾಕತಾಲಂ' ಎಂಬುದು ಉಪಮಾನ. ಅಂದರೆ - 'ಏಕಾಂತಸ್ಥಳಕ್ಕೆ ತನ್ನ ಹೋಗುವಿಕೆ ಮತ್ತು ಅಲ್ಲಿ ಆ ತನ್ವಿಯ ಇರುವಿಕೆ' ಎಂಬುದು ಉಪಮೇಯ; ಕಾಗೆಯ ಆಗಮನ, ಅದೇ ವೇಳೆಗೆ ತಾಲಫಲದ ಬೀಳುವಿಕೆ ಇದು ಉಪಮಾನ. *'ಅವಿತರ್ಕಿತಸಂಭವಂ'* ಎಂಬುದು ಸಾಧಾರಣಧರ್ಮ. 'ಇವ - ವಾಚಕ ಶಬ್ದವು ಸಮಾಸದಲ್ಲಿ ಸೇರಿಹೋಗಿದೆ. ಇದು ಸಮಾಸಾರ್ಥೋಪಮಾದ ವಿವರಣೆ. ಹಾಗೆಯೇ, ಪ್ರತ್ಯಯಾರ್ಥೋಪಮಾದಲ್ಲಿ 'ಮೇ ತದ್ರತೇಃ ಲಾಭಃ' ಎಂಬುದು ಉಪಮೇಯ; ಅಂದರೆ - 'ಆ ತನ್ವಿಯೊಡನೆ ನನಗೆ ಉಂಟಾದ ರತಿ ಲಾಭ' ಎಂಬುದು ಉಪಮೇಯ. **ಕಾಕತಾಲೀಯಂ** - ಎಂಬಲ್ಲಿ 'ಕಾಗೆಯು ಹೇಗೆ ತಾಲಫಲವನ್ನು ಅನುಭವಿಸಿತೋ', ಎಂಬುದು ಉಪಮಾನ. ಇದು ಸಮಾಸದಲ್ಲಿ ಸೇರಿಹೋಗಿದೆ. 'ಅವಿತರ್ಕಿತಸಂಭವಂ' ಎಂಬುದು ಸಾಧಾರಣಧರ್ಮ. 'ಇವ' ವಾಚಕಶಬ್ದದ ಸ್ಥಾನದಲ್ಲಿ 'ಈಯ್' ಪ್ರತ್ಯಯವು ಇರುವುದರಿಂದ ವಾಚಕಶಬ್ದವಿದ್ದಂತಾಯ್ತು.

೫. ಉಪಮಾನಲುಪ್ತಾ : ಪ್ರತ್ಯಯಾರ್ಥೋಪಮಾ ಸ್ಥಳದಲ್ಲಿ - 'ರಹೋದರ್ಶನಕ್ಷುಭಿತಹೃದಯಾ ತನ್ವೀ ಸ್ವೈನ ಉಪಭುಕ್ತಾ' - ಎಂಬುದು ಉಪಮೇಯ, 'ಈಯ್' ವಾಚಕ ಶಬ್ದ (ಇವಾರ್ಥಕ ಪ್ರತ್ಯಯ ಸ್ಥಾನದಲ್ಲಿ ಬಂದಿರುವುದು) 'ಅವಿತರ್ಕಿತಸಂಭವಂ' ಸಾಧಾರಣಧರ್ಮ, ಆದರೆ -

'ಕಾಕಕೃತತಾಲಫಲೋಪಭೋಗಃ' ಎಂಬ ಉಪಮಾನವು ಸಮಾಸದಲ್ಲಿ ಸೇರಿ, ಶಬ್ದತಃ ಅನುಪಾತ್ತವಾಗಿರುವುದರಿಂದ ಉಪಮಾನಲುಪ್ತೋಪಮಾಲಂಕಾರ.

೬. ವಾಚಕೋಪಮಾನಲುಪ್ತಾ : ಸಮಾಸಾರ್ಥೋಪಮಾ ಸ್ಥಳದಲ್ಲಿ 'ತತ್ರ ಸ್ವಸ್ಯ ತಸ್ಯಾಶ್ಚ ಸಮಾಗಮಃ' ಎಂಬುದು ಉಪಮೇಯ. 'ಕಾಕತಾಲಸಮಾಗಮಃ' ಎಂಬುದು ಉಪಮಾನ. ಇವ - ವಾಚಕ ಶಬ್ದ ಮತ್ತು ಈ ಉಪಮಾನ ಮತ್ತು ವಾಚಕಗಳೆರಡೂ ಸಮಾಸದಲ್ಲಿ ಸೇರಿಯುವುದರಿಂದ ಲುಪ್ತವಾಗಿದೆ. 'ಅವಿತರ್ಕಿತಸಂಭವಂ' ಇದು ಸಾಧಾರಣಧರ್ಮ. ಹೀಗೆ ಇಲ್ಲಿ ವಾಚಕ ಶಬ್ದ ಮತ್ತು ಉಪಮಾನಗಳು ಶಬ್ದತಃ ಅನುಪಾತ್ತವಾಗಿರುವುದರಿಂದ ಇಲ್ಲಿ ವಾಚಕೋಪಮಾನಲುಪ್ತೋಪಮಾಲಂಕಾರ.

೭. ಧರ್ಮೋಪಮಾನಲುಪ್ತಾ : 'ಉಪಮಾನಲುಪ್ತ - ಪ್ರತ್ಯಯಾರ್ಥೋಪಮಾದಲ್ಲಿ' 'ಅವಿತರ್ಕಿತಸಂಭವಂ' ಎಂಬ ಸಾಧಾರಣಧರ್ಮಕ್ಕೆಬದಲಾಗಿ, 'ಅಭವತ್ ಕಿಂ ಬ್ರವೀಮಿ ತೇ' ಎಂಬ ಪಾಠವನ್ನು ಸ್ವೀಕರಿಸಿದರೆ, ಆಗ ಧರ್ಮಲುಪ್ತವೂ ಆಗಿ ಧರ್ಮೋಪಮಾನಲುಪ್ತೋಪಮಾಲಂಕಾರವಾಗುತ್ತದೆ.

೮. ಧರ್ಮೋಪಮಾನವಾಚಕಲುಪ್ತಾ : ವಾಚಕೋಪಮಾನಲುಪ್ತ - ಸಮಾಸಾರ್ಥೋಪಮಾ ಸ್ಥಳದಲ್ಲಿ 'ಅವಿತರ್ಕಿತಸಂಭವಂ' ಎಂಬ ಸಾಧಾರಣಧರ್ಮಕ್ಕೆ ಬದಲಾಗಿ 'ಅಭವತ್ ಕಿಂ ಬ್ರವೀಮಿ ತೇ' ಎಂಬ ಪಾಠವನ್ನು ಇಟ್ಟುಕೊಂಡರೆ, ಆಗ ಧರ್ಮಲುಪ್ತವೂ ಸಂಭವಿಸಿ ಧರ್ಮೋಪಮಾನವಾಚಕಲುಪ್ತೋಪಮಾಲಂಕಾರವಾಗುತ್ತದೆ.

## ೨. ಅನನ್ವಯಾಲಂಕಾರಃ

'(ಸ್ವಸ್ಯ ಸ್ವೇನ ಸಾಧರ್ಮ್ಯಂ) ನ ಅನ್ವೇತಿ ಇತಿ ಅನನ್ವಯಃ'. ಒಂದೇ ವಸ್ತುವಿಗೆ ಉಪಮಾನತ್ವ ಮತ್ತು ಉಪಮೇಯತ್ವವನ್ನು ಹೇಳುವುದು ಈ ಅಲಂಕಾರದ ತತ್ತ್ವ. ಆದ್ದರಿಂದಲೇ ಒಂದೇ ವಸ್ತುವು ತನಗೆ ತಾನೇ ಹೋಲಿಕೆಯನ್ನು ಹೊಂದಲಾರದಾಗಿ 'ಅನನ್ವಯ' ಎಂಬ ಹೆಸರು ಅನ್ವರ್ಥ. ಹೀಗೆ ವರ್ಣಿಸುವುದರ ಮುಖ್ಯ ತತ್ತ್ವವೆಂದರೆ, 'ತನ್ನನ್ನು ಹೊರತು, ತನಗೆ ಸದೃಶವಾದ ಬೇರೊಂದು ವಸ್ತುವೇ ಇರುವುದಿಲ್ಲ' ಎಂಬುದೇ ಆಗಿದೆ.

> **ಉಪಮಾನೋಪಮೇಯತ್ವಂ ಯದೇಕಸ್ಯೈವ ವಸ್ತುನಃ ।**
> **ಇಂದುರಿಂದುರಿವ ಶ್ರೀಮಾನಿತ್ಯಾದೌ ತದನನ್ವಯಃ ॥ ೫ ॥**

'ಏಕಸ್ಯೈವ ವಸ್ತುನಃ ಯತ್, ಉಪಮಾನೋಪಮೇಯತ್ವಂ, (ಸಃ) (ತತ್) ಅನನ್ವಯಃ' (ಇತ್ಯಲಂಕಾರಃ ಭವತಿ). ಒಂದೇ ವಸ್ತುವಿಗೆ ಉಪಮಾನತ್ವ ಮತ್ತು ಉಪಮೇಯತ್ವವನ್ನು ವರ್ಣಿಸಿದ್ದಾದರೆ ಅದು ಅನನ್ವಯಾಲಂಕಾರ.

**ಉದಾಹರಣೆ :** 'ಇಂದುಃ ಇಂದುರಿವ ಶ್ರೀಮಾನ್' 'ಚಂದ್ರನು ಚಂದ್ರನಂತೆಯೇ ಕಾಂತಿಮಂತ' ಇಲ್ಲಿ ಮೊದಲನೆಯ ಇಂದು ಪದವು ಉಪಮೇಯ, ಎರಡನೆಯ ಇಂದು ಪದವು ಉಪಮಾನ.

ಇವ ವಾಚಕ ಶಬ್ದ, ಶ್ರೀಮತ್ತ್ವ ಸಾಧಾರಣಧರ್ಮ. ಇಂದುವಿಗೇ ಉಪಮಾನತ್ವ - ಉಪಮೇಯತ್ವಗಳನ್ನು ಹೇಳಿರುವುದರಿಂದ ಇದು ಅನನ್ವಯಾಲಂಕಾರ. ಇದರ ತತ್ತ್ವವೆಂದರೆ, ಚಂದ್ರನಿಗೆ ಚಂದ್ರನೇ ಸಮಾನ, ಇವನಿಗೆ ಸದೃಶವಾದ ಎರಡನೆಯ ವಸ್ತುವೇ ಇಲ್ಲ (ದ್ವಿತೀಯ ಸದೃಶವಸ್ತು ವ್ಯವಚ್ಛೇದಕತ್ವಂ) ಎಂಬುದು. ಪ್ರಸಿದ್ಧವಾದ ಮತ್ತೊಂದು ಉದಾಹರಣೆಯೆಂದರೆ.

> ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ ।
> ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ ॥

ವೈಶಾಲ್ಯದಲ್ಲಿ ಗಗನಕ್ಕೆ ಗಗನವೇ ಸಮಾನ, ಗಾಂಭೀರ್ಯದಲ್ಲಿ ಸಾಗರಕ್ಕೆ ಸಾಗರವೇ ಸಮಾನ ಭಯಂಕರತೆಯಲ್ಲಿ ರಾಮರಾವಣರ ಯುದ್ಧಕ್ಕೆ ರಾಮರಾವಣರ ಯುದ್ಧವೇ ಸದೃಶ.

## ೩. ಉಪಮೇಯೋಪಮಾಲಂಕಾರಃ

ಅನನ್ವಯಾಲಂಕಾರದಲ್ಲಿ ಒಂದೇ ವಸ್ತುವಿಗೆ ಉಪಮೇಯತ್ವಮತ್ತು ಉಪಮಾನತ್ವವನ್ನು ವರ್ಣಿಸುವುದು ತತ್ತ್ವವಾದರೆ, ಈ ಉಪಮೇಯೋಪಮಾಲಂಕಾರದಲ್ಲಿ, ಎರಡು ವಸ್ತುಗಳಲ್ಲಿ ಪರ್ಯಾಯವಾಗಿ ಉಪಮೇಯತ್ವ ಮತ್ತು ಉಪಮಾನತ್ವಗಳನ್ನು ವರ್ಣಿಸುವುದು ತತ್ತ್ವವಾಗಿರುತ್ತದೆ. ಆದ್ದರಿಂದ ಇಲ್ಲಿ ಎರಡು ವಾಕ್ಯಗಳಿರುವುದು ಅನಿವಾರ್ಯ. ಅಂದರೆ ಮೊದಲ ವಾಕ್ಯದ ಉಪಮೇಯವು ಎರಡನೆಯ ವಾಕ್ಯದಲ್ಲಿ ಉಪಮಾನವಾಗಿಯೂ, ಮೊದಲ ವಾಕ್ಯದ ಉಪಮಾನವು ಎರಡನೆಯ ವಾಕ್ಯದಲ್ಲಿ ಉಪಮೇಯವಾಗಿಯೂ ವರ್ಣಿತವಾಗಿರುತ್ತದೆ. ಅನನ್ವಯದಲ್ಲಿ ದ್ವಿತೀಯಸದೃಶವಸ್ತುವ್ಯವಚ್ಛೇದಕತ್ವ ಮುಖ್ಯತತ್ತ್ವವಾದರೆ, ಈ ಅಲಂಕಾರದಲ್ಲಿ ತೃತೀಯಸದೃಶವಸ್ತುವ್ಯವಚ್ಛೇದಕತ್ವ, ಅಂದರೆ, ಈ ಎರಡೂ ವಸ್ತುಗಳಲ್ಲಿ ಪರಸ್ಪರ ಇವುಗಳಿಗೆ ಇವುಗಳೇ ಸಮಾನವೇ ಹೊರತು, ಮೂರನೆಯ ವಸ್ತು ಇವುಗಳಿಗೆ ಸಮಾನವಾದುದು ಇಲ್ಲವೇ ಇಲ್ಲ ಎಂಬುದೇ ಮುಖ್ಯತತ್ತ್ವವಾಗಿರುತ್ತದೆ. ಉಪಮೇಯೇನ ಉಪಮೀಯತೇ ಇತಿ ಉಪಮೇಯೋಪಮಾ.

> ಪರ್ಯಾಯೇಣ ದ್ವಯೋಸ್ತಚ್ಚೇದುಪಮೇಯೋಪಮಾ ಮತಾ ।
> ಧರ್ಮೋಽರ್ಥ ಇವ ಪೂರ್ಣಶ್ರೀರರ್ಥೋ ಧರ್ಮ ಇವ ತ್ವಯಿ ॥ ೬ ॥

ದ್ವಯೋಃ (ವಸ್ತುನೋಃ) ಪರ್ಯಾಯೇಣ, ತತ್-ಉಪಮಾನೋಪಮೇಯತ್ವಂ (ವರ್ಣಿತಂ ಸ್ಯಾತ್) ಚೇತ್, (ಸಾ) ಉಪಮೇಯೋಪಮಾ ಇತಿ ಮತಾ।

'ಎರಡು ವಸ್ತುಗಳಲ್ಲಿ ಪರಸ್ಪರ ಉಪಮಾನತ್ವ ಮತ್ತು ಉಪಮೇಯತ್ವವನ್ನು ವರ್ಣಿಸಿದ್ದಾದರೆ, ಅದು ಉಪಮೇಯೋಪಮಾಲಂಕಾರ'ವಾಗುತ್ತದೆ.

ಉದಾಹರಣೆ : ಇದು ಒಬ್ಬ ರಾಜನ ವರ್ಣನೆ. 'ಹೇ ರಾಜನ್, ತ್ವಯಿ ಧರ್ಮಃ, ಅರ್ಥಃ ಇವ ಪೂರ್ಣಶ್ರೀಃ ಅರ್ಥಃ ಧರ್ಮಃ ಇವ ಪೂರ್ಣಶ್ರೀಃ' - ನಿನ್ನಲ್ಲಿ ಧರ್ಮವು ಅರ್ಥದಂತೆಯೂ, ಅರ್ಥವು ಧರ್ಮದಂತೆಯೂ ಪೂರ್ಣವಾಗಿರುತ್ತದೆ.

ಮೊದಲ ವಾಕ್ಯದಲ್ಲಿ ಧರ್ಮವು ಉಪಮೇಯವಾದರೆ, ಎರಡನೇ ವಾಕ್ಯದಲ್ಲಿ ಇದು ಉಪಮಾನತ್ವವನ್ನು ಹೊಂದಿದೆ. ಅಂತೆಯೇ ಅರ್ಥವು ಮೊದಲ ವಾಕ್ಯದಲ್ಲಿ ಉಪಮಾನತ್ವವನ್ನು ಹೊಂದಿದ್ದು, ಎರಡನೆಯ ವಾಕ್ಯದಲ್ಲಿ ಉಪಮೇಯತ್ವವನ್ನು ಹೊಂದಿರುವುದರಿಂದ ಲಕ್ಷಣ ಸಮನ್ವಯ. ಈ ಅರ್ಥ- ಧರ್ಮಗಳಿಗೆ ಈ ಧರ್ಮ-ಅರ್ಥಗಳೇ ಸಮ; ಇವುಗಳಿಗೆ ಸಮಾನವಾದ ತೃತೀಯ ವಸ್ತು ಇಲ್ಲವೆಂಬುದೇ ತತ್ತ್ವ.

## ೪. ಪ್ರತೀಪಾಲಂಕಾರಃ ( ತದ್ಭೇದಾಃ)

ವರ್ಣನೆಗೆ ಯೋಗ್ಯವಾದುದು ಉಪಮೇಯವಷ್ಟೆ! ಆದರೆ ಕೆಲವೊಮ್ಮೆ ಉಪಮಾನವನ್ನೇ ಉಪಮೇಯವನ್ನಾಗಿ ಪರಿಗಣಿಸಿ ವರ್ಣಿಸುವುದೂ ಉಂಟು. ಪ್ರಸಿದ್ಧವಾದ ಪರಂಪರೆಗೆ ಇದು ಪ್ರತಿಲೋಮ - ಪ್ರತಿಕೂಲ - ಅಥವಾ ವಿರುದ್ಧವಾಗಿರುವುದರಿಂದ ಇದು ಪ್ರತೀಪಾಲಂಕಾರವೆನಿಸಿದೆ. ಪ್ರಸಿದ್ಧ ಉಪಮಾನವನ್ನು ಉಪಮೇಯವನ್ನಾಗಿ ಕಲ್ಪಿಸುವುದೇ ಈ ಅಲಂಕಾರದ ಮುಖ್ಯತತ್ತ್ವ.

### ಮೊದಲನೆಯ ಭೇದ

ಪ್ರತೀಪಮುಪಮಾನಸ್ಯೋಪಮೇಯತ್ವಪ್ರಕಲ್ಪನಂ ।
ತ್ವಲ್ಲೋಚನಸಮಂ ಪದ್ಮಂ ತ್ವದ್ವಕ್ತ್ರಸದೃಶೋ ವಿಧುಃ ॥ ೭ ॥

ಉಪಮಾನಸ್ಯ ಉಪಮೇಯತ್ವಪ್ರಕಲ್ಪನಂ ಪ್ರತೀಪಂ - ಇತ್ಯಲಂಕಾರಃ. 'ಪ್ರಸಿದ್ಧವಾದ ಉಪಮಾನವನ್ನು ಉಪಮೇಯವನ್ನಾಗಿ ಕಲ್ಪಿಸಿ ವರ್ಣಿಸುವುದು ಪ್ರತಿಪಾಲಂಕಾರ'. ಈ ರೀತಿಯ ಕಲ್ಪನೆ ಉಪಮೇಯದಲ್ಲಿ ಹೆಚ್ಚಿನ ಗುಣಾದಿಗಳನ್ನು ಹೇಳುವ ನಿಮಿತ್ತವಾಗಿ ಎಂದು ಭಾವಿಸಬಹುದು. ಇದೂ ಸಹ ಒಂದು ರೀತಿಯ ವಿಶಿಷ್ಟ ಚಮತ್ಕಾರವೇ ಆಗಿರುತ್ತದೆ.

**ಉದಾಹರಣೆ** : ಒಬ್ಬ ನಾಯಕನು ತನ್ನ ಕಾಂತೆಯನ್ನು ಈ ರೀತಿ ವರ್ಣಿಸುತ್ತಿದ್ದಾನೆ. '**(ಹೇ ಸುಂದರಿ) ಪದ್ಮಂ ತ್ವಲ್ಲೋಚನಸಮಂ, ವಿಧುಃ ತ್ವದ್ವಕ್ತ್ರಸದೃಶಃ**' - 'ಎಲೈ ಸುಂದರಿ ! ಪದ್ಮವು ನಿನ್ನ ನೇತ್ರಕ್ಕೆ ಸಮಾನವಾಗಿದೆ, ಚಂದ್ರನು ನಿನ್ನ ಮುಖಕ್ಕೆ ಸಮಾನವಾಗಿರುವನು'. ಇಲ್ಲಿ ವಸ್ತುತಃ ವರ್ಣನೀಯ ವಸ್ತುವೆಂದರೆ ನಾಯಕಿಯ ನೇತ್ರ ಮತ್ತು ಮುಖ. ಆದರೆ, ಪ್ರಸಿದ್ಧ ಉಪಮಾನ ವಸ್ತುಗಳಾದ ಪದ್ಮ - ಚಂದ್ರರನ್ನು ಮೊದಲು ನಿವೇಶಮಾಡಿ 'ಪದ್ಮವು ನಿನ್ನ ನೇತ್ರಕ್ಕೆ ಸಮಾನವಾಗಿದೆ, ಚಂದ್ರನು ನಿನ್ನ ಮುಖಕ್ಕೆ ಸಮಾನ' ಎಂದು ಉಪಮೇಯವನ್ನಾಗಿ ಹೇಳಿರುವುದರಿಂದ ಇದು ಮೊದಲನೆಯ ಪ್ರತೀಪಾಲಂಕಾರವಾಯ್ತು.

### ಎರಡನೆಯ ಭೇದ

ಉಪಮಾನವನ್ನು ಉಪಮೇಯವನ್ನಾಗಿ ಸ್ವೀಕರಿಸಿ, ಪ್ರಸಿದ್ಧ ಉಪಮೇಯಕ್ಕೆ ಅದರ ಮುಖಾಂತರ ತಿರಸ್ಕಾರವನ್ನು ಹೇಳುವುದು ಮೊದಲನೆಯ ಭೇದಕ್ಕಿಂತ ಹೆಚ್ಚು ಚಮತ್ಕಾರವುಳ್ಳದ್ದು. ಇದು ಎರಡನೆಯ ಭೇದ.

ಅನ್ಯೋಪಮೇಯಲಾಭೇನ ವರ್ಣ್ಯಸ್ಯಾನಾದರಶ್ಚ ತತ್ ।
ಅಲಂ ಗರ್ವೇಣ ತೇ ವಕ್ತ್ರ ಕಾಂತ್ಯಾ ಚಂದ್ರೋऽಪಿ ತಾದೃಶಃ ॥ ೮ ॥

ಅನ್ಯೋಪಮೇಯಲಾಭೇನ ಇಲ್ಲಿ ಅನ್ಯತ್ ಶಬ್ದಕ್ಕೆ ಉಪಮಾನ - ಎಂದರ್ಥ. ಆದ್ದರಿಂದ ಪ್ರಸಿದ್ಧ ಉಪಮಾನವನ್ನು ಉಪಮೇಯವನ್ನಾಗಿ ಪಡೆದು, ತಾನು ಅತ್ಯುತ್ಕೃಷ್ಟ ಗುಣವುಳ್ಳದ್ದಾದ್ದರಿಂದ, ಪ್ರಸಿದ್ಧ ಉಪಮೇಯವು ಬೇರೆ ಉಪಮಾನಾದಿಗಳೊಡನೆ ತನ್ನ ಸಾದೃಶ್ಯವನ್ನು ಸಹಿಸದೇ ಇರುವುದರಿಂದ, ಈ ಪ್ರಸಿದ್ಧ ಉಪಮೇಯಕ್ಕೆ ಆ ಉಪಮೇಯ ರೂಪವಾಗಿ ಪಡೆದ ಉಪಮಾನದಿಂದ ತಿರಸ್ಕಾರವನ್ನು ಹೇಳುವುದು ಎರಡನೆಯ ಪ್ರತೀಪಾಲಂಕಾರವಾಗುತ್ತದೆ (ವರ್ಣ್ಯ, ಅನಾದರಃ = ತಿರಸ್ಕಾರಃ)

ಉದಾಹರಣೆ : 'ಹೇ ವಕ್ತ್ರ ತೇ ಗರ್ವೇಣ ಅಲಂ, (ಯತಃ) ಕಾಂತ್ಯಾ ಚಂದ್ರಃ ಅಪಿ ತಾದೃಶಃ (ವರ್ತತೇ)'. ಎಲೈ ಮುಖವೇ ನೀನು ಗರ್ವಪಟ್ಟುಕೊಳ್ಳುವುದು ಸಾಕು( ಬೇಡ); ಏಕೆಂದರೆ, ಕಾಂತಿಯಿಂದ ಚಂದ್ರನೂ ಕೂಡ ಅಂತಹ ಕಾಂತಿಮಂತನೇ ಆಗಿರುವನು'. ಇಲ್ಲಿ ಪ್ರಸಿದ್ಧ ಉಪಮಾನ ಚಂದ್ರನನ್ನು ಉಪಮೇಯವನ್ನಾಗಿ ಪರಿಗಣಿಸಿ, ಗರ್ವಪಡುತ್ತಿರುವ ಪ್ರಸಿದ್ಧ ಉಪಮೇಯಕ್ಕೆ 'ನಿನ್ನ ಕಾಂತಿಗೆ ಸಮಾನವಾಗಿ ಈ ಚಂದ್ರನೂ ಇರುವನು' ಎಂದು ಈ ಉಪಮೇಯದಿಂದ ತಿರಸ್ಕಾರವನ್ನು ವರ್ಣಿಸಿರುವುದರಿಂದ ಎರಡನೆಯ ಪ್ರತೀಪಾಲಂಕಾರ.

## ಮೂರನೆಯ ಭೇದ

ಈ ಭೇದದಲ್ಲಿ ಸಹ ಪ್ರಸಿದ್ಧ ಉಪಮಾನವನ್ನು ಉಪಮೇಯವನ್ನಾಗಿ ಪಡೆಯುವುದುಂಟು. ಅಲ್ಲದೆ, ಪ್ರಸಿದ್ಧ ಉಪಮೇಯವನ್ನು ಉಪಮೇಯವನ್ನಾಗಿಯೇ ಸ್ವೀಕರಿಸಿ, ಉಪಮೇಯರೂಪವಾಗಿ ಕಲ್ಪಿತವಾದ ಉಪಮಾನಕ್ಕೆ ತಿರಸ್ಕಾರವನ್ನು ಹೇಳಿದ್ದಾದರೆ, ಇದು ಎರಡನೆಯ ಭೇದಕ್ಕಿಂತ ಚಮತ್ಕಾರಾಧಾಯಕವಾಗಿದ್ದು, ಮೂರನೆಯ ಪ್ರತೀಪಾಲಂಕಾರವಾಗಿರುತ್ತದೆ. ಎರಡನೆಯದರಲ್ಲಿ ಉಪಮೇಯಕ್ಕೆ ತಿರಸ್ಕಾರವನ್ನು ಹೇಳಿದರೆ, ಇಲ್ಲಿ ಉಪಮಾನಕ್ಕೆ ತಿರಸ್ಕಾರ.

ವರ್ಣ್ಯೋಪಮೇಯಲಾಭೇನ ತಥಾನ್ಯಸ್ಯಾಪ್ಯನಾದರಃ ।
ಕಃ ಕ್ರೌರ್ಯದರ್ಪಸ್ತೇ ಮೃತ್ಯೋ ತ್ವತ್ತುಲ್ಯಾಃ ಸಂತಿ ಸ್ತ್ರಿಯಃ ॥ ೯ ॥

ವರ್ಣ್ಯವನ್ನು ಉಪಮೇಯವನ್ನಾಗಿಯೇ ಕಲ್ಪಿಸಿ, ಅದರ ಮುಖಾಂತರ (ಅನ್ಯಸ್ಯ)- ಉಪಮೇಯವಾಗಿ ಪರಿಗಣಿತವಾದ ಪ್ರಸಿದ್ಧ ಉಪಮಾನಕ್ಕೆ ತಿರಸ್ಕಾರದ ವರ್ಣನೆ ಮೂರನೆಯ ಪ್ರತೀಪಾಲಂಕಾರವಾಗುತ್ತದೆ. ಕಾರಣ, ಪ್ರಸಿದ್ಧ ಅವರ್ಣ್ಯವು, ತಾನು ಅತ್ಯುತ್ಕೃಷ್ಟ ಗುಣವನ್ನು ಹೊಂದಿರುವುದರಿಂದ , ಬೇರೊಂದರ ಸಾದೃಶ್ಯವನ್ನು ಸಹಿಸಲಾರದು. ಆದ್ದರಿಂದ ಅದಕ್ಕೆ ತಿರಸ್ಕಾರ- ಈ ಭೇದದ ಚಮತ್ಕಾರವಿಶೇಷವಾಗಿರುತ್ತದೆ.

ಉದಾಹರಣೆ : ಹೇ ಮೃತ್ಯೋ ! ತೇ ಕ್ರೌರ್ಯದರ್ಪಃ ಕಃ? (ಕೀದೃಶ್ಯಃ - ಅತ್ಯಂತಂ ಅಲ್ಪಃ) (ಯತಃ)- (ಕ್ರೌರ್ಯೇ ವಿಷಯೇ) ಸ್ತ್ರಿಯಃ ತ್ವತ್ತುಲ್ಯಾಃ ಸಂತಿ ಹಿ. 'ಎಲೈ ಮೃತ್ಯುದೇವತೆಯೇ ! ನಿನ್ನಕ್ರೌರ್ಯಗುಣದ

ದರ್ಪ ಎಷ್ಟರದು? (ಅದು ಕೇವಲ ಅಲ್ಪ. ಏಕೆಂದರೆ) ಕ್ರೌರ್ಯ ಗುಣದಲ್ಲಿ ನಿನಗೆ ಸಮಾನರಾದ ಸ್ತ್ರೀಯರೇ ಇರುವರು', ಇಲ್ಲಿ 'ಮೃತ್ಯು' ಪ್ರಸಿದ್ಧ ಉಪಮಾನ. ಇದನ್ನು ಉಪಮೇಯವನ್ನಾಗಿ ಕಲ್ಪಿಸಿದೆ. 'ಸ್ತ್ರೀ' ಇಲ್ಲಿ ವರ್ಣ್ಯವೇ ಆಗಿದ್ದು, ಅದನ್ನು ವರ್ಣ್ಯವನ್ನಾಗಿಯೇ ಸ್ವೀಕರಿಸಿ, ಅದರಿಂದ ಪ್ರಸಿದ್ಧಉಪಮಾನಕ್ಕೆ (ಉಪಮೇಯವಾಗಿ ಕಲ್ಪಿತವಾಗಿರುವ ಉಪಮಾನಕ್ಕೆ) ತಿರಸ್ಕಾರವನ್ನು ಹೇಳಿರುವುದರಿಂದ ಇದು ಮೂರನೆಯ ಪ್ರತೀಪಾಲಂಕಾರ.

## ನಾಲ್ಕನೆಯ ಭೇದ

ವರ್ಣ್ಯದ ಉತ್ಕರ್ಷಕ್ಕಾಗಿ ಅವರ್ಣ್ಯವನ್ನು ಹೇಳುವುದು ಸಹಜ. ಆದರೆ ಈ ಅವರ್ಣ್ಯವೇ ಈ ವರ್ಣ್ಯದೊಡನೆ ಸಾದೃಶ್ಯವನ್ನು ಹೊಂದಲು ಸರ್ವಥಾ ಯೋಗ್ಯವಲ್ಲ ಎಂದು- ವರ್ಣಿಸುವು ದಾದರೆ ಅದು ಈ ಹಿಂದಿನ ಭೇದಗಳಿಗಿಂತ ಭಿನ್ನ ಚಮತ್ಕಾರವುಳ್ಳದ್ದಾಗಿ ಪ್ರತೀಪಾಲಂಕಾರದ ನಾಲ್ಕನೆಯ ಭೇದವಾಗುತ್ತದೆ.

> ವರ್ಣ್ಯೇನಾನ್ಯಸ್ಯೋಪಮಾಯಾ ಅನಿಷ್ಪತ್ತಿವಚಶ್ಚ ತತ್ ।
> ಮುಧಾಪವಾದೋ ಮುಗ್ಧಾಕ್ಷಿ ತ್ವನ್ಮುಖಾಭಂ ಕಿಲಾಂಬುಜಂ ॥ ೧೦ ॥

ವರ್ಣ್ಯದೊಂದಿಗೆ (ಅನ್ಯಸ್ಯ) ಅವರ್ಣ್ಯಕ್ಕೆ ಉಪಮಾತ್ವ (ಸಾದೃಶ್ಯ) ವನ್ನು ಹೊಂದುವ ಯೋಗ್ಯತೆಯೇ ಇರುವುದಿಲ್ಲ (ಉಪಮಾಯಾಃ ಅನಿಷ್ಪತ್ತಿವಚಃ - ವ್ಯರ್ಥವಾಗಿ ಸಾದೃಶ್ಯವನ್ನು ಹೇಳುವಿಕೆ) ಎಂದು ವರ್ಣಿಸಿದರೆ, ಅದು ನಾಲ್ಕನೆಯ ಪ್ರತಿಪಾಲಂಕಾರವಾಗುತ್ತದೆ.

ಉದಾಹರಣೆ : 'ಎಲೌ ಮುಗ್ಧಾಕ್ಷಿಯೇ! (ಲೋಕದಲ್ಲಿ) ಕಮಲವು ನಿನ್ನ ಮುಖಕ್ಕೆ ಸಮಾನವಾದ ಕಾಂತಿಯುಳ್ಳದ್ದಾಗಿದೆ - ಎಂಬ ಮಾತು ಕೇವಲ ಸುಳ್ಳಾದ ಅಪವಾದ'. ಅಂದರೆ, ನಿನ್ನ ಮುಖದ ಕಾಂತಿಯೇ ಬೇರೆ. ಕಮಲದ ಕಾಂತಿಯೇ ಬೇರೆ. ನಿನ್ನ ಮುಖದ ಕಾಂತಿ ಕಮಲದ ಕಾಂತಿಯನ್ನು ಮೀರಿಸಿದ್ದಾಗಿರುವುದರಿಂದ 'ಕಮಲವು ನಿನ್ನ ಮುಖಕ್ಕೆ ಸಮಾನವಾಗಿದೆ' ಎಂಬ ಮಾತು ಕೇವಲ ವ್ಯರ್ಥ- ಎಂದು ಅವರ್ಣ್ಯದ ಸಾದೃಶ್ಯದ ಅನಿಷ್ಪತ್ತಿಯನ್ನು ವರ್ಣಿಸಿರುವುದರಿಂದ ಇದು ನಾಲ್ಕನೆಯ ಪ್ರತೀಪಾಲಂಕಾರ.

## ಐದನೆಯ ಭೇದ

ಪ್ರಸಿದ್ಧ ಉಪಮೇಯವೇ ಉಪಮಾನದ ಕಾರ್ಯವನ್ನು ಮಾಡುವುದರಿಂದ, ಉಪಮಾನವೇ ಬೇಕಾಗಿಲ್ಲ- ಎಂದು ವರ್ಣಿಸಿದ್ದಾದರೆ ಅದು ಐದನೆಯ ಪ್ರತೀಪಾಲಂಕಾರ. ಇದು ಹಿಂದಿನ ಎಲ್ಲ ಭೇದಗಳ ಚಮತ್ಕಾರಕ್ಕಿಂತ ಅತ್ಯಂತ ಭಿನ್ನವೇ ಆದ ಚಮತ್ಕಾರವುಳ್ಳ ಭೇದವಾಗಿರುತ್ತದೆ.

> ಪ್ರತೀಪಮುಪಮಾನಸ್ಯ ಕೈಮರ್ಥ್ಯಮಪಿ ಮನ್ವತೇ ।
> ದೃಷ್ಟಂ ಚೇದ್ವದನಂ ತಸ್ಯಾಃ ಕಿಂ ಪದ್ಮೇನ ಕಿಮಿಂದುನಾ ॥ ೧೧ ॥

ಉಪಮಾನವು ಯಾತಕ್ಕಾಗಿ ಬೇಕು ? (ಉಪಮೇಯವೇ ಉದ್ದಿಷ್ಟ ಕಾರ್ಯವನ್ನು ಆಗು ಮಾಡಿಕೊಡುತ್ತಿರುವಾಗ) ಎಂದು ಉಪಮಾನದ ವ್ಯರ್ಥತೆಯನ್ನು ವರ್ಣಿಸಿದ್ದೇ ಆದರೆ, ಅದು ಐದನೆಯ ಪ್ರತೀಪಾಲಂಕಾರವೆಂದು ತಿಳಿಯುತ್ತಾರೆ.

ಉದಾಹರಣೆ : ತಸ್ಯಾ: (ತನ್ವ್ಯಾ:) ವದನಂ ದೃಷ್ಟಂ ಚೇತ್, ಪದ್ಮೇನ ಕಿಂ? ಇಂದುನಾ ಚ ಕಿಂ?' 'ನಾಯಿಕೆಯ ಮುಖವನ್ನು ನೋಡಿದ್ದೇ ಆದರೆ, (ಅದರಿಂದಲೇ ಆನಂದವು ಉಂಟಾಗುವುದರಿಂದ) ಪದ್ಮವಾದರೂ ಏಕೆ ಬೇಕು? ಚಂದ್ರನಾದರೂ ಏಕೆ ಬೇಕು? ಇವುಗಳಿಂದ ಏನೂ ಪ್ರಯೋಜನವೇ ಇಲ್ಲ)' ಹೀಗೆ ಪ್ರಸಿದ್ಧ ಉಪಮಾನಗಳ (ಕಿಮರ್ಥಸ್ಯ ಭಾವ: - ಕೈಮರ್ಥ್ಯಂ) ವ್ಯರ್ಥತೆಯನ್ನು ವರ್ಣಿಸಿರುವುದರಿಂದ ಇದು ಐದನೆಯ ಪ್ರತೀಪಾಲಂಕಾರ.

## ೫. ರೂಪಕಾಲಂಕಾರಃ (ತದ್ಭೇದಾಃ)

**'ರೂಪಯತಿ = ರೂಪವತ್ ಕರೋತಿ = ರೂಪಯುಕ್ತಂ ಕರೋತಿ = ಉಪಮಾನೋಪಮೇಯಯೋಃ ಅಭೇದಾರೋಪೇಣ ಏಕತಾಂ ನಯತಿ ಇತಿ ರೂಪಕಂ'.** ಉಪಮೇಯವನ್ನು ಉಪಮಾನದ ಅಭೇದರೂಪದಿಂದ ವರ್ಣಿಸುವುದು ರೂಪಕಾಲಂಕಾರ. ಅಥವಾ ಉಪಮೇಯದಲ್ಲಿ ಉಪಮಾನದ ಅಭೇದವನ್ನು ವರ್ಣಿಸುವುದು ರೂಪಕಾಲಂಕಾರ. ಉಪಮಾಲಂಕಾರದಲ್ಲಿ ಸಾದೃಶ್ಯಕ್ಕೆ ಚಮತ್ಕಾರವಿದ್ದರೆ, ಇಲ್ಲಿ ಅಭೇದಕ್ಕೆ ಚಮತ್ಕಾರ. ಈ ಅಭೇದವಾದರೂ ಸಾದೃಶ್ಯ ಮೂಲವೇ ಆಗಿರುತ್ತದೆ. ಈ ಅಭೇದವನ್ನು 'ಆರೋಪ' ಎಂದೂ ಸಹ ಹೇಳಲಾಗುತ್ತದೆ. ಅಂದರೆ ಉಪಮೇಯದಲ್ಲಿ ಉಪಮಾನ ಅಭೇದದ ಆರೋಪವೇ ರೂಪಕಾಲಂಕಾರ. ಈ ಆರೋಪವೆಂದರೆ - **'ವಿಷಯವಿಷಯಿಣೋಃ ಭೇದೇನ ಉಪನ್ಯಾಸಃ ಆರೋಪಃ',** ಉಪಮೇಯ ಉಪಮಾನಗಳನ್ನು ಭಿನ್ನಭಿನ್ನ ಪದದಿಂದ ಹೇಳುವುದು. ಉದಾಹರಣೆಗೆ 'ಮುಖಂ ಕಮಲಂ'. ಇಲ್ಲಿ 'ಮುಖ' ಉಪಮೇಯದಲ್ಲಿ ಉಪಮಾನ ಕಮಲದ ಅಭೇದಾರೋಪವಿದೆ. ಈ ರೂಪಕವು ಅಭೇದರೂಪಕ. ತಾದ್ರೂಪ್ಯರೂಪಕ ಎಂದು ಎರಡು ವಿಧವಾಗಿರುತ್ತದೆ. 'ಅಭೇದ' ಎಂದರೆ **ಭೇದಾಸಹಿಷ್ಣುಃ ಅಭೇದಃ** - ಸ್ವಲ್ಪವೂ ಭೇದವನ್ನು ಸಹಿಸದೇ ಇರುವ ಅಭೇದವು 'ಅಭೇದ'; **'ಭೇದಸಹಿಷ್ಣುಃ ಅಭೇದಃ ತಾದ್ರೂಪ್ಯಂ'** ಭೇದವನ್ನು ಸಹಿಸುವ ಅಭೇದವು ತಾದ್ರೂಪ್ಯ. ಈ ಎರಡೂ ಭೇದಗಳೂ ಸಹ ಪ್ರತ್ಯೇಕವಾಗಿ ಅಧಿಕ - ನ್ಯೂನ - ಅನುಭಯ ಎಂಬ ಮೂರು ಪ್ರಕಾರತ್ವವನ್ನು ಹೊಂದಿ, ಒಟ್ಟು ರೂಪಕವು ಆರು ವಿಧವಾಗುತ್ತದೆ.

> **ವಿಷಯ್ಯಭೇದತಾದ್ರೂಪ್ಯರಂಜನಂ ವಿಷಯಸ್ಯ ಯತ್ |**
> **ರೂಪಕಂ ತತ್ ತ್ರಿಧಾಧಿಕ್ಯನ್ಯೂನತ್ವಾನುಭಯೋಕ್ತಿಭಿಃ || ೧೨ ||**

ವಿಷಯ = ಉಪಮೇಯ, ವಿಷಯೀ = ಉಪಮಾನ. **'ವಿಷಯಸ್ಯ ವಿಷಯ್ಯಭೇದ ತಾದ್ರೂಪ್ಯ ರಂಜನಂ ಯತ್ (ತತ್) ರೂಪಕಂ' ವಿಷಯಿಣಃ ಅಭೇದೇನ ತಾದ್ರೂಪ್ಯೇಣ ಚ ರಂಜನಂ'** ಉಪಮೇಯದಲ್ಲಿ ಉಪಮಾನದ ಅಭೇದವರ್ಣನೆ, ಅಥವಾ ತಾದ್ರೂಪ್ಯದ ವರ್ಣನೆ ರೂಪಕಾಲಂಕಾರವಾಗುತ್ತದೆ. ಈ ಎರಡೂ ಸಹ ಪುನಃ ಅಭೇದ. ನ್ಯೂನ, ಅನುಭಯ-ಎಂದು ಪ್ರತ್ಯೇಕ ಮೂರು ಮೂರು ವಿಧವಾಗುತ್ತವೆ. ಅಂದರೆ 1. ಅಧಿಕಾಭೇದರೂಪಕ 2. ನ್ಯೂನಾಭೇದ ರೂಪಕ 3. ಅನುಭಯಾಭೇದರೂಪಕ 4. ಅಧಿಕತಾದ್ರೂಪ್ಯರೂಪಕ 5. ನ್ಯೂನತಾದ್ರೂಪ್ಯ ರೂಪಕ 6. ಅನುಭಯತಾದ್ರೂಪ್ಯರೂಪಕ- ಎಂದು ಒಟ್ಟು ಆರು ವಿಧ. ಇವುಗಳಿಗೆ ಉದಾಹರಣೆಯನ್ನು ಮೊದಲು ಅನುಭಯ, ಬಳಿಕ ನ್ಯೂನ - ಅಧಿಕ - ಈ ಕ್ರಮದಲ್ಲಿ ಕೊಡಲಾಗಿದೆ.

೧. ಅನುಭಯಾಭೇದರೂಪಕಕ್ಕೆ ಉದಾಹರಣೆ :

'ಅಯಂ ಹಿ ಧೂರ್ಜಟಿಃ ಸಾಕ್ಷಾದ್ಯೇನ ದಗ್ಧಾಃ ಪುರಃ ಕ್ಷಣಾತ್' ।

'ಯಾವ ಈತನಿಂದ (ಹಿಂದೆ) ತ್ರಿಪುರಗಳು ಕ್ಷಣಕಾಲದಲ್ಲಿ ಸುಡಲ್ಪಟ್ಟವೋ, ಆ ಧೂರ್ಜಟಿಯೇ ಇವನಾಗಿರುತ್ತಾನೆ'. (ಅಯಂ ಸಾಕ್ಷಾತ್ ಧೂರ್ಜಟಿಃ - ಇವನು ಪ್ರತ್ಯಕ್ಷ ಪರಮೇಶ್ವರ) ಇದು ಒಬ್ಬ ರಾಜನ ವರ್ಣನೆ. ಈ ರಾಜನು ಈ ರಾಜಾವಸ್ಥೆಯಲ್ಲಿ ಶತ್ರುಪಟ್ಟಣಗಳನ್ನು ನಾಶ ಮಾಡಿರುವನು. ಇವನೇ ಹಿಂದಿನ ಈಶ್ವರಾವಸ್ಥೆಯಲ್ಲಿ ತ್ರಿಪುರ ರಾಕ್ಷಸರ ಪಟ್ಟಣಗಳನ್ನು ಸುಟ್ಟು ಹಾಕಿದವನು. ಇಲ್ಲಿ ಪುರದಾಹಕತ್ವಧರ್ಮ ಈರ್ವರಲ್ಲಿಯೂ ಸಮಾನವಾಗಿದೆ. ಆದ್ದರಿಂದ ಅಧಿಕತ್ವ ಅಥವಾ ನ್ಯೂನತ್ವವಿರದೆ ಅನುಭಯತ್ವ ಇರುತ್ತದೆ. ಮತ್ತು ರಾಜ - ಈಶ್ವರರಲ್ಲಿ ಪರಿಪೂರ್ಣ ಅಭೇದವನ್ನು ವರ್ಣಿಸಿರುವುದರಿಂದ, ಇದು ಅನುಭಯಾಭೇದರೂಪಕಾಲಂಕಾರವಾಯಿತು.

೨. ನ್ಯೂನಾಭೇದರೂಪಕಕ್ಕೆ ಉದಾಹರಣೆ :

'ಅಯಮಾಸ್ತೇ ವಿನಾ ಶಂಭುಸ್ತಾರ್ತೀಯೀಕಂ ವಿಲೋಚನಂ' ॥ ೧೩ ॥

ಮೂರನೆಯ ಕಣ್ಣಿಲ್ಲದಿದ್ದರೂ ಇವನು ಶಿವನೇ ಆಗಿರುತ್ತಾನೆ. (ಇವನು ಮೂರನೇ ಕಣ್ಣಿಲ್ಲದ ಸಾಕ್ಷಾತ್ ಈಶ್ವರನು). ಈಶ್ವರಾವಸ್ಥೆಯಲ್ಲಿ ವರ್ತ್ಮಮಾನ ಈ ರಾಜನಿಗೆ ಫಾಲನೇತ್ರತ್ವವಿತ್ತು. ಆದರೆ, ಈ ರಾಜಾವಸ್ಥೆಯಲ್ಲಿ ಫಾಲನೇತ್ರತ್ವವಿಲ್ಲ. ಫಾಲನೇತ್ರತ್ವವಿಲ್ಲದಿರುವಿಕೆಯೇ ಇಲ್ಲಿ ನ್ಯೂನತ್ವ. ಅಯಂ ಶಂಭುಃ ಆಸ್ತೇ - ಎಂದುದರಿಂದ ಅಭೇದ; ಆದ್ದರಿಂದ ಇಲ್ಲಿ ನ್ಯೂನಾಭೇದರೂಪಕಾಲಂಕಾರ.

೩. ಅಧಿಕಾಭೇದರೂಪಕಕ್ಕೆ ಉದಾಹರಣೆ :

ಶಂಭುರ್ವಿಶ್ವಮವತ್ಯದ್ಯ ಸ್ವೀಕೃತ್ಯ ಸಮದೃಷ್ಟಿತಾಂ ।

'ಈಗ ಸಮದೃಷ್ಟಿತ್ವವನ್ನು ಹೊಂದಿ ಈ ಈಶ್ವರನು ವಿಶ್ವವನ್ನು ಕಾಪಾಡುತ್ತಾನೆ'. ಈ ರಾಜಾವಸ್ಥೆಯಲ್ಲಿ ಭೇದಭಾವವಿಲ್ಲದ ಸಮಾನ (ಸಮ) ದೃಷ್ಟಿತ್ವವೆಂಬುದು, ಪೂರ್ವಾವಸ್ಥೆಯ-ವಿಷಮದೃಷ್ಟಿತ್ವವುಳ್ಳ ಶಿವಾವಸ್ಥೆಗಿಂತ ಅಧಿಕವುಳ್ಳದ್ದು. *ಅಯಂ ಶಂಭುಃ*: ಎಂದುದರಿಂದ ಅಭೇದ; ಹೀಗೆ ಇಲ್ಲಿ ಅಧಿಕಾಭೇದರೂಪಕಾಲಂಕಾರ, ಶಿವಾವಸ್ಥೆಯಲ್ಲಿ ವಿಷಮದೃಷ್ಟಿತ್ವ = ತರತಮಭಾವತ್ವವಿತ್ತು; ಆದರೆ, ಈ ರಾಜಾವಸ್ಥೆಯಲ್ಲಿ ಸರ್ವಸಮಾನತ್ವ ದೃಷ್ಟಿಯಿದೆ- ಎಂಬುದು ಅಧಿಕತ್ವ.

೪. ಅನುಭಯತಾದ್ರೂಪ್ಯರೂಪಕಕ್ಕೆ ಉದಾಹರಣೆ :

ಅಸ್ಯಾ ಮುಖೇಂದುನಾ ಲಬ್ಧೇ ನೇತ್ರಾನಂದೇ ಕಿಮಿಂದುನಾ? ॥ ೧೪ ॥

'ಈ ನಾಯಿಕೆಯ ಮುಖಚಂದ್ರನಿಂದಲೇ ನೇತ್ರಾನಂದವುಂಟಾಗುವಾಗ ಈ ಪ್ರಸಿದ್ಧ ಚಂದ್ರನಿಂದ ಏನೂ ಪ್ರಯೋಜನವಿಲ್ಲ' ಇದು ನಾಯಿಕೆಯ ಮುಖದ ವರ್ಣನೆ. ಇಲ್ಲಿ ಮುಖೇಂದುವೇ

ಬೇರೆ. ಪ್ರಸಿದ್ಧ ಚಂದ್ರನೇ ಬೇರೆ. ಆದರೂ ಮುಖೇಂದು - ಎಂಬಲ್ಲಿ ಉಪಮೇಯ ಮುಖದಲ್ಲಿ, ಉಪಮಾನ ಇಂದುವಿನ ಆರೋಪವಿರುವುದರಿಂದ, ಮತ್ತು ನೇತ್ರಾನಂದ ಉಭಯಚಂದ್ರರಿಂದಲೂ ಆಗುವುದರಿಂದ ಇದು ಅನುಭಯತಾದ್ರೂಪ್ಯರೂಪಕಾಲಂಕಾರ.

೫. ನ್ಯೂನತಾದ್ರೂಪ್ಯರೂಪಲಂಕಾರಕ್ಕೆ ಉದಾಹರಣೆ :

'ಸಾಧ್ವೀಯಮಪರಾ ಲಕ್ಷ್ಮೀರಸುಧಾಸಾಗರೋದಿತಾ' ।

'ಇಯಂ ಸಾಧ್ವೀ ಅಸುಧಾಸಾಗರೋದಿತಾ ಅಪರಾ ಲಕ್ಷ್ಮೀಃ' 'ಈ ಪತಿವ್ರತೆಯು ಸುಧಾಸಾಗರದಲ್ಲಿ ಜನಿಸದಿರುವ ಬೇರೊಬ್ಬ ಲಕ್ಷ್ಮಿಯು'. ಇಲ್ಲಿ ಇಯಂ ಸಾಧ್ವೀ ಲಕ್ಷ್ಮೀ: ಎಂಬಲ್ಲಿ ತಾದ್ರೂಪ್ಯವಿದೆ, 'ಅಪರಾ' ಎಂಬ ವಿಶೇಷಣವಿರುವುದರಿಂದ. ಆದರೆ, ಪ್ರಸಿದ್ಧ ಲಕ್ಷ್ಮಿಯು ಕ್ಷೀರಸಾಗರದಲ್ಲಿ ಜನಿಸಿದವಳು. ಈ ಸಾಧ್ವೀರೂಪಲಕ್ಷ್ಮಿಯು ಕ್ಷೀರಸಾಗರದಲ್ಲಿ ಜನಿಸಿದವಳಲ್ಲ. ಇದೇ ನ್ಯೂನತ್ವ. ಆದ್ದರಿಂದ ಇದು ನ್ಯೂನತಾದ್ರೂಪ್ಯರೂಪಕಾಲಂಕಾರ.

೬. ಅಧಿಕತಾದ್ರೂಪ್ಯರೂಪಕಾಲಂಕಾರಕ್ಕೆ ಉದಾಹರಣೆ :

'ಅಯಂ ಕಲಂಕಿನಶ್ಚಂದ್ರಾನ್ಮುಖಚಂದ್ರೋऽತಿರಿಚ್ಯತೇ' ॥ ೧೫ ॥

'ಕಳಂಕವುಳ್ಳ ಪ್ರಸಿದ್ಧ ಚಂದ್ರನಿಗಿಂತಲೂ, ನಿಷ್ಕಳಂಕವಾದ ಈ ಮುಖಚಂದ್ರನೇ (ಅಧಿಕ) ಶ್ರೇಷ್ಠ'. ಪ್ರಸಿದ್ಧ ಚಂದ್ರ - ಮುಖ ಚಂದ್ರ - ಎಂಬಲ್ಲಿ ತಾದ್ರೂಪ್ಯ, ಮುಖಚಂದ್ರನು ನಿಷ್ಕಳಂಕಿಯಾಗಿರುವುದರಿಂದ ಅಧಿಕತ್ವ. ಆದ್ದರಿಂದ ಇಲ್ಲಿ ಅಧಿಕತಾದ್ರೂಪ್ಯರೂಪಕಾಲಂಕಾರ.

## ೬. ಪರಿಣಾಮಾಲಂಕಾರಃ

ಉಪಮೇಯದಲ್ಲಿ ಉಪಮಾನದ ಅಭೇದವರ್ಣನೆ ರೂಪಕಾಲಂಕಾರವಾದರೆ, ಪ್ರಕೃತ ಕಾರ್ಯದ ಉಪಯೋಗಕ್ಕೋಸ್ಕರ, ಉಪಮಾನವೇ ಉಪಮೇಯರೂಪವಾಗಿ ಪರಿಣಮನವನ್ನು ಹೊಂದುವುದು ಪರಿಣಾಮಾಲಂಕಾರವಾಗುತ್ತದೆ. 'ಪರಿಣಮನಂ ಪರಿಣಾಮಃ'. ಉಪಮಾನವು ಉಪಮೇಯರೂಪವಾಗಿ ಪರಿಣತಿ = ಪರಿವರ್ತನೆ ಹೊಂದುವುದು. ಈ ಪರಿಣತಿತ್ವ ಕೇವಲ ಪ್ರಕೃತ ಕಾರ್ಯದ ಸಿದ್ಧಿಗಾಗಿ ಮಾತ್ರ - ಎಂಬುದು ತತ್ತ್ವ.

ಪರಿಣಾಮಃ ಕ್ರಿಯಾರ್ಥಶ್ಚೇದ್ವಿಷಯೀ ವಿಷಯಾತ್ಮನಾ ।
ಪ್ರಸನ್ನೇನ ದೃಗಬ್ಜೇನ ವೀಕ್ಷತೇ ಮದಿರೇಕ್ಷಣಾ ॥ ೧೬ ॥

ಪ್ರಕೃತ ಕಾರ್ಯದ ಸಿದ್ಧಿಗಾಗಿ, ಉಪಮಾನವು (ವಿಷಯೀ) ಉಪಮೇಯರೂಪವಾಗಿ ಪರಿಣಾಮವನ್ನು ಹೊಂದಿದ್ದಾದರೆ, ಪರಿಣಾಮಾಲಂಕಾರ.

ಉದಾಹರಣೆ : 'ಮದಿಸಿದ ನೋಟವುಳ್ಳ ಇವಳು (ಈ ನಾಯಿಕೆಯು) ಪ್ರಸನ್ನವಾದ ತನ್ನ ನೇತ್ರ-ಕಮಲದಿಂದ ನೋಡುತ್ತಾಳೆ'. ವಸ್ತುತಃ ವೀಕ್ಷಣವು ನೇತ್ರದ ಧರ್ಮ. ಇದು ಕಮಲದಲ್ಲಿಲ್ಲ. ಇದು ಅಚೇತನವಾಗಿರುವುದರಿಂದ. ಆದರೆ, ದೃಗಬ್ಜ ಪದಕ್ಕೆ 'ಪ್ರಸನ್ನೇನ' ಎಂಬ ಒಂದು

ವಿಶೇಷಣವನ್ನೂ ಸಹ ಕೊಡಲಾಗಿದೆ. ಹೀಗೆ, ವೀಕ್ಷಣಕಾರ್ಯವು ಕಮಲದಲ್ಲಿ ಸಂಗತವಾಗದೇ ಇರುವುದರಿಂದ, ಇಲ್ಲಿ ಉಪಮಾನವಾದ ಅಬ್ಜಪದವು, ವೀಕ್ಷಣಕಾರ್ಯದ ಸಿದ್ಧಿಗೋಸ್ಕರ ದೃಕ್-ಉಪಮೇಯ ರೂಪವಾಗಿ ಪರಿಣಾಮವನ್ನು ಹೊಂದುವುದರಿಂದಾಗಿ ಇದು ಪರಿಣಾಮಾಲಂಕಾರ (ಅಬ್ಜಂ ದೃಗಾತ್ಮನಾ ಪರಿಣತಿಂ ಅಪೇಕ್ಷತೇ).

## ೭. ಉಲ್ಲೇಖಾಲಂಕಾರಃ

ಉತ್ + ಲೇಖನಂ - ಉಲ್ಲೇಖಃ ಉತ್ಕೃಷ್ಟ ರೀತಿಯಲ್ಲಿ ಒಬ್ಬ ವ್ಯಕ್ತಿಯ ಗುಣಗಳನ್ನು ವರ್ಣಿಸುವುದು. ಈ ರೀತಿಯ ಗುಣವರ್ಣನೆಯೆಂಬುದು, ಒಬ್ಬ ವ್ಯಕ್ತಿಯ ಅನೇಕ ಗುಣಗಳ ಪೈಕಿ, ಒಬ್ಬೊಬ್ಬರು ಒಂದೊಂದು ಗುಣವನ್ನು ಸ್ವೀಕರಿಸುವುದು ಒಂದು ರೀತಿಯಾದರೆ, ಒಬ್ಬನೇ ವ್ಯಕ್ತಿ, ಆ ವ್ಯಕ್ತಿಯ ಎಲ್ಲಗುಣಗಳನ್ನೂ ಆಶ್ರಯಿಸುವುದು ಮತ್ತೊಂದು ರೀತಿ. ಹೀಗೆ ಈ ಉಲ್ಲೇಖಾಲಂಕಾರ ಎರಡು ರೀತಿಯಾಗಿರುತ್ತದೆ.

### ಮೊದಲನೆಯ ವಿಧ

ಬಹುಭಿರ್ಬಹುಧೋಲ್ಲೇಖಾದೇಕಸ್ಯೋಲ್ಲೇಖ ಇಷ್ಯತೇ ।
ಸ್ತ್ರೀಭಿಃ ಕಾಮೋಽರ್ಥಿಭಿಃ ಸ್ವರ್ದ್ರುಃ ಕಾಲಃ ಶತ್ರುಭಿರೈಕ್ಷಿ ಸಃ ॥ ೧೭ ॥

ಅನೇಕ ಗುಣಗಳಿಂದ ಕೂಡಿರುವ ಒಬ್ಬವ್ಯಕ್ತಿಯ ಆ ಧರ್ಮಗಳ ಪೈಕಿ, ಒಬ್ಬೊಬ್ಬರು ಒಂದೊಂದು ಧರ್ಮವನ್ನಾಶ್ರಯಿಸಿ ನಾನಾರೀತಿಯಾಗಿ ವರ್ಣನೆ ಮಾಡುವುದಾದರೆ, ಅದು ಮೊದಲನೆಯ ಉಲ್ಲೇಖಾಲಂಕಾರವಾಗುತ್ತದೆ. 'ಬಹುಭಿಃ ಏಕಸ್ಯ, ಬಹುಧಾ ಉಲ್ಲೇಖಾತ್ ಉಲ್ಲೇಖಃ ಇಷ್ಯತೇ'

**ಉದಾಹರಣೆ** : 'ಪ್ರಕೃತ ವರ್ಣ್ಯ ರಾಜನನ್ನು ಸ್ತ್ರೀಯರು ಮನ್ಮಥನೆಂದೂ, ಯಾಚಕರು ಸ್ವರ್ಗ ಲೋಕದ ಕಲ್ಪವೃಕ್ಷವೆಂದೂ, ಶತ್ರುಗಳು ಸಾಕ್ಷಾತ್ ಕಾಲಪುರುಷನೆಂದೂ ನೋಡಿದರು'. ಆ ರಾಜನಲ್ಲಿ ಸೌಂದರ್ಯ, ದಾನಶೀಲತೆ, ಮತ್ತು ಪರಾಕ್ರಮ ಗುಣಗಳಿರುತ್ತವೆ. ಅವುಗಳಲ್ಲಿ ಸ್ತ್ರೀಯರು ಸೌಂದರ್ಯ ಗುಣವನ್ನಾಶ್ರಯಿಸಿ 'ಅವನು ಸಾಕ್ಷಾತ್ ಮನ್ಮಥ' ನೆಂದೂ ಹೀಗೆ ದಾನಶೀಲತೆಯ ಗುಣವನ್ನಾಶ್ರಯಿಸಿ ಯಾಚಕರು' ಅವನು ಸಾಕ್ಷಾತ್ ಕಲ್ಪವೃಕ್ಷವೆಂದೂ, ಪರಾಕ್ರಮ ಗುಣವನ್ನಾಶ್ರಯಿಸಿ, ಶತ್ರುಗಳು ಭಯದಿಂದ' 'ಅವನು ಸಾಕ್ಷಾತ್ ಯಮ' ನೆಂದೂ. ಅನೇಕ ಜನರು ಅನೇಕ ರೀತಿಯಾಗಿ ಓರ್ವ ವ್ಯಕ್ತಿಯನ್ನೇ ವರ್ಣಿಸಿರುವುದರಿಂದ ಇದು ಮೊದಲನೆಯ ಉಲ್ಲೇಖಾಲಂಕಾರ.

### ಎರಡನೆಯ ಭೇದ

ಏಕೇನ ಬಹುಧೋಲ್ಲೇಖೇಽಪ್ಯಸೌ ವಿಷಯಭೇದತಃ ।
ಗುರುರ್ವಚಸ್ಯರ್ಜುನೋಽಯಂ ಕೀರ್ತೌ ಭೀಷ್ಮಃ ಶರಾಸನೇ ॥ ೧೮ ॥

'ವಿಷಯಭೇದತಃ ಏಕೇನ ಬಹುಧಾ ಉಲ್ಲೇಖೇ ಅಪಿ ಅಸೌ (ಅಲಂಕಾರಃ ಭವತಿ)' ಭಿನ್ನ

ಭಿನ್ನ ವಿಷಯಗಳನ್ನು ಆಶ್ರಯಿಸಿ ಒಬ್ಬನೇ ಒಬ್ಬ ವ್ಯಕ್ತಿಯನ್ನೇ ವರ್ಣಿಸಿದ್ದಾದರೆ', ಅದು ಎರಡನೆಯ ಉಲ್ಲೇಖಾಲಂಕಾರವಾಗುತ್ತದೆ.

**ಉದಾಹರಣೆ** : ಮಾತಿನ ವಿಷಯದಲ್ಲಿ ಗುರುವೂ, ಕೀರ್ತಿಯ ವಿಷಯದಲ್ಲಿ ಅರ್ಜುನನೂ, ಶರಾಸನ ವಿಷಯದಲ್ಲಿ ಭೀಷ್ಮನೂ, ಈ ರಾಜನು ಆಗಿರುತ್ತಾನೆ. ಗುರುತ್ವ, ಅರ್ಜುನತ್ವ, ಭೀಷ್ಮತ್ವ ಗುಣಗಳನ್ನು ಆಶ್ರಯಿಸಿ, ಒಬ್ಬನೇ ಒಬ್ಬ ರಾಜನನ್ನೇ ವರ್ಣಿಸಿರುವುದರಿಂದ, ಇದು ಎರಡನೆಯ ಉಲ್ಲೇಖಾಲಂಕಾರ.

**ಗುರುಃ** - ಮಾತಿನ ವಿಷಯದಲ್ಲಿ ಅತ್ಯಂತ ಪಟುವಾಗಿರುವ ಬೃಹಸ್ಪತಿಯಂತೆ ಈ ರಾಜನೂ ಸಹ ಅತ್ಯಂತ ಪಟುವಾಗಿರುತ್ತಾನೆ; **ಅರ್ಜುನಃ** - ಕೀರ್ತಿಯ ವಿಷಯದಲ್ಲಿ ಅರ್ಜುನನು ಹೇಗೆ ಪರಿಶುದ್ಧನೋ, ಅದರಂತೆ ಇವನೂ ಸಹ ಪರಿಶುದ್ಧಕೀರ್ತಿಸಂಪನ್ನನು; **ಭೀಷ್ಮಃ** - ಧನುಸ್ಸಿನ ವಿಷಯದಲ್ಲಿ ಅಂದರೆ ಪರಾಕ್ರಮದ ವಿಷಯದಲ್ಲಿ ಭೀಷ್ಮನು ಹೇಗೆ ಅತ್ಯಂತ ಭಯಂಕರನೋ, ಹಾಗೆಯೇ ಈ ರಾಜನೂ ಸಹ ಭೀಷ್ಮನಂತೆ ಅತ್ಯಂತ ಭಯಂಕರನು- ಹೀಗೆ 'ಗುರುಃ, ಅರ್ಜುನಃ, ಭೀಷ್ಮಃ' ಈ ಪದಗಳಲ್ಲಿ ಶ್ಲೇಷವಿದ್ದು, ರಾಜನಲ್ಲಿ ಗುರುತ್ವ, ಅರ್ಜುನತ್ವ, ಭೀಷ್ಮತ್ವಗಳ ಆರೋಪವಿರುವುದು ಈ ಉದಾಹರಣೆಯ ವೈಶಿಷ್ಟ್ಯ. 'ಗುರುಃ ಇವ ಗುರುಃ, ಅರ್ಜುನಃ ಇವ ಅರ್ಜುನಃ, ಭೀಷ್ಮಃ ಇವ ಭೀಷ್ಮಃ' ಎಂಬ ಸಾದೃಶ್ಯವೂ ಗಮ್ಯವಾಗಿದ್ದು, ಇದು ವಾಚ್ಯವನ್ನೇ ಪೋಷಿಸುತ್ತದೆ.

## ೮-೯-೧೦- ಸ್ಮೃತಿ- ಭ್ರಾಂತಿ - ಸಂದೇಹಾಲಂಕಾರಾಃ

ಸ್ಮೃತಿ, ಭ್ರಾಂತಿ, ಸಂದೇಹಗಳು ಜ್ಞಾನವಿಶೇಷಗಳು. ಈ ಜ್ಞಾನವಿಶೇಷಗಳಲ್ಲಿ ಚಮತ್ಕಾರಾಧಾಯಕತ್ವವಿದ್ದರೆ ಮಾತ್ರ ಇವು ಅಲಂಕಾರವೆನಿಸುತ್ತವೆ. ಆದ್ದರಿಂದ, ಸ್ಮೃತಿ- ಭ್ರಾಂತಿ- ಸಂದೇಹ ಜ್ಞಾನಗಳ ಲಕ್ಷಣವನ್ನು ಹೀಗೆ ನೋಡಬಹುದು. 1. ಚಮತ್ಕಾರಾಧಾಯಕ - **ಸದೃಶವಸ್ತುದರ್ಶನಜನ್ಯಸದೃಶವಸ್ತ್ವಂತರಜ್ಞಾನಂ ಸ್ಮೃತಿಃ'**. ಸದೃಶ ವಸ್ತುವೊಂದನ್ನು ನೋಡಿದ ಬಳಿಕ ತತ್ಸದೃಶವಾದ ಮತ್ತೊಂದು ವಸ್ತುವಿನ ಸ್ಮರಣೆ ಚಮತ್ಕಾರಾಧಾಯಕವಾದುದಾಗಿ 'ಸ್ಮೃತಿ' ಜ್ಞಾನ ಎನಿಸುತ್ತದೆ. 2. ಚಮತ್ಕಾರಾಧಾಯಕ - ಸಾದೃಶ್ಯಜ್ಞಾನಫಲಕ - ಪಕ್ಷದ್ವಯಾವಲಂಬಿ **ಜ್ಞಾನಂ ಸಂದೇಹಃ'** ಸಾದೃಶ್ಯಜ್ಞಾನದಿಂದ ಉಂಟಾಗುವ ಪಕ್ಷ (ವಸ್ತು) ದ್ವಯದಲ್ಲಿ ಓಲಾಡುವ ಜ್ಞಾನವೇ ಚಮತ್ಕಾರಾಧಾಯಕವಾದುದಾಗಿ 'ಸಂದೇಹ' ಜ್ಞಾನವೆನಿಸುತ್ತದೆ. 3. 'ಚಮತ್ಕಾರಾಧಾಯಕ - ಸಾದೃಶ್ಯಮೂಲಕ - ಅತತ್ತ್ವನಿಷ್ಠತತ್ತ್ವಜ್ಞಾನಂ ಭ್ರಾಂತಿಃ' ಸಾದೃಶ್ಯಜ್ಞಾನದಿಂದ ಉಂಟಾದ, ಅತತ್ತ್ವವಸ್ತುವಿನಲ್ಲಿ (ವಸ್ತುತಃ ನೈಜವಸ್ತುವಲ್ಲದ್ದರಲ್ಲಿ) ಉಂಟಾದ ತತ್ತ್ವಜ್ಞಾನವೇ ಚಮತ್ಕಾರಾಧಾಯಕವಾದುದಾಗಿ ಭ್ರಾಂತಿಜ್ಞಾನವೆನಿಸುತ್ತದೆ. ಇವುಗಳಿಗೆ ಕ್ರಮವಾಗಿ ಉದಾಹರಣೆ

1. ಪದ್ಮಂ ದೃಷ್ಟ್ವಾ ಕಾಂತಾಮುಖಂ ಸ್ಮರಾಮಿ
2. ಸ್ಥಾಣುರ್ವಾ ? ಪುರುಷೋ ವಾ? ।
3. ಶುಕ್ತೌ ರಜತಜ್ಞಾನಂ, ರಜ್ಜೌ ಸರ್ಪಜ್ಞಾನಂ ಇತ್ಯಾದಿ. ಈ ಮೂರೂ ಅಲಂಕಾರಗಳ ಲಕ್ಷಣ ಲಕ್ಷ್ಯಗಳನ್ನು ಹೀಗೆ ಮನಗಾಣಬಹುದು.

## ೮. ಸ್ಮೃತ್ಯಲಂಕಾರಃ (ಸ್ಮೃತಿಮದಲಂಕಾರಃ)

ಸ್ಯಾತ್ ಸ್ಮೃತಿಭ್ರಾಂತಿಸಂದೇಹೈಸ್ತದಂಕಾಲಂಕೃತಿತ್ರಯಂ ।
೮. ಪಂಕಜಂ ಪಶ್ಯತಃ ಕಾಂತಾಮುಖಂ ಮೇ ಗಾಹತೇ ಮನಃ ॥ ೧೯ ॥
೯. ಅಯಂ ಪ್ರಮತ್ತಮಧುಪಸ್ತ್ವನ್ಮುಖಂ ವೇತ್ತಿ ಪಂಕಜಂ ।
೧೦. ಪಂಕಜಂ ವಾ ಸುಧಾಂಶುರ್ವೇತ್ಯಸ್ಮಾಕಂ ತು ನ ನಿರ್ಣಯಃ ॥ ೨೦ ॥

ಸಾದೃಶ್ಯದಿಂದ ಉಂಟಾಗುವ ಸ್ಮೃತಿ ಭ್ರಾಂತಿ ಸಂದೇಹಜ್ಞಾನಗಳಿಂದಾಗಿ ಕ್ರಮವಾಗಿ ಸ್ಮೃತ್ಯಲಂಕಾರ (ಸ್ಮತಿಮದಲಂಕಾರ), ಭ್ರಾಂತ್ಯಲಂಕಾರ (ಭ್ರಾಂತಿಮದಲಂಕಾರ) ಮತ್ತು ಸಂದೇಹಾಲಂಕಾರ (ಸಸಂದೇಹಾಲಂಕಾರ) ಎಂಬ ಮೂರು ಅಲಂಕಾರಗಳಾಗುತ್ತವೆ.

ಉದಾಹರಣೆ : ಓರ್ವ ನಾಯಕನು ಹೇಳುತ್ತಿರುವ ಮಾತು 'ಪಂಕಜಂ ಪಶ್ಯತಃ ಮೇ ಮನಃ ಕಾಂತಾಮುಖಂ ಗಾಹತೇ'. 'ಕಮಲವನ್ನು ನೋಡುತ್ತಿರುವ ನನ್ನ ಮನಸ್ಸು ನನ್ನ ಕಾಂತೆಯ ಮುಖವನ್ನು ನೆನೆಯುತ್ತಿದೆ (ಮುಖದಲ್ಲಿ ತೇಲುತ್ತಿದೆ)' - ಎಂಬ ಈ ಉದಾಹರಣೆಯಲ್ಲಿ ಕಮಲ ಮತ್ತು ಮುಖಗಳಿಗೆ ಸಾದೃಶ್ಯವಿರುವುದರಿಂದ, ಕಮಲವನ್ನು ನೋಡುತ್ತಿರಲಾಗಿ, ತತ್ಸದೃಶ ಗುಣವುಳ್ಳ ತನ್ನ ಕಾಂತೆಯ ಮುಖದ ಸ್ಮರಣೆ ವರ್ಣಿತವಾಗಿರುವುದರಿಂದ ಇಲ್ಲಿ ಸ್ಮೃತ್ಯಲಂಕಾರ (ಸ್ಮೃತಿಮದಲಂಕಾರ).

೯. ಇದೂ ಸಹ ಓರ್ವ ನಾಯಕನು ತನ್ನ ಕಾಂತೆಯನ್ನು ಕುರಿತು ಹೇಳುವ ಮಾತು. 'ಅಯಂ ಪ್ರಮತ್ತಮಧುಪಃ ತ್ವನ್ಮುಖಂ ಪಂಕಜಂ ವೇತ್ತಿ'. 'ಮದೋನ್ಮತ್ತವಾದ ಈ ಭ್ರಮರವು ನಿನ್ನ ಮುಖವನ್ನೇ ಪಂಕಜವೆಂದು ತಿಳಿಯುತ್ತಿದೆ.' ಎಂಬ ಈ ಉದಾಹರಣೆಯಲ್ಲಿ, ಮುಖ - ಪಂಕಜಗಳಿಗೆ ಸಾದೃಶ್ಯವಿರುವುದರಿಂದ, ಭ್ರಮರಕ್ಕೆ ನಾಯಿಕೆಯ ಮುಖದಲ್ಲಿ ಕಮಲದ ಭ್ರಾಂತಿಜ್ಞಾನ ವರ್ಣಿತವಾಗಿರುವುದರಿಂದ, ಇದು ಭ್ರಾಂತ್ಯಲಂಕಾರ (ಭ್ರಾತಿಮದಲಂಕಾರ).
೧೦. 'ಪಂಕಜಂ ವಾ ? ಸುಧಾಂಶುಃ ವಾ: ? ಇತಿ ಅಸ್ಮಾಕಂ ತು ನ ನಿರ್ಣಯಃ' 'ಇದು ಕಮಲವೋ? ಅಥವಾ ಚಂದ್ರನೋ? ಈ ಬಗ್ಗೆ ನಮಗೆ ಯಾವುದೇ ನಿಶ್ಚಯವಾಗುತ್ತಿಲ್ಲ' - ಎಂದು ತಮ್ಮ ತಮ್ಮ ಕಾಂತೆಯರ ಮುಖಗಳನ್ನು (ತನ್ನ ಕಾಂತೆಯ ಮುಖವನ್ನು) ನೋಡಿದ ನಾಯಕರು (ನಾಯಕನು) ಹೇಳುವ ಮಾತಿದು. ಮುಖವು (ಪೂರ್ಣ) ಚಂದ್ರನಂತೆ ಕಾಂತಿಮತ್ತಾಗಿದೆ ಮತ್ತು ಕಮಲದಂತೆ ಶೋಭಾಯಮಾನವಾಗಿದೆ. ಆದ್ದರಿಂದ, ಮುಖವನ್ನು ನೋಡಿದ್ದರಿಂದ, ಈ ಮುಖದಲ್ಲಿ 'ಕಮಲವೋ ? ಅಥವಾ ಚಂದ್ರನೋ ? ಎಂಬ ಪಕ್ಷ (ಕೋಟಿ) ದ್ವಯ ಅವಲಂಬಿಯಾದ ಜ್ಞಾನವು ವರ್ಣಿತವಾಗಿರುವುದರಿಂದ, ಇದು (ಸ) ಸಂದೇಹಾಲಂಕಾರ.

## ೧೧. ಅಪಹ್ನವಾಲಂಕಾರ : (ತದ್ಭೇದಾಃ)

'ಅಪಹ್ನವಸು ಅಪಹ್ನವಃ' 'ಅಪಹ್ನೂಯತೇ = ಗೋಪ್ಯತೇ ಇತಿ 'ಅಪಹ್ನುತಿಃ'. 'ಮರೆ ಮಾಚುವಿಕೆ ಅಥವಾ ನಿಷೇಧಿಸುವಿಕೆ' ಎಂಬುದು ಈ ಅಪಹ್ನವ ಪದದ ಅರ್ಥ. ಒಂದು ವಸ್ತುವಿನ ಧರ್ಮವನ್ನು

ಅಪಹ್ನವನ ಮಾಡುವುದು ಬೇರೆ ಯಾವುದಾದರೊಂದು ಚಮತ್ಕಾರಕ್ಕೆ ಕಾರಣವಾಗಿರುತ್ತದೆ. ಆದ್ದರಿಂದ, ಈ ರೀತಿಯ ಅಪಹ್ನವವೂ ಸಹ ಚಮತ್ಕಾರಾಧಾಯಕವೇ ಆಗಿರುತ್ತದೆ. ಇದು ಒಟ್ಟು ಆರು ವಿಧ. ಅವುಗಳೆಂದರೆ 1. ಶುದ್ಧಾಪಹ್ನುತಿ 2. ಹೇತ್ವಪಹ್ನುತಿ 3. ಪರ್ಯಸ್ತಾಪಹ್ನುತಿ 4. ಭ್ರಾಂತಾಪಹ್ನುತಿ 5. ಛೇಕಾಪಹ್ನುತಿ 6. ಕೈತವಾಪಹ್ನುತಿ - ಹೀಗೆ ಕ್ರಮವಾಗಿ ಇವುಗಳ ಲಕ್ಷಣ ಲಕ್ಷ್ಯಗಳ ವಿವೇಚನೆ ಹೀಗಿದೆ.

**೧. ಶುದ್ಧಾಪಹ್ನುತಿಃ**

ಅಪಹ್ನವನಕ್ಕೆ ಯಾವುದೇ ಕಾರಣವನ್ನು ಹೇಳದೇ ಇರುವುದು

> **ಶುದ್ಧಾಪಹ್ನುತಿರನ್ಯಸ್ಯಾರೋಪಾರ್ಥೋ ಧರ್ಮನಿಹ್ನವಃ ।**
> **ನಾಯಂ ಸುಧಾಂಶುಃ ಕಿಂ ತರ್ಹಿ ? ವ್ಯೋಮಗಂಗಾಸರೋರುಹಮ್** ॥ ೨೧ ॥

'ಅನ್ಯಸ್ಯ ಆರೋಪಾರ್ಥಃ (ಯಃ) ಧರ್ಮನಿಹ್ನವಃ (ಸಃ) ಶುದ್ಧಾಪಹ್ನುತಿಃ' - ವರ್ಣನೀಯ ವಸ್ತುವಿನಲ್ಲಿರುವ ಧರ್ಮವನ್ನು ಮರೆಮಾಚಿ, ಆ ಧರ್ಮದಲ್ಲಿ ಉಪಮಾನದ ಧರ್ಮವನ್ನು (ಅನ್ಯಸ್ಯ) ಆರೋಪ ಮಾಡುವುದು, ಶುದ್ಧಾಪಹ್ನುತ್ಯಲಂಕಾರವಾಗುತ್ತದೆ. ಈ ರೀತಿಯ ಅಪಹ್ನವಕ್ಕೆ ಯಾವುದೇ ಕಾರಣವನ್ನು ಹೇಳದೇ ಇರುವುದರಿಂದ, ಇದು ಶುದ್ಧಾಪಹ್ನುತ್ಯಲಂಕಾರ.

ಉದಾಹರಣೆ : ಇದು ಸುಧಾಂಶುವಲ್ಲ. ಹಾಗಾದರೆ ಇದು ಏನಾಗಿದೆ ? (ಸುಧಾಂಶುವಿನಂತೆ ಕಾಣುತ್ತಿರುವ ಈ ವಸ್ತುವು ವಸ್ತುತಃ ಸುಧಾಂಶುವಲ್ಲ). ಆದರೆ, 'ಇದು ಆಕಾಶಗಂಗೆಯಲ್ಲಿ ಅರಳಿರುವ ಕಮಲವಾಗಿರುತ್ತದೆ' - ಎಂಬ ಈ ಉದಾಹರಣೆಯಲ್ಲಿ - ವರ್ಣನೀಯ ಚಂದ್ರನಲ್ಲಿ ಚಂದ್ರತ್ವವನ್ನು ನಿಷೇಧಿಸಿ, ಆ ಚಂದ್ರನಲ್ಲಿ ವ್ಯೋಮಗಂಗಾಸರೋರುಹತ್ವರೂಪ ಉಪಮಾನ ಧರ್ಮವನ್ನು ಆರೋಪಮಾಡಿರುವುದರಿಂದ, ಇದು ಶುದ್ಧಾಪಹ್ನುತ್ಯಲಂಕಾರ.

**೨. ಹೇತ್ವಪಹ್ನುತಿಃ**

ಈ ರೀತಿಯ ಅಪಹ್ನವಕ್ಕೆ ಕಾರಣವನ್ನು ಹೇಳುವುದು ಈ ಭೇದಕ್ಕೆ ಕಾರಣ.

> **ಸ ಏವ ಯುಕ್ತಿಪೂರ್ವಶ್ಚೇದುಚ್ಯತೇ ಹೇತ್ವಪಹ್ನುತಿಃ ।**
> **ನೇಂದುಸ್ತೀವ್ರೋ ನ ನಿಶ್ಯರ್ಕಃ ಸಿಂಧೋರೌರ್ವೋಽಯಮುತ್ಥಿತಃ** ॥ ೨೨ ॥

**ಸಃ** = ಶುದ್ಧಾಪಹ್ನುತಿಃ ಏವ ಯುಕ್ತಿಪೂರ್ವಃ ಚೇತ್ ಹೇತ್ವಪಹ್ನುತಿಃ (ಇತಿ) ಉಚ್ಯತೇ'. 'ಆ ಶುದ್ಧಾಪಹ್ನುತಿಯೇ ಕಾರಣಸಹಿತವಾಗಿದ್ದಲ್ಲಿ ಹೇತ್ವಪಹ್ನುತ್ಯಲಂಕಾರವೆನಿಸುತ್ತದೆ'. ಅಂದರೆ ಆ ರೀತಿ ಮರೆಮಾಚಲು ಕಾರಣವನ್ನು ಹೇಳಿದ್ದಲ್ಲಿ ಅದು ಹೇತ್ವಪಹ್ನುತಿಯಾಗುತ್ತದೆ.

**ಉದಾಹರಣೆ** : ವಿರಹತಪ್ತಳಾದ ಕಾಂತೆಯೋರ್ವಳು ಚಂದ್ರನನ್ನು ಹೀಗೆ ನಿಂದಿಸುತ್ತಿರುವಳು. 'ಇದು ಚಂದ್ರನಲ್ಲ, ಏಕೆಂದರೆ ತೀವ್ರ (ತೀಕ್ಷ್ಣ) ವಾಗಿದೆ. (ತೀವ್ರವಾಗಿರುವುದರಿಂದ ಸೂರ್ಯನೇನು?)

ಸೂರ್ಯನೂ ಅಲ್ಲ. ಕಾರಣ, ರಾತ್ರಿಯಲ್ಲಿ ಇರುವುದರಿಂದ, (ಹಾಗಿದ್ದಲ್ಲಿ ಚಂದ್ರ ಸೂರ್ಯ ಭಿನ್ನವಾದ ವಸ್ತು ಇದಾವುದು? (ಎಂದರೆ) ಇದು ಸಮುದ್ರದ ದೆಸೆಯಿಂದ ಹೊರ ಹೊಮ್ಮಿರುವ ವಡವಾಗ್ನಿ'. ಇಲ್ಲಿ ಚಂದ್ರನಲ್ಲಿ ಚಂದ್ರತ್ವವನ್ನು ನಿಷೇಧಿಸಲು ತೀವ್ರತ್ವವನ್ನೂ, ಅರ್ಕತ್ವವನ್ನು ಅರ್ಕನಲ್ಲಿ ನಿಷೇಧಿಸಲು ನಿಶಿತ್ವವನ್ನೂ ಹೇತುವಾಗಿ ಹೇಳಲಾಗಿದೆ. ಹೀಗೆ ನಿಷಿದ್ಧವಾಗಿರುವ ಪ್ರಕೃತವಸ್ತುವಿನ ಧರ್ಮವಾದ ಇಂದುತ್ವ, ಅರ್ಕತ್ವಗಳಲ್ಲಿ ವಡವಾನಲತ್ವವನ್ನು ಆರೋಪ ಮಾಡಿರುವುದರಿಂದ ಇದು ಹೇತ್ವಪಹ್ನುತ್ಯಲಂಕಾರ. ಈ ವಡವಾನಲದಲ್ಲಿ ಸಮುದ್ರದಿಂದ ಹೊರ ಬಂದಿರುವಿಕೆ, ತೀವ್ರತ್ವ, ನಿಶಿಭವತ್ವಗಳು ಇರುತ್ತವೆಯಷ್ಟೆ!

೩. ಪರ್ಯಸ್ತಾಪಹ್ನುತಿ:

ನಿಷಿದ್ಧಧರ್ಮವನ್ನು ಪ್ರಕೃತವಸ್ತುವಿನಲ್ಲಿ ಆರೋಪಿಸುವುದು ಈ ಭೇದ.

> ಅನ್ಯತ್ರ ತಸ್ಯಾ ರೋಪಾರ್ಥಃ ಪರ್ಯಸ್ತಾಪಹ್ನುತಿಸ್ತು ಸಃ ।
> ನಾಯಂ ಸುಧಾಂಶುಃ ಕಿಂ ತರ್ಹಿ? ಸುಧಾಂಶುಃ ಪ್ರೇಯಸೀಮುಖಂ ॥ ೨೩ ॥

**'ಸಃ (ಧರ್ಮಾಪಹ್ನವಃ) ಅನ್ಯತ್ರ (ವರ್ಣನೀಯೇ ವಸ್ತುನಿ) ತಸ್ಯ (ಅಪಹ್ನುತ ಧರ್ಮಸ್ಯ) ಆರೋಪಾರ್ಥಃ ಚೇತ್, ತು, ಪರ್ಯಸ್ತಾಪಹ್ನುತಿಃ (ಭವತಿ).' ಅಥವಾ, (ಯಃ - ಅವರ್ಣ್ಯಗತ ಚಂದ್ರತ್ವಾದ್ಯಪಹ್ನವಃ) ಅನ್ಯತ್ರ (ವರ್ಣನೀಯೇ ವಸ್ತುನಿ) ತಸ್ಯ (ಅಪಹ್ನುತಚಂದ್ರತ್ವಾದೇಃ) ಆರೋಪಾರ್ಥಃ (ಭವತಿ) ಸಃ ತು ಪರ್ಯಸ್ತಾಪಹ್ನುತಿಃ' - ಇದು ಅನ್ವಯ.**

ಚಂದ್ರಾದಿ ಅವರ್ಣ್ಯ ವಸ್ತುವಿನಲ್ಲಿ ಆ ಧರ್ಮವನ್ನು ಮರೆಮಾಚಿ, ಆ ರೀತಿಯ ಅಪಹ್ನುತ ಧರ್ಮವನ್ನು ವರ್ಣನೀಯ ಕಾಂತಾಮುಖಾದಿಯಲ್ಲಿ ಆರೋಪಿಸಿದ್ದಾದರೆ, ಅದು ಪರ್ಯಸ್ತಾಪಹ್ನುತ್ಯಲಂಕಾರವಾಗುತ್ತದೆ.

ಉದಾಹರಣೆ : 'ಅಯಂ ಸುಧಾಂಶುಃ ನ ತರ್ಹಿ ಕಿಂ ? ಸುಧಾಂಶುಃ ಪ್ರೇಯಸೀಮುಖಂ' - 'ಇದು ಚಂದ್ರನಲ್ಲ. ಹಾಗಿದ್ದರೆ ಯಾವುದು ಸುಧಾಂಶು? ಸುಧಾಂಶುವೆಂದರೆ ಪ್ರೇಯಸೀ ಮುಖವೇ' - ಎಂಬ ಈ ಉದಾಹರಣೆಯಲ್ಲಿ ಸುಧಾಂಶು (ಅವರ್ಣ್ಯ) ವಿನಲ್ಲಿ ಸುಧಾಂಶುತ್ವವನ್ನು ಮರೆಮಾಚಿ, ಹಾಗೆ ನಿಷಿದ್ಧವಾದ ಸುಧಾಂಶುತ್ವವನ್ನು ಪ್ರೇಯಸಿಯ ಮುಖದಲ್ಲಿ ಆರೋಪಿಸಿರುವುದರಿಂದ ಇದು ಪರ್ಯಸ್ತಾಪಹ್ನುತ್ಯಲಂಕಾರ. ಪ್ರಸಿದ್ಧ ಚಂದ್ರನ ದರ್ಶನ ಸಂತಾಪಕಾರಿಯಾಗಿರುತ್ತದೆ. ಆದರೆ ಪ್ರೇಯಸಿಯ ಮುಖಚಂದ್ರದರ್ಶನವು ನೇತ್ರಾನಂದಕರವಾಗಿರುತ್ತದೆಯಾದ್ದರಿಂದ, ಈ ಮುಖವೇ ಸುಧಾಂಶು - ಎಂದು ಭಾವ.

೪. ಭ್ರಾಂತಾಪಹ್ನುತಿ:

ಇತರರಿಗೆ ಉಂಟಾದ ಭ್ರಾಂತಿಯನ್ನು ಸತ್ಯಸಂಗತಿಯನ್ನು ತಿಳಿಸುವುದರ ಮುಖಾಂತರ ಹೋಗಲಾಡಿಸುವುದು.

ಭ್ರಾಂತಾಪಹ್ನುತಿರನ್ಯಸ್ಯ ಶಂಕಾಯಾಂ ಭ್ರಾಂತಿವಾರಣೇ ।
ತಾಪಂ ಕರೋತಿ ಸೋತ್ಕಂಪಂ ಜ್ವರಃ ಕಿಂ ? ನ ಸಖಿ ಸ್ಮರಃ ॥ ೨೪ ॥

'ಅನ್ಯಸ್ಯ ಶಂಕಾಯಾಂ (ಸತ್ಯಾಂ) (=ತತ್ತ್ವಜ್ಞಾನೇನ ಅಯಥಾರ್ಥವಸ್ತುನಃ ಭ್ರಾಂತೌ ಸತ್ಯಾಂ) ಭ್ರಾಂತಿವಾರಣೇ (ಸತಿ) (=ತತ್ತ್ವಸ್ವರೂಪ ಕಥನೇನ ಭ್ರಾಂತಿವಾರಣೇ ಕೃತೇ ಸತಿ) ಭ್ರಾಂತಾಪಹ್ನುತಿಃ (ಇತ್ಯಲಂಕಾರಃ)'. 'ತತ್ತ್ವಜ್ಞಾನವು ತಿಳಿಯದೇ ಇರುವುದರಿಂದ ಬೇರೆಯವರಿಗೆ ಆ ವಿಷಯದಲ್ಲಿ ಭ್ರಾಂತಿ ಬಂದುದಾದರೆ, ಆಗ ಸತ್ಯಸಂಗತಿಯನ್ನು ಹೇಳುವುದರ ಮುಖಾಂತರ ಆ ಭ್ರಾಂತಿಯನ್ನು ನಿವಾರಣೆಮಾಡಿದ್ದಾದರೆ, ಅದು ಭ್ರಾಂತಾಪಹ್ನುತ್ಯಲಂಕಾರವಾಗುತ್ತದೆ'.

ಉದಾಹರಣೆ : ಸ್ಮರತಪ್ತಳಾದ ನಾಯಿಕೆಯೋರ್ವಳು ತನ್ನ ಸಖಿಗೆ, 'ಸೋತ್ಕಂಪಂ ತಾಪಂ ಕರೋತಿ ಹೇ ಸಖಿ = 'ಎಲೌ ಸಖಿಯೇ' ಶರೀರ ಕಂಪದಿಂದೊಡಗೂಡಿದ ಸಂತಾಪವನ್ನು ಉಂಟು ಮಾಡುತ್ತಿದೆ' - ಎಂದು ಹೇಳಲು, ಆಗ ಆ ಸಖಿಗೆ, ಜ್ವರದ ಸಂದೇಹ ಬಂದು, 'ಜ್ವರಃ ಕಿಂ?' = ಜ್ವರವು ಹೀಗೆ ತಾಪವನ್ನುಂಟು ಮಾಡುತ್ತಿದೆಯೇನು' - ಎಂದು ಪ್ರಶ್ನಿಸುವಳು. ಆಗ ಇವಳ ಸಂಶಯವನ್ನು ನಿವಾರಣೆಮಾಡುವ ಸಲುವಾಗಿ ನಾಯಿಕೆಯು ನ ಜ್ವರಃ ಜ್ವರವು ಹೀಗೆ ತಾಪವನ್ನುಂಟು ಮಾಡುತ್ತಿಲ್ಲ, ಆದರೆ, ಸ್ಮರಃ - ಮನ್ಮಥನು ಹೀಗೆ ಸೋತ್ಕಂಪತಾಪವನ್ನುಂಟುಮಾಡುತ್ತಿರುವನು' ಎಂದು ಸತ್ಯಸಂಗತಿಯನ್ನು ಹೇಳುವಳು. ಹೀಗೆ ಸತ್ಯಸಂಗತಿಯನ್ನು ಹೇಳಿ ಸಖಿಯ ಭ್ರಾಂತಿಯನ್ನು ನಿವಾರಣೆಮಾಡಿರುವುದರಿಂದ, ಇಲ್ಲಿ ಭ್ರಾಂತಾಪಹ್ನುತ್ಯಲಂಕಾರ.

೫. ಛೇಕಾಪಹ್ನುತಿಃ

ವಿದಗ್ಧ (ಚತುರ) ವ್ಯಕ್ತಿಯು, ಬೇರೆಯವರಿಗೆ ಸತ್ಯಸಂಗತಿಯ ಬಗ್ಗೆ ಸಂದೇಹ ಬಂದಾಗ, ಆ ಸಂದೇಹವನ್ನು ಸತ್ಯಸಂಗತಿಯನ್ನು ಮರೆಮಾಚಿ, ಅಸತ್ಯಸಂಗತಿಯನ್ನು ಹೇಳಿ ಸಂದೇಹವನ್ನು ನಿವಾರಣೆ ಮಾಡುವುದು. -

ಛೇಕಾಪಹ್ನುತಿರನ್ಯಸ್ಯ ಶಂಕಾತಸ್ತಥ್ಯನಿಹ್ನವೇ ।
ಪ್ರಜಲ್ಪನ್ ಮತ್ಪದೇ ಲಗ್ನಃ ಕಾಂತಃ ಕಿಂ ? ನ ಹಿ ನೂಪುರಃ ॥ ೨೫ ॥

'ಅನ್ಯಸ್ಯ (= ಶ್ರೋತೃಜನಸ್ಯ) ಶಂಕಾತಃ ತಥ್ಯನಿಹ್ನವೇ (ಕೃತೇ ಸತಿ) ಛೇಕಾಪಹ್ನುತಿಃ' ಓರ್ವ ವ್ಯಕ್ತಿಯು ಬೇರೊಬ್ಬ ವ್ಯಕ್ತಿಗೆ ತನ್ನ ರಹಸ್ಯಸಂಗತಿಯನ್ನು ಹೇಳುತ್ತಿರುವಾಗ ಅನಿರೀಕ್ಷಿತವಾಗಿ ಅಲ್ಲಿಗೆ ಬಂದ ಬೇರೊಬ್ಬ ಪರಿಚಿತ ವ್ಯಕ್ತಿಯು ಸಂದೇಹಗೊಂಡು, ಸತ್ಯಸಂಗತಿಯ ಬಗ್ಗೆ ಪ್ರಶ್ನಿಸಿದಾಗ, ತನ್ನ ಚತುರತೆಯಿಂದ ಮೊದಲ ವ್ಯಕ್ತಿಯು ಸತ್ಯಸಂಗತಿಯನ್ನು ಮರೆ ಮಾಚಿ, ಅಸತ್ಯಸಂಗತಿಯನ್ನು ಹೇಳಿ ಸಂದೇಹ ನಿವಾರಣೆ ಮಾಡುವುದು ಛೇಕಾಪಹ್ನುತ್ಯಲಂಕಾರ.

ಉದಾಹರಣೆ : ನಾಯಿಕೆಯೋರ್ವಳು ತನ್ನ ಮನಸ್ಸಿನಲ್ಲಿ ನೆಲೆನಿಂತಿದ್ದ ನಾಯಕನ ಬಗ್ಗೆ ತನ್ನ ಆಪ್ತ ಸಖಿಗೆ 'ಪ್ರಜಲ್ಪನ್ ಮತ್ಪದೇ ಲಗ್ನಃ' (ಹೇ ಸಖಿ) = ಏನೇನೋ ಶಬ್ದ ಮಾಡುತ್ತಾ-ಮಾತನಾಡುತ್ತಾ ನನ್ನ ಕಾಲಮೇಲೆ ಬಿದ್ದನು' ಎಂದು ಹೇಳುತ್ತಿರುವಷ್ಟರಲ್ಲಿ, ಅನಿರೀಕ್ಷಿತವಾಗಿ

ಅಲ್ಲಿಗೆ ಬಂದ ಬೇರೊಬ್ಬ ಸಖಿಯು, 'ಕಾಂತನು ಹೀಗೆ ನಿನ್ನ ಕಾಲ ಮೇಲೆ ಬಿದ್ದನೇನು?' ಎಂದು ಪ್ರಶ್ನಿಸುವಳು. ಸತ್ಯಸಂಗತಿಯನ್ನು ಮರೆಮಾಚುವ ಸಲುವಾಗಿ ಚತುರೆಯಾದ ಆ ನಾಯಿಕೆಯು, 'ಕಾಂತನಲ್ಲ, ಆದರೆ ನನ್ನ ಕಾಲ್ಕಡಗವು ಝಣ ಝಣ ಶಬ್ದ ಮಾಡುತ್ತಾ ನನ್ನ ಕಾಲ ಮೇಲೆ ಬಿದ್ದಿತು' ಎಂದು ಹೇಳಿ ಅವಳ ಸಂದೇಹವನ್ನು ನಿವಾರಣೆ ಮಾಡುವಳು. ಹೀಗೆ ಇಲ್ಲಿ ಸತ್ಯಸಂಗತಿಯನ್ನು ಮರೆಮಾಚುವ ಸಲುವಾಗಿ, ಬುದ್ಧಿವಂತಿಕೆಯಿಂದ ಅಸತ್ಯಸಂಗತಿಯನ್ನು ಹೇಳುವುದರ ಮುಖಾಂತರ ಸಂದೇಹವನ್ನು ಹೋಗಲಾಡಿಸಿರುವುದರಿಂದ, ಇದು ಛೇಕಾಪಹ್ನುತ್ಯಲಂಕಾರ.

**೬. ಕೈತವಾಪಹ್ನುತಿಃ**

'ವ್ಯಾಜ' ಪರ್ಯಾಯವಾಚಿಗಳಾದ 'ಕೈತವ, ವ್ಯಾಜ, ಛಲಾದಿ' ಪದಗಳ ಮುಖಾಂತರ ಅಪಹ್ನವವಾದಲ್ಲಿ ಈ ಭೇದವಾಗುತ್ತದೆ.

> **ಕೈತವಾಪಹ್ನುತಿರ್ವ್ಯಕ್ತೌ ವ್ಯಾಜಾದ್ಯೈರ್ನಿಹ್ನುತೇಃ ಪದೈಃ ।**
> **ನಿರ್ಯಾಂತಿ ಸ್ಮರನಾರಾಚಾಃ ಕಾಂತಾದೃಕ್ಪಾತಕೈತವಾತ್ ॥ ೨೬ ॥**

**'ವ್ಯಾಜಾದ್ಯೈಃ (ವ್ಯಾಜ- ಛಲ- ಕೈತವಾದಿಭಿಃ) ಪದೈಃ ನಿಹ್ನುತೇಃ ವ್ಯಕ್ತೌ (ಸತ್ಯಾಂ) ಕೈತವಾಪಹ್ನುತಿಃ (ಭವತಿ)'**. ವ್ಯಾಜ, ಛಲ, ಕೈತವಾದಿ ಪದಗಳ ಮುಖಾಂತರ ಧರ್ಮದ ನಿಹ್ನವವಾದಲ್ಲಿ ಅದು ಕೈತವಾಪಹ್ನುತಿ ಎಂಬ ಅಲಂಕಾರವಾಗುತ್ತದೆ. ಕೈತವಾದಿ ಪದಗಳು, ಅಸತ್ಯತ್ವಪ್ರತಿಪಾದಕಗಳಾಗಿರುವುದರಿಂದ, ಈ ಪದಗಳ ಪ್ರಯೋಗದಿಂದ ಧರ್ಮದ ನಿಹ್ನವವು ಆಗುತ್ತದೆಯಾದ್ದರಿಂದ, ಈ ಭೇದವುಂಟಾಗುತ್ತದೆ.

**ಉದಾಹರಣೆ : ಕಾಂತಾದೃಕ್ಪಾತಕೈತವಾತ್ ಸ್ಮರನಾರಾಚಾಃ ನಿರ್ಯಾಂತಿ** 'ಕಾಂತೆಯ ದೃಷ್ಟಿಪ್ರಸಾರದ ನೆಪದಿಂದ ಮನ್ಮಥನ ಬಾಣವಿಶೇಷಗಳೇ ಹೊರಬರುತ್ತವೆ' ಎಂಬ ಈ ಉದಾಹರಣೆಯಲ್ಲಿ ಕೈತವಪದದಿಂದಾಗಿ 'ಇಮೇ ನ ಕಾಂತಾಕಟಾಕ್ಷಾಃ, ಎಂಬ ಧರ್ಮನಿಹ್ನವವಿರುತ್ತದೆ. ಅಂದರೆ 'ಇವು ವಸ್ತುತಃ ಕಾಂತೆಯ ಕಟಾಕ್ಷಗಳಲ್ಲ, ಆದರೆ ಅತ್ಯಂತ ತೀಕ್ಷ್ಣವಾದ ಮನ್ಮಥನ ಬಾಣಗಳೇ ಹೌದು' ಎಂದು ನಾರಾಚತ್ವದ ಆರೋಪವಿರುವುದರಿಂದ ಮತ್ತು ಈ ಧರ್ಮನಿಹ್ನವವು ಕೈತವ (ಅಸತ್ಯಾರ್ಥಕ) ಪದದಿಂದ ಆಗಿರುವುದರಿಂದ ಇದು ಕೈತವಾಪಹ್ನುತ್ಯಲಂಕಾರ.

## ೧೨. ಉತ್ಪ್ರೇಕ್ಷಾಲಂಕಾರಃ (ತದ್ಭೇದಾಃ)

**'ಅನ್ಯ(ಉಪಮಾನ)ಧರ್ಮಸಂಬಂಧೇನ ಹೇತುನಾ ಅನ್ಯಸ್ಯ(ಉಪಮೇಯಸ್ಯ) ಅನ್ಯ (ಉಪಮಾನ) ತಾದಾತ್ಮ್ಯಸಂಭಾವನಂ ಉತ್ಪ್ರೇಕ್ಷಾ'**. ಇದು ಉತ್ಪ್ರೇಕ್ಷಾಲಂಕಾರದ ಸಾಮಾನ್ಯ ಲಕ್ಷಣ. ಅಂದರೆ, ಉಪಮಾನಧರ್ಮದ ಸಂಬಂಧವನ್ನು ನಿಮಿತ್ತಮಾಡಿಕೊಂಡು, ಉಪಮೇಯದಲ್ಲಿ ಉಪಮಾನದ ತಾದಾತ್ಮ್ಯ(ಅಭೇದ)ವನ್ನು ಸಂಭಾವನೆ ಮಾಡುವುದು ಉತ್ಪ್ರೇಕ್ಷಾಲಂಕಾರ. 'ಸಂಭಾವನಾ' ಎಂಬುದು ಜ್ಞಾನವಿಶೇಷ 'ಉತ್ಕಟ ಏಕತರಕೋಟಿಕವಾದ ಸಂಶಯವೇ ಸಂಭಾವನಾ

ಎನಿಸುತ್ತದೆ. ಇದು ಸಂಶಯೋತ್ತರಕಾಲಿಕವೂ, ನಿಶ್ಚಯಪ್ರಾಕ್ಕಾಲಿಕವೂ ಆಗಿರುತ್ತದೆ - ಅಂದರೆ ಸಂಶಯಜ್ಞಾನ ನಿಶ್ಚಯಜ್ಞಾನಗಳ ಮಧ್ಯಸ್ಥವಾದ ಜ್ಞಾನ - ಈ ಸಂಭಾವನೆಯೇ ಉತ್ಪ್ರೇಕ್ಷೆಯೆನಿಸುತ್ತದೆ.

> ಸಂಭಾವನಾ ಸ್ಯಾದುತ್ಪ್ರೇಕ್ಷಾ ವಸ್ತುಹೇತುಫಲಾತ್ಮನಾ ।
> ಉಕ್ತಾನುಕ್ತಾಸ್ಪದಾದ್ಯತ್ರ ಸಿದ್ಧಾಸಿದ್ಧಾಸ್ಪದೇ ಪರೇ ॥ ೨೭ ॥

'ವಸ್ತು- ಹೇತು- ಫಲಾತ್ಮನಾ ಸಂಭಾವನಾ ಉತ್ಪ್ರೇಕ್ಷಾ ಸ್ಯಾತ್' - 'ವಸ್ತುರೂಪ - ಹೇತುರೂಪ - ಫಲರೂಪ ಸಂಭಾವನೆಯು ಉತ್ಪ್ರೇಕ್ಷೆಯೆನಿಸುತ್ತದೆ'. ಅಂದರೆ 'ಸಂಭಾವನೆಯೇ = ವಿತರ್ಕವೇ ಉತ್ಪ್ರೇಕ್ಷೆ'. ಇದು ವಸ್ತೂತ್ಪ್ರೇಕ್ಷಾ ಅಥವಾ ಸ್ವರೂಪೋತ್ಪ್ರೇಕ್ಷಾ, ಹೇತೂತ್ಪ್ರೇಕ್ಷಾ ಮತ್ತು ಫಲೋತ್ಪ್ರೇಕ್ಷಾ ಎಂದು ಮೊದಲು ಮೂರು ವಿಧವಾಗಿರುತ್ತದೆ. ಇದರಲ್ಲಿ 'ಅತ್ರ ಆದ್ಯಾ ಉಕ್ತಾನುಕ್ತಾಸ್ಪದಾ, ಪರೇ ಸಿದ್ಧಾಸಿದ್ಧಾಸ್ಪದೇ' - ಮೊದಲನೆಯದಾದ ಸ್ವರೂಪೋತ್ಪ್ರೇಕ್ಷೆಯು ಉಕ್ತವಿಷಯ ಸ್ವರೂಪೋತ್ಪ್ರೇಕ್ಷಾ ಮತ್ತು ಅನುಕ್ತವಿಷಯಸ್ವರೂಪೋತ್ಪ್ರೇಕ್ಷಾ, ಎಂದು ಎರಡು ವಿಧವಾಗಿರುತ್ತದೆ. ಉಳಿದ ಎರಡು ಭೇದಗಳಾದ ಹೇತೂತ್ಪ್ರೇಕ್ಷಾ ಮತ್ತು ಫಲೋತ್ಪ್ರೇಕ್ಷಾಗಳು ಕ್ರಮವಾಗಿ ಸಿದ್ಧವಿಷಯ ಹೇತೂತ್ಪ್ರೇಕ್ಷಾ, ಅಸಿದ್ಧವಿಷಯಹೇತೂತ್ಪ್ರೇಕ್ಷಾ, ಎಂದು ಪ್ರತ್ಯೇಕ ಎರಡೆರಡು ಭೇದತ್ವವನ್ನು ಹೊಂದುತ್ತದೆ. ಹೀಗೆ ಈ ಉತ್ಪ್ರೇಕ್ಷೆಯು ಒಟ್ಟು ಆರು ವಿಧವಾಗುತ್ತದೆ. (ಉಕ್ತಾ ಆಸ್ಪದಾ, ಅನುಕ್ತಾ ಆಸ್ಪದಾ, ಸಿದ್ಧಾ ಆಸ್ಪದಾ, ಅಸಿದ್ಧಾ ಆಸ್ಪದಾ ಎಂಬಲ್ಲಿ 'ಆಸ್ಪದಾ' ಪದಕ್ಕೆ 'ವಿಷಯ' ಎಂದರ್ಥ. ಆದ್ದರಿಂದ ಉಕ್ತವಿಷಯ, ಅನುಕ್ತವಿಷಯ, ಸಿದ್ಧವಿಷಯ ಇತ್ಯಾದಿ ಅನ್ವಯ).

ಈ ಆರೂ ಭೇದಗಳ ಉದಾಹರಣೆಯನ್ನು ಹೀಗೆ ನೋಡಬಹುದು.

೧. ಸ್ವರೂಪೋತ್ಪ್ರೇಕ್ಷಾ

> ಉಕ್ತವಿಷಯ : ಧೂಮಸ್ತೋಮಂ ತಮಃ ಶಂಕೇ ಕೋಕೀವಿರಹಶುಷ್ಮಣಾಂ ।
> ಅನುಕ್ತವಿಷಯ :- ಲಿಂಪತೀವ ತಮೋಽಂಗಾನಿ ವರ್ಷತೀವಾಂಜನಂ ನಭಃ ॥ ೨೮ ॥

ಉಕ್ತವಿಷಯಸ್ವರೂಪೋತ್ಪ್ರೇಕ್ಷೆಗೆ ಉದಾ : ಧೂಮಸ್ತೋಮಂ - ಇತ್ಯಾದಿ '(ಅಹಂ) ತಮಃ ಕೋಕೀ ವಿರಹಶುಷ್ಮಣಾಂ(ಸಂಬಂಧಿನಂ) ಧೂಮಸ್ತೋಮಂ ಶಂಕೇ' - 'ಇಲ್ಲಿ ಹಬ್ಬಿರುವ ಈ ಅಂಧಕಾರವನ್ನು ಹೆಣ್ಣುಚಕ್ರವಾಕಪಕ್ಷಿಗಳ ವಿರಹಾಗ್ನಿಯಿಂದ ಉಂಟಾದ ಧೂಮಸಮೂಹವೆಂದು ತರ್ಕಿಸುತ್ತೇನೆ'. ತಮಸ್ ಮತ್ತು ಧೂಮಸ್ತೋಮಗಳಲ್ಲಿ ನೈಲ್ಯ, ದೃಷ್ಟಿಪ್ರತಿರೋಧಕತ್ವಾದಿ ಧರ್ಮಗಳಿರುತ್ತವೆ. ತಮಸ್ಸು ಎಲ್ಲೆಡೆ ಹಬ್ಬಿರುವುದರಿಂದ ಮತ್ತು ಈ ಅಂಧಕಾರವು ನೀಲವರ್ಣವುಳ್ಳದ್ದಾಗಿ, ಕಣ್ಣು ಕಾಣದಂತೆ ಮಾಡುತ್ತಿರುವುದರಿಂದ, ಈ ಅಂಧಕಾರ ಸಂಬಂಧವಾದ ನೀಲತ್ವ (ನೈಲ್ಯ) ದೃಷ್ಟಿಪ್ರತಿಬಂಧಕತ್ವ (ಪ್ರತಿರೋಧಕ) ಮೊದಲಾದ ಧರ್ಮಗಳನ್ನು ನಿಮಿತ್ತವಾಗಿ ಇಟ್ಟುಕೊಂಡು, ಅದೇ ಕಾಲದಲ್ಲಿ ತನ್ನ ಪ್ರಿಯಕರನ ವಿಯೋಗದಿಂದಾಗಿ ವ್ಯಥೆಪಡುತ್ತಿರುವ ಹೆಣ್ಣುಚಕ್ರವಾಕಪಕ್ಷಿಯ ಹೃದಯಗತವಾದ ವಿರಹಾಗ್ನಿಯ ಸಂಬಂಧವಾದ ಧೂಮಸ್ತೋಮದ ತಾದಾತ್ಮ್ಯಸಂಭಾವನೆಯನ್ನು ಆ ತಮಸ್ಸಿನಲ್ಲಿ ಮಾಡಲಾಗಿದೆ ಮತ್ತು ವಿಷಯವಾದ ತಮಸ್ಸು ಇಲ್ಲಿ ಉಕ್ತವಾಗಿರುವುದರಿಂದ, ಇದು ಉಕ್ತ ವಿಷಯ - ಸ್ವರೂಪೋತ್ಪ್ರೇಕ್ಷಾಲಂಕಾರ.

ಅನುಕ್ತವಿಷಯ ಸ್ವರೂಪೋತ್ಪ್ರೇಕ್ಷೆಗೆ ಉದಾ : 'ತಮಃ ಅಂಗಾನಿ ಲಿಂಪತಿ ಇವ, ನಭಃ ಅಂಜನಂ ವರ್ಷತಿ ಇವ' ಅಂಧಕಾರವು ಅಂಗಗಳಿಗೆ ಲೇಪನಮಾಡುತ್ತಿದೆಯೋ ಏನೋ? ಆಕಾಶವು ಕಾಡಿಗೆಯನ್ನು ಸುರಿಸುತ್ತಿದೆಯೋ ಏನೋ?, ಸರ್ವತ್ರ ಹಬ್ಬಿರುವ ತಮಸ್ಸನ್ನು ನೋಡಿ ಅಂದರೆ, ತಮೋವ್ಯಾಪನವನ್ನು ನೋಡಿ ಹೀಗೆ ಸಂಭಾವಿಸಲಾಗುತ್ತಿದೆ. 'ಆಕಾಶದಿಂದ ಮೊದಲುಗೊಂಡು ಭೂಮಿಯವರೆಗೆ ಇರುವ ಎಲ್ಲ ವಸ್ತುಗಳ ಮಲಿನೀಕರಣ' ಎಂಬುದು ತಮೋವ್ಯಾಪನದಲ್ಲಿರುವ ಧರ್ಮ. ಈ ಧರ್ಮವನ್ನು ನಿಮಿತ್ತಮಾಡಿಕೊಂಡು, ತಮೋವ್ಯಾಪನದಲ್ಲಿ, ತಮಃಕರ್ತೃಕ - ಅಂಗಲೇಪನತಾದಾತ್ಮ್ಯವನ್ನು ಉತ್ಪ್ರೇಕ್ಷಿಸಲಾಗಿದೆ ಮತ್ತು ನಭಃಕರ್ತೃಕಅಂಜನವರ್ಷಣ ತಾದಾತ್ಮ್ಯವನ್ನು ಉತ್ಪ್ರೇಕ್ಷಿಸಲಾಗಿದೆ ತಮೋವ್ಯಾಪನರೂಪವಿಷಯವು ಶಬ್ದದ್ವಾರಾ ಅನುಪಾತ್ತವಾಗಿರುವುದರಿಂದ, ಇದು ಅನುಕ್ತವಿಷಯಸ್ವರೂಪೋತ್ಪ್ರೇಕ್ಷೆಯಾಗಿರುತ್ತದೆ.

೨. ಹೇತೂತ್ಪ್ರೇಕ್ಷಾ

ಸಿದ್ಧ ವಿಷಯ : - ರಕ್ತೌ ತವಾಂಘ್ರೀ ಮೃದುಲೌ ಭುವಿ ವಿಕ್ಷೇಪಣಾದ್ಧ್ರುವಂ ।
ಅಸಿದ್ಧವಿಷಯ : - ತ್ವನ್ಮುಖಾಭೇಚ್ಛಯಾ ನೂನಂ ಪದ್ಮೈರ್ವೈರಾಯತೇ ಶಶೀ ॥ ೨೯ ॥

ಹೇತುವಲ್ಲದ್ದನ್ನು ಹೇತುವನ್ನಾಗಿ ಸಂಭಾವಿಸುವುದು ಹೇತೂತ್ಪ್ರೇಕ್ಷೆ

ಸಿದ್ಧವಿಷಯ ಹೇತೂತ್ಪ್ರೇಕ್ಷೆಗೆ ಉದಾ :

ಓರ್ವ ನಾಯಕನು ತನ್ನ ನಾಯಿಕೆಗೆ ಹೇಳುತ್ತಿರುವ ಮಾತು 'ಹೇ ಸುಂದರಿ, ಮೃದುಲೌ ತವ ಅಂಘ್ರೀ - ಪಾದೌ, ಭುವಿವಿಕ್ಷೇಪಣಾತ್ - ಸಂಚಾರಾತ್ ರಕ್ತೌ (ಭವತಃ), ಧ್ರುವಂ'. 'ಎಲೌ ಸುಂದರಿ, ನಿನ್ನ ಎರಡು ಪಾದಗಳು ಭೂಮಿಯ ಮೇಲೆ ಸಂಚರಿಸಿದ್ದರಿಂದಲೇ ಕೆಂಪಗಾಗಿವೆ, ಇದು ನಿಶ್ಚಯ' - ಎಂಬ ಈ ಉದಾಹರಣೆಯಲ್ಲಿ, ಕಾಂತೆಯ ಪಾದಗಳು ಸ್ವಾಭಾವಿಕವಾಗಿಯೇ ಕೆಂಬಣ್ಣವುಳ್ಳವಾಗಿದ್ದರೂ, ಭೂಮಿಯ ಮೇಲೆ ವಿಕ್ಷೇಪಣೆಯು ಕಾರಣವಲ್ಲವಾದ್ದರಿಂದ, ಅಹೇತುವನ್ನು ಹೇತುವನ್ನಾಗಿ ಉತ್ಪ್ರೇಕ್ಷಿಸಿರುವುದರಿಂದ (ಸಂಭಾವನೆ ಮಾಡಿರುವುದರಿಂದ) ಹೇತೂತ್ಪ್ರೇಕ್ಷೆಯಾಗುತ್ತದೆ ಮತ್ತು ಭೂವಿಕ್ಷೇಪಣದಿಂದ ಕೆಂಪಗಾಗುವುದು ಸಿದ್ಧವಿಷಯವೂ ಆಗಿರುವುದರಿಂದ ಇದು ಸಿದ್ಧವಿಷಯ ಹೇತೂತ್ಪ್ರೇಕ್ಷಾಲಂಕಾರವಾಗುತ್ತದೆ.

ಅಸಿದ್ಧವಿಷಯ ಹೇತೂತ್ಪ್ರೇಕ್ಷೆಗೆ ಉದಾ : ಓರ್ವ ನಾಯಕನು ತನ್ನ ಕಾಂತೆಗೆ ಹೇಳುವ ಮಾತು- '(ಹೇ ಕಾಂತೇ) ಶಶೀ ತ್ವನ್ಮುಖಾಭೇಚ್ಛಯಾ ( = ತವಮುಖಸ್ಯ ಸೌಂದರ್ಯಲಿಪ್ಸಯಾ, ನೂನಂ ಪದ್ಮೈಃ ವೈರಾಯತೇ'. 'ಎಲೌ ಕಾಂತೆಯೇ, ಈ ಚಂದ್ರನು ನಿನ್ನ ಮುಖದ (ಕಾಂತಿಯನ್ನು) ಸೌಂದರ್ಯವನ್ನು ಹೊಂದುವ ಇಚ್ಛೆಯಿಂದ ಪದ್ಮಗಳೊಡನೆ ವೈರವನ್ನು ಮಾಡಿಕೊಳ್ಳುತ್ತಿದ್ದಾನೆ'. ಎಂಬ ಈ ಉದಾಹರಣೆಯಲ್ಲಿ ಚಂದ್ರ ಪದ್ಮಗಳ ವಿರೋಧವು ಸ್ವಾಭಾವಿಕವೇ ಆಗಿರುವುದರಿಂದ, ಕಾಂತಾಮುಖದ ಕಾಂತಿಯ ಪ್ರಾಪ್ತಿ ಹೇತುವೇನೂ ಅಲ್ಲ. ಆದರೂ, ಅಹೇತುವನ್ನು ಹೇತುವನ್ನಾಗಿ ಸಂಭಾವಿಸಿರುವುದರಿಂದ, ಮತ್ತು ಕಾಂತಾಮುಖಕಾಂತಿಯನ್ನು ಪಡೆಯುವಿಕೆಯೆಂಬುದು ಅಪ್ರಸಿದ್ಧವೂ ಆಗಿರುವುದರಿಂದ, ಇದು ಅಸಿದ್ಧವಿಷಯಹೇತೂತ್ಪ್ರೇಕ್ಷೆಯಾಗುತ್ತದೆ.

೨. ಫಲೋತ್ಪ್ರೇಕ್ಷಾ

ಫಲವಲ್ಲದ್ದನ್ನು ಫಲವನ್ನಾಗಿ ಸಂಭಾವಿಸುವುದು ಫಲೋತ್ಪ್ರೇಕ್ಷೆ.

ಸಿದ್ಧ ವಿಷಯಃ - ಮಧ್ಯಃ ಕಿಂ ಕುಚಯೋರ್ಧೃತ್ಯೈ ಬದ್ಧಃ ಕನಕದಾಮಭಿಃ ।
ಅಸಿದ್ಧ ವಿಷಯಃ-ಪ್ರಾಯೋಽಬ್ಜಂ ತ್ವತ್ಪದೇನೈಕ್ಯಂ ಪ್ರಾಪ್ತುಂ ತೋಯೇ ತಪಸ್ಯತಿ ॥ ೩೦॥

ಸಿದ್ಧ ವಿಷಯ ಫಲೋತ್ಪ್ರೇಕ್ಷೆಗೆ ಉದಾ : ಓರ್ವ ನಾಯಕನು ತನ್ನ ನಾಯಿಕೆಯ ತ್ರಿವಳಿಗಳನ್ನು ಹೀಗೆ ಸಂಭಾವಿಸುತ್ತಿದ್ದಾನೆ. '(ಹೇ ಕಾಂತೇ) (ತವ) ಮಧ್ಯಃ ಕುಚಯೋಃ ಧೃತ್ಯೈ ಕನಕದಾಮಭಿಃ ಬದ್ಧಃಕಿಂ?' 'ಎಲೌ ಕಾಂತೆಯೇ ನಿನ್ನ ಮಧ್ಯಪ್ರದೇಶವು ನಿನ್ನ ಕುಚಗಳನ್ನು ಧರಿಸುವ ಸಲುವಾಗಿಯೇ ಸುವರ್ಣಮಯದಾರಗಳಿಂದ ಕಟ್ಟಲ್ಪಟ್ಟಿರಬೇಕು, ಎಂಬ ಈ ಉದಾಹರಣೆ ಯಲ್ಲಿ, ಮಧ್ಯಭಾಗವು ಸ್ವಾಭಾವಿಕವಾಗಿಯೇ ಕುಚಗಳನ್ನು ಹೊತ್ತಿದೆಯಾದರೂ, ಕನಕದಾಮಬಂಧನರೂಪದಿಂದ ಅಧ್ಯವಸಿತವಾಗಿರುವ ವಲಿತ್ರಯವೇಷ್ಟನದಿಂದಾಗಿಯೇ, ಕುಚಧಾರಣ ರೂಪಫಲವುಂಟಾಗಿದೆ ಎಂದು, ಕನಕದಾಮಬಂಧನಕ್ಕೆ ಕುಚಧಾರಣಫಲವಲ್ಲದೇ ಇದ್ದರೂ ಫಲರೂಪವಾಗಿ ಉತ್ಪ್ರೇಕ್ಷಿಸಿರುವುದರಿಂದ ಇದು ಫಲೋತ್ಪ್ರೇಕ್ಷೆ. ಆದರೆ, ಕುಚಧಾರಣೆಯು ಪ್ರಸಿದ್ಧವೇ ಆಗಿರುವುದರಿಂದ ಇದು ಸಿದ್ಧವಿಷಯಫಲೋತ್ಪ್ರೇಕ್ಷೆ.

ಅಸಿದ್ಧವಿಷಯಫಲೋತ್ಪ್ರೇಕ್ಷೆಗೆ ಉದಾ : ಓರ್ವ ನಾಯಕನು ತನ್ನ ಕಾಂತೆಯನ್ನು ಕುರಿತು ಹೇಳುತ್ತಾನೆ. '(ಹೇ ಕಾಂತೇ) ಅಬ್ಜಂ ತ್ವತ್ಪದೇನ (ಸಹ) ಐಕ್ಯಂ ಪ್ರಾಪ್ತುಂ ಪ್ರಾಯಃ ತೋಯೇ ತಪಸ್ಯತಿ' - 'ಎಲೌ ಕಾಂತೆಯೇ, ಈ ಕಮಲವು ಈ ನಿನ್ನ ಪಾದದಲ್ಲಿ ಐಕ್ಯವನ್ನು ಹೊಂದುವ ಸಲುವಾಗಿಯೋ ಏನೋ, ನೀರಿನಲ್ಲಿ ತಪಸ್ಸು ಮಾಡುತ್ತಿದೆ' - ಎಂಬ ಈ ಉದಾಹರಣೆಯಲ್ಲಿ, ತಪೋರೂಪದಿಂದ ಅಧ್ಯವಸಿತವಾಗಿರುವ ಜಲೋಪಸ್ಥಿತಿಯು ಪದ್ಮಕ್ಕೆ ಸ್ವಾಭಾವಿಕವಾಗಿಯೇ ಆಗಿದೆಯಲ್ಲದೆ, ಕಾಂತೆಯ ಪಾದಗಳ ಸಾಯುಜ್ಯವನ್ನು ಹೊಂದುವ ಫಲವನ್ನು ಬಯಸಿಯೇನೂ ಅಲ್ಲ. ಹೀಗೆ ಕಾಮಿನೀಪಾದಸಾಯುಜ್ಯರೂಪ ಅಫಲವನ್ನು ಫಲರೂಪವಾಗಿ ಉತ್ಪ್ರೇಕ್ಷಿಸಿರುವುದರಿಂದ ಇದು ಫಲೋತ್ಪ್ರೇಕ್ಷೆ ಮತ್ತು ಕಾಮಿನೀಪದಸಾಯುಜ್ಯಪ್ರಾಪ್ತಿಯೆಂಬುದು ಅತ್ಯಂತ ಅಪ್ರಸಿದ್ಧವೇ ಆಗಿರುವುದರಿಂದ ಇದು ಅಸಿದ್ಧವಿಷಯ ಫಲೋತ್ಪ್ರೇಕ್ಷಾಲಂಕಾರ.

ಪರಾ : 'ಇವ' ಶಬ್ದವು ಸಾದೃಶ್ಯವಾಚಕವಾದರೆ ಉಪಮಾಲಂಕಾರ; ಸಂಭಾವನಾರ್ಥಕವಾದಲ್ಲಿ ಉತ್ಪ್ರೇಕ್ಷಾಲಂಕಾರವೆಂದು ತಿಳಿಯಬೇಕು. ಇವ ಶಬ್ದದಂತೆಯೇ 'ಮನ್ಯೇ, ಶಂಕೇ, ಧ್ರುವಂ, ಪ್ರಾಯಃ ನ್ನೂನಂ' ಮೊದಲಾದ ಪದಗಳೂ ಸಹ ಉತ್ಪ್ರೇಕ್ಷಾವ್ಯಂಜಕಗಳಾಗಿರುತ್ತವೆ.

## ೧೩. ಅತಿಶಯೋಕ್ತ್ಯಲಂಕಾರಃ (ತದ್ಭೇದಾಃ)

ರೂಪಕಾಲಂಕಾರದಲ್ಲಿ ಆರೋಪವು ಮುಖ್ಯವಾಗಿರುತ್ತದೆ. ಅಂತೆಯೇ ಈ ಅಲಂಕಾರದಲ್ಲಿ ಅಧ್ಯವಸಾನ ಮುಖ್ಯವಾಗಿರುತ್ತದೆ. 'ವಿಷಯವಿಷಯಿಣೋಃ ಭೇದೇನ ಉಪನ್ಯಾಸಃ ಆರೋಪಃ; ವಿಷಯವಾಚಕಂ ಅನುಕ್ತ್ವಾ ವಿಷಯಿವಾಚಕಪದೇನೈವ ವಿಷಯಸ್ಯ ಸ್ವೀಕಾರಃ ಅಧ್ಯವಸಾಯಃ

(ಅಧ್ಯವಸಾನಂ), ಉಪಮೇಯ-ಉಪಮಾನಗಳನ್ನು ಪ್ರತ್ಯೇಕ ಪ್ರತ್ಯೇಕ ಪದಗಳಿಂದ ಹೇಳುವುದು ಆರೋಪವಾದರೆ (ಮುಖಂ ಚಂದ್ರಃ) ಉಪಮೇಯವಾಚಕಪದವನ್ನೇ ಹೇಳದೆ, ಕೇವಲ ಉಪಮಾನವಾಚಕಪದದ ಮುಖಾಂತರ ಉಪಮೇಯವನ್ನು ಸ್ವೀಕರಿಸುವುದು ಅಧ್ಯವಸಾಯ (ಅಧ್ಯವಸಾನ)ವೆನಿಸುತ್ತದೆ - ಎಂಬ ಈ ಲಕ್ಷಣಾನುಸಾರವಾಗಿ ಈ ಅಲಂಕಾರದಲ್ಲಿ, ಉಪಮೇಯವನ್ನು ಹೇಳದೆ ಉಪಮಾನದಿಂದಲೇ ಉಪಮೇಯವನ್ನು ಸ್ವೀಕರಿಸಿ ಅನ್ವಯ ಮಾಡಿಕೊಳ್ಳುವುದೇ ತತ್ತ್ವ. ಈ ಅಲಂಕಾರವು ಒಟ್ಟು ಎಂಟು ವಿಧವಾಗಿರುತ್ತದೆ. ಅವುಗಳೆಂದರೆ 1. ರೂಪಕಾತಿಶಯೋಕ್ತಿ 2. ಸಾಪಹ್ನವಾತಿಶಯೋಕ್ತಿ 3. ಭೇದಕಾತಿಶಯೋಕ್ತಿ 4. ಸಂಬಂಧಾತಿ ಶಯೋಕ್ತಿ 5. ಅಸಂಬಂಧಾತಿಶಯೋಕ್ತಿ 6. ಅಕ್ರಮಾತಿಶಯೋಕ್ತಿ 7. ಚಪಲಾತಿಶಯೋಕ್ತಿ 8. ಅತ್ಯಂತಾತಿಶಯೋಕ್ತಿ.

ಈ ಎಂಟೂ ಭೇದಗಳ ಲಕ್ಷಣ- ಲಕ್ಷ್ಯಗಳ ಸಮನ್ವಯವನ್ನು ಕ್ರಮವಾಗಿ ಹೀಗೆ ನೋಡಬಹುದು.

೧. ರೂಪಕಾತಿಶಯೋಕ್ತಿ:

ರೂಪಕಾತಿಶಯೋಕ್ತಿ: ಸ್ಯಾನ್ನಿಗೀರ್ಯಾಧ್ಯವಸಾನತಃ ।
ಪಶ್ಯ ನೀಲೋತ್ಪಲದ್ವಂದ್ವಾನ್ನಿಃ ಸರಂತಿ ಶಿತಾಃ ಶರಾಃ ॥ ೩೧॥

'ನಿಗೀರ್ಯ - ವಿಷಯನಿಗರಣಂ ಕೃತ್ವಾ, ಅಧ್ಯವಸಾನತಃ- ವಿಷಯಿಣಃ ರೂಪೇಣ ವಿಷಯಸ್ಯ ನಿಶ್ಚಯಾತ್, ರೂಪಕಾತಿಶಯೋಕ್ತಿ: ಸ್ಯಾತ್' 'ಅಧ್ಯವಸಾನದ ಮುಖಾಂತರ ವಿಷಯವನ್ನು ನಿಗರಣಮಾಡಿ (ಮರೆಮಾಚಿ) ವಿಷಯಿರೂಪದಿಂದಲೇ ವಿಷಯವನ್ನು ನಿಶ್ಚಯಿಸುವುದಾದರೆ ಅದು ರೂಪಕಾತಿಶಯೋಕ್ತಿ ಎಂಬ ಅಲಂಕಾರವಾಗುತ್ತದೆ.

ಉದಾಹರಣೆ : '(ಹೇ ಸಖಿ) ನೀಲೋತ್ಪಲದ್ವಂದ್ವಾತ್ ಶಿತಾಃ - ತೀಕ್ಷ್ಣಾ: ಶರಾಃ ನಿಸರಂತಿ, ಪಶ್ಯ' 'ಎಲೌ ಸಖಿಯೇ, ಎರಡು ನೈದಿಲೆಗಳ ಮುಖಾಂತರ ತೀಕ್ಷ್ಣವಾದ ಬಾಣಗಳು ಹೊರಬರುತ್ತಿವೆ, ನೋಡು' . ಇಲ್ಲಿ 'ಕಾಂತೆಯ ಲೋಚನಯುಗಲದಿಂದ, ಕಟಾಕ್ಷಗಳು ಹೊರ ಬರುತ್ತಿವೆ' ಎಂದು ಹೇಳುವ ಬದಲು, ಲೋಚನ-ಕಟಾಕ್ಷ ಪದಗಳನ್ನು ಹೇಳದೆ, ಇವುಗಳ ಉಪಮಾನವಾಚಕಗಳಾದ ನೀಲೋತ್ಪಲ ಶರ ಶಬ್ದಗಳನ್ನು ಹೇಳುವುದರ ಮುಖಾಂತರ ಅಧ್ಯವಸಾನವಿರುವುದರಿಂದ ಇದು ರೂಪಕಾತಿಶಯೋಕ್ತ್ಯಲಂಕಾರ.

೨. ಸಾಪಹ್ನವಾತಿಶಯೋಕ್ತಿ:

ಯದ್ಯಪಹ್ನುತಿಗರ್ಭತ್ವಂ ಸೈವ ಸಾಪಹ್ನವಾ ಮತಾ ।
ತ್ವತ್ಸೂಕ್ತಿಷು ಸುಧಾ ರಾಜನ್ ಭ್ರಾಂತಾಃ ಪಶ್ಯಂತಿ ತಾಂ ವಿಧೌ ॥ ೩೨॥

'ಅಪಹ್ನುತಿಗರ್ಭತ್ವಂ ಯದಿ ಸಾ ಏವ ಸಾಪಹ್ನವಾ (ಇತಿ ಕವೀನಾಂ) ಮತಾ' 'ರೂಪಕಾತಿ ಶಯೋಕ್ತ್ಯಲಂಕಾರವೇ ಅಪಹ್ನವದಿಂದ ಕೂಡಿದ್ದಾದರೆ, ಆ ರೂಪಕಾತಿಶಯೋಕ್ತಿಯೇ ಸಾಪಹ್ನವ ರೂಪಕಾತಿಶಯೋಕ್ತ್ಯಲಂಕಾರವೆನಿಸುತ್ತದೆ.

ಉದಾಹರಣೆ : 'ಹೇ ರಾಜನ್, ತ್ವತ್ಸೂಕ್ತಿಷು (ಏವ) ಸುಧಾ (ಸ್ಥಿತಾ) | (ಕಿಂತು) ಭ್ರಾಂತಾಃ- ಜನಾಃ ವಿಧೌ ತಾಂ ಪಶ್ಯಂತಿ'. 'ಎಲೈ ರಾಜನೇ, ನಿನ್ನ ಮೃದುವಾಕ್ಯಗಳಲ್ಲಿ ಮಾತ್ರವೇ ಅಮೃತವಿರುತ್ತದೆ. ಆದರೆ, ಚಂದ್ರನಲ್ಲಿಯೇ ಅಮೃತವಿದೆಯೆಂದು ಭ್ರಮೆಯನ್ನು ಹೊಂದಿದ ಜನರು, ಆ ಸುಧೆಯನ್ನು ಚಂದ್ರನಲ್ಲಿ ಕಾಣುತ್ತಾರೆ'. ಇಲ್ಲಿ 'ನಿನ್ನ ಮಧುರ ವಚನಗಳಲ್ಲಿ ಮಾತ್ರವೇ ಅಮೃತವಿದೆ. ಬೇರೆಡೆ ಇಲ್ಲ' ಎಂದು ಹೇಳಿರುವುದರಿಂದ ಚಂದ್ರನಲ್ಲಿರುವ ಸುಧೆಯು ಸುಧೆಯಲ್ಲ ಎಂದು ಅಪಹ್ನವವನ್ನು ಹೇಳಿದಂತಾಯ್ತು ಮತ್ತು ಮಾಧುರ್ಯಪದವನ್ನು ಹೇಳದೆ, ಉಪಮಾನವಾಚಿ ಸುಧಾಪದದಿಂದಲೇ ಉಪಮೇಯ ಮಾಧುರ್ಯಪದವನ್ನು ಅಧ್ಯವಸಾನರೂಪವಾಗಿ ಹೇಳಿರುವುದರಿಂದ ಇದು ಸಾಪಹ್ನವಾತಿಶಯೋಕ್ತಿ ಎಂಬ ಅಲಂಕಾರ.

**೩. ಭೇದಕಾತಿಶಯೋಕ್ತಿ:**

> ಭೇದಕಾತಿಶಯೋಕ್ತಿ: ಸ್ಯಾತ್ತಸ್ಯೈವಾನ್ಯತ್ವವರ್ಣನಂ |
> ಅನ್ಯದೇವಾಸ್ಯ ಗಾಂಭೀರ್ಯಮನ್ಯದ್ಧೈರ್ಯಂ ಮಹೀಪತೇಃ || ೩೩ ||

**ತಸ್ಯೈವ -ಲೋಕ ಸಿದ್ಧಸ್ಯೈವ ಅನ್ಯತ್ವವರ್ಣನಂ (ಇತಿ ಯತ್ ಸಾ) ಭೇದಕಾತಿಶಯೋಕ್ತಿ:** 'ಲೋಕಪ್ರಸಿದ್ಧವಾದುದನ್ನೇ ಲೋಕವಿಲಕ್ಷಣವಾದುದೆಂದು ವರ್ಣಿಸಿದ್ದಾದರೆ ಅದು ಭೇದ ಕಾತಿಶಯೋಕ್ತ್ಯಲಂಕಾರ'.

ಉದಾಹರಣೆ : 'ಅಸ್ಯ ಮಹಿಪತೇಃ ಗಾಂಭೀರ್ಯಂ ಅನ್ಯದೇವ, (ತಥಾ) ಧೈರ್ಯಂ (ಅಪಿ ಅನ್ಯದೇವ)' 'ಈ ರಾಜನ ಗಾಂಭೀರ್ಯವೂ ಮತ್ತು ಧೈರ್ಯವೂ ಲೋಕವಿಲಕ್ಷಣವಾಗಿವೆ' - ಎಂಬ ಈ ಉದಾಹರಣೆ ಯಲ್ಲಿ, ಪ್ರಕೃತ ರಾಜನ ಗಾಂಭೀರ್ಯ, ಧೈರ್ಯಗಳು ಲೋಕಸಾಧಾರಣಗಳೇ ಆಗಿದ್ದರೂ, ಲೋಕಭಿನ್ನತ್ವರೂಪದಿಂದ ವರ್ಣಿತವಾಗಿರುವುದರಿಂದ ಇದು ಭೇದಕಾತಿಶಯೋಕ್ತ್ಯಲಂಕಾರ.

**೪. ಸಂಬಂಧಾತಿಶಯೋಕ್ತಿ:**

> ಸಂಬಂಧಾತಿಶಯೋಕ್ತಿ: ಸ್ಯಾದಯೋಗೇ ಯೋಗಕಲ್ಪನಂ |
> ಸೌಧಾಗ್ರಾಣಿ ಪುರಸ್ಯಾಸ್ಯ ಸ್ಪೃಶಂತಿ ವಿಧುಮಂಡಲಂ || ೩೪ ||

ಅಯೋಗೇ - ಅಸಂಬಂಧೇ ಯೋಗಕಲ್ಪನಂ - ಸಂಬಂಧವರ್ಣನಂ (ಇತಿ ಯತ್ ಸಾ) **ಸಂಬಂಧಾತಿಶಯೋಕ್ತಿ: ಸ್ಯಾತ್** -'ಸಂಬಂಧವಿಲ್ಲದಿದ್ದರೂ, ಸಂಬಂಧವನ್ನು ಕಲ್ಪಿಸಿ ವರ್ಣಿಸುವುದು ಸಂಬಂಧಾತಿಕಾಶಯೋಕ್ತಿ' ಎಂಬ ಅಲಂಕಾರ.

ಉದಾಹರಣೆ : 'ಅಸ್ಯ ಪುರಸ್ಯ ಸೌಧಾಗ್ರಾಣಿ ವಿಧುಮಂಡಲಂ ಸ್ಪೃಶಂತಿ' 'ಈ ನಗರದ ರಾಜಗೃಹಶಿಖರಗಳು ಚಂದ್ರಮಂಡಲವನ್ನು ಮುಟ್ಟುತ್ತಿವೆ. (ಅಂದರೆ ಅಷ್ಟು ಎತ್ತರವಾಗಿವೆ) - ಈ ಉದಾಹರಣೆಯಲ್ಲಿ ಸೌಧಾಗ್ರಗಳಿಗೆ ಚಂದ್ರಮಂಡಲಸ್ಪರ್ಶದ ಸಂಬಂಧವಿಲ್ಲದಿದ್ದರೂ, ಅದರ ಸಂಬಂಧವನ್ನು ವರ್ಣಿಸಿರುವುದರಿಂದ ಇದು ಸಂಬಂಧಾತಿಶಯೋಕ್ತ್ಯಲಂಕಾರ.

೫. ಅಸಂಬಂಧಾತಿಶಯೋಕ್ತಿ:

ಯೋಗೇಽಪ್ಯಯೋಗೋಽಸಂಬಂಧಾತಿಶಯೋಕ್ತಿರಿತೀಷ್ಯತೇ ।
ತ್ವಯಿ ದಾತರಿ ರಾಜೇಂದ್ರ ಸ್ವರ್ದ್ರುಮಾನ್ನಾದ್ರಿಯಾಮಹೇ ॥ ೩೫ ॥

**'ಯೋಗೇ ಅಪಿ = ಸಂಬಂಧೇ ಸತ್ಯಪಿ ಅಯೋಗಃ = ಅಸಂಬಂಧವರ್ಣನಂ (ಇತಿ ಯತ್ ಸಾ) ಅಸಂಬಂಧಾತಿಶಯೋಕ್ತಿ: ಇತಿ ಇಷ್ಯತೇ'.** ಸಂಬಂಧವಿದ್ದರೂ ಕೂಡ, ಸಂಬಂಧವಿಲ್ಲವೆಂದು ವರ್ಣಿಸಿದ್ದಾದರೆ, ಅದು ಅಸಂಬಂಧಾತಿಶಯೋಕ್ತ್ಯಲಂಕಾರ.

ಉದಾಹರಣೆ : 'ಹೇ ರಾಜೇಂದ್ರ ! ತ್ವಯಿ ದಾತರಿ (ಸತಿ) (ವಯಂ) ಸ್ವರ್ದ್ರುಮಾನ್ ನ ಆದ್ರಿಯಾಮಹೇ = ಯಾಚಾಮಹೇ' 'ಎಲೈ ಸಕಲಭೂವಲ್ಲಭನಾದ ರಾಮಚಂದ್ರನೇ, ನೀನೇ ಅತ್ಯಂತ ದಾನಶೀಲನಾಗಿರುವಾಗ, ನಾವು ಕಲ್ಪವೃಕ್ಷವನ್ನು ಬೇಡುವುದಿಲ್ಲ' ಎಂಬ ಮಾತಿನಲ್ಲಿ, ಕಲ್ಪವೃಕ್ಷಗಳೊಡನೆ ಆದರದ ಸಂಬಂಧವಿದ್ದರೂ, ಅಸಂಬಂಧವನ್ನು ವರ್ಣಿಸಿರುವುದರಿಂದ, ಇದು ಸಂಬಂಧಾತಿಶಯೋಕ್ತ್ಯಲಂಕಾರ. ಸಂಬಂಧಕಲ್ಪನೆ ಸಂಬಂಧಾತಿಶಯೋಕ್ತಿಯಾದರೆ, ಅಸಂಬಂಧ ವರ್ಣನೆ ಅಸಂಬಂಧಾತಿಶಯೋಕ್ತಿಯಾಗುತ್ತದೆ.

೬. ಅಕ್ರಮಾತಿಶಯೋಕ್ತಿ:

ಅಕ್ರಮಾತಿಶಯೋಕ್ತಿ: ಸ್ಯಾತ್ ಸಹತ್ವೇ ಹೇತುಕಾರ್ಯಯೋಃ ।
ಆಲಿಂಗಂತಿ ಸಮಂ ದೇವ ಜ್ಯಾಂ ಶರಾಶ್ಚ ಪರಾಶ್ಚ ತೇ ॥ ೩೬ ॥

**'ಹೇತುಕಾರ್ಯಯೋಃ ಸಹತ್ವೇ (ವರ್ಣಿತೇ ಸತಿ), ಅಕ್ರಮಾತಿಶಯೋಕ್ತಿ: ಸ್ಯಾತ್''.** ಮೊದಲು ಕಾರಣ, ಆ ಬಳಿಕ ಕಾರ್ಯ - ಇದು ಲೋಕದ ಮರ್ಯಾದೆ. ಇದನ್ನು ಉಲ್ಲಂಘಿಸಿ, ಕಾರ್ಯಕಾರಣಗಳೆರಡೂ ಏಕಕಾಲದಲ್ಲಿಯೇ ಸಂಭವಿಸಿದಂತೆ ವರ್ಣಿತವಾದರೆ ಅದು ಅಕ್ರಮಾತಿಶಯೋಕ್ತ್ಯಲಂಕಾರ

**ಉದಾಹರಣೆ : 'ಹೇ ದೇವ = ಹೇ ರಾಮಚಂದ್ರ, ತೇ ಶರಾಃ ಚ, ಪರಾಃ ಚ ಸಮಂ (ಏವ) ಜ್ಯಾಂ ಆಲಿಂಗಂತಿ'** ಎಲೈರಾಮಚಂದ್ರನೇ, ನಿನ್ನ ಶರಗಳು ಮತ್ತು ಶತ್ರುಗಳು ಏಕಕಾಲದಲ್ಲಿಯೇ ನಿನ್ನ ಧನುಸ್ಸಿನ ಸಿಂಜಿನಿಯನ್ನು ಆಲಿಂಗಿಸುತ್ತಾರೆ'. ಅಂದರೆ ಬಾಣಗಳು ಸಿಂಜಿನಿಯನ್ನೂ, ಶತ್ರುಗಳು ಭೂಮಿಯನ್ನು ಸಮಕಾಲದಲ್ಲಿ ಆಲಿಂಗಿಸುವರು. ಈ ಉದಾಹರಣೆಯಲ್ಲಿ ಮೊದಲು ಶರಸಂಧಾನ ರೂಪ ಕಾರಣವಾಗಬೇಕು; ಬಳಿಕ ಶತ್ರುಸಂಹಾರರೂಪ ಕಾರ್ಯವಾಗಬೇಕು. ಆದರೆ ಪೌರ್ವಾಪರ್ಯಕ್ರಮವನ್ನು ಬಿಟ್ಟು ಏಕಕಾಲದಲ್ಲಿಯೇ ಕಾರ್ಯಕಾರಣಗಳ ಆಗುವಿಕೆಯ ವರ್ಣನೆ ಇರುವುದರಿಂದ ಇದು ಅಕ್ರಮಾತಿಶಯೋಕ್ತ್ಯಲಂಕಾರ.

೭. ಚಪಲಾತಿಶಯೋಕ್ತಿ:

ಚಪಲಾತಿಶಯೋಕ್ತಿ: ಸ್ಯಾತ್ ಕಾರ್ಯೇ ಹೇತುಪ್ರಸಕ್ತಿಜೇ ।
ಯಾಸ್ಯಾಮೀತ್ಯುದಿತೇ ತನ್ವ್ಯಾ ವಲಯೋಽಭವದೂರ್ಮಿಕಾ ॥ ೩೭ ॥

'ಕಾರ್ಯೇ ಹೇತುಪ್ರಸಕ್ತಜೇ (ಸತಿ) = ಹೇತುಪ್ರಸಕ್ತಮಾತ್ರೇಣೈವ ಕಾರ್ಯೇ ಜಾತೇ ಸತಿ, ಚಪಲಾತಿಶಯೋಕ್ತಿಃ ಸ್ಯಾತ್' ಕಾರಣದ ಪ್ರಸಕ್ತಮಾತ್ರದಿಂದಲೇ ಕಾರ್ಯವು ಸಂಭವಿಸಿದ್ದಾದರೆ ಅದು ಚಪಲಾತಿಶಯೋಕ್ತಿ'.

**ಉದಾಹರಣೆ :** 'ಯಾಸ್ಯಾಮಿ ಇತಿ (ನಾಯಕೇನ) ಉದಿತೇ (ಸತಿ) ತನ್ವ್ಯಾಃ ಊರ್ಮಿಕಾ = ಅಂಗುಲೀಯಕಂ ವಲಯಃ = ಕಂಕಣಂ ಅಭವತ್' ನಾಯಕನು ನಾನು ಹೋಗುತ್ತೇನೆ, (ಇನ್ನೂ ಹೊರಟಿಲ್ಲ, ಹೊರಡುತ್ತಲೂ ಇಲ್ಲ, ಇನ್ನೂ ಸ್ವಲ್ಪ ಸಮಯದ ಬಳಿಕ ಹೋಗಲಿದ್ದಾನೆ) ಎಂದು ಹೇಳಿದ ಮಾತ್ರದಿಂದಲೇ ನಾಯಿಕೆಯ ಬೆರಳಿನಲ್ಲಿದ್ದ ಉಂಗುರವು ಕೈಯ ಬಳೆಯಂತಾಯ್ತು' ಅಷ್ಟೊಂದು ಕೃಶಳಾದಳು ಎಂದು ತಾತ್ಪರ್ಯ. ಪತಿಯ ಗಮನದ ಸುದ್ದಿ ಕಿವಿಗೆ ಬೀಳುತ್ತಿದ್ದಂತೆಯೇ ಮುಂದಿನ ವಿರಹವನ್ನು ನೆನೆಸಿಕೊಂಡು ಆ ಕೂಡಲೇ ಅವಳ ಕೈ ಉಂಗುರದ ಬೆರಳಿಗಿಂತ ಸಣ್ಣಗಾಗುವಂತೆ ಕೃಶಳಾದಳು ಎಂಬ ಈ ಉದಾಹರಣೆಯಲ್ಲಿ, ನಾಯಕನ ಪ್ರಯಾಣರೂಪಕಾರಣದ ಪ್ರಸಂಗಮಾತ್ರದಿಂದಲೇ ಕಾರ್ಶ್ಯರೂಪಕಾರ್ಯದ ವರ್ಣನೆ ಇರುವುದರಿಂದ ಇದು ಚಪಲಾತಿಶಯೋಕ್ತ್ಯಲಂಕಾರ.

**೮. ಅತ್ಯಂತಾತಿಶಯೋಕ್ತಿಃ**

> **ಅತ್ಯಂತಾತಿಶಯೋಕ್ತಿಃ ಸ್ಯಾತ್ ಪೌರ್ವಾಪರ್ಯವ್ಯತಿಕ್ರಮೇ ।**
> **ಅಗ್ರೇ ಮಾನೋ ಗತಃ ಪಶ್ಚಾದನುನೀತಾ ಪ್ರಿಯೇಣ ಸಾ ॥ ೩೮ ॥**

(ತಯೋಃ = ಕಾರಣಕಾರ್ಯಯೋಃ) ಪೌರ್ವಾಪರ್ಯವ್ಯತಿಕ್ರಮೇ (ಸತಿ) = ಯತ್ ಪೌರ್ವಾಪರ್ಯಂ ತಸ್ಯ ವ್ಯತಿಕ್ರಮೇ ಸತಿ, (ಸಾ) ಅತ್ಯಂತಾತಿಶಯೋಕ್ತಿಃ 'ಕಾರಣ ಕಾರ್ಯಗಳ ಪೂರ್ವ ಉತ್ತರ' ಭಾವವು ಅಂದರೆ ಮೊದಲು ಕಾರಣ, ಆ ಬಳಿಕ ಕಾರ್ಯ ಎಂಬ ಈ ಕ್ರಮವು ವ್ಯತಿಕ್ರಮವನ್ನು ಅಂದರೆ ವ್ಯತ್ಯಯವನ್ನು ಹೊಂದಿದ್ದಾದರೆ, ಅಂದರೆ ಮೊದಲು ಕಾರ್ಯ ಬಳಿಕ ಕಾರಣ ಈ ರೀತಿಯ ವರ್ಣನೆ ಇದ್ದುದಾದರೆ, ಅದು ಅತ್ಯಂತಾತಿಶಯೋಕ್ತ್ಯಲಂಕಾರ.

ಉದಾಹರಣೆ : 'ಮಾನಃ = ಪ್ರಣಯಕೋಪಃ ಅಗ್ರೇ (ಏವ) = ಅನುನಯಾತ್ ಪ್ರಾಗೇವ, ಗತಃ, ಪಶ್ಚಾತ್ ಸಾ ಪ್ರಿಯೇಣ ಅನುನೀತಾ 'ನಾಯಕನ ವಿಷಯದಲ್ಲಿ ನಾಯಿಕೆಗೆ ಇದ್ದ ಪ್ರಣಯ ಕೋಪವು ಅನುನಯಮಾಡುವುದಕ್ಕೆ ಮುಂಚೆಯೇ ಹೊರಟುಹೋಯಿತು, ಅನಂತರ ನಾಯಕನು ನಾಯಿಕೆಯನ್ನು ಸಮಾಧಾನಪಡಿಸಿದನು' ಎಂಬ ಈ ಉದಾಹರಣೆಯಲ್ಲಿ ಮೊದಲು ಅನುನಯರೂಪ ಕಾರಣವಾಗಬೇಕಾಗಿತ್ತು ಮತ್ತು ಇದರ ಬಳಿಕವೇ ಪ್ರಣಯಕೋಪ ಹೋಗಬೇಕಾಗಿತ್ತು. ಆದರೆ, ಇಲ್ಲಿ ಮಾನಗಮನರೂಪಕಾರ್ಯದ ಬಳಿಕ ಅನುನಯರೂಪಕಾರಣವಾಯ್ತೆಂದು ವರ್ಣಿಸಿರುವುದರಿಂದ, ಕಾರಣಕಾರ್ಯಗಳ ವ್ಯತಿಕ್ರಮವುಂಟಾಗಿ, ಇದು ಅತ್ಯಂತಾತಿಶಯೋಕ್ತ್ಯಲಂಕಾರ.

## ೧೪. ತುಲ್ಯಯೋಗಿತಾಲಂಕಾರಃ (ತದ್ಭೇದಾಃ)

ಕೇವಲ ವರ್ಣ್ಯಗಳಿಗೆ ಅಥವಾ ಕೇವಲ ಅವರ್ಣ್ಯಗಳಿಗೆ ಏಕ - ಧರ್ಮಾನ್ವಯವನ್ನು ಹೇಳುವುದು ತುಲ್ಯಯೋಗಿತಾಲಂಕಾರ. ಕೇವಲ ಪ್ರಕೃತಗಳಲ್ಲಿ ಏಕಧರ್ಮಾನ್ವಯ ವರ್ಣಿತವಾದರೆ ಕೇವಲ ಪ್ರಕೃತಗೋಚರತುಲ್ಯಯೋಗಿತಾಲಂಕಾರವಾಗುತ್ತದೆ. ಹಾಗೆಯೇ ಕೇವಲ ಅಪ್ರಕೃತಗಳಲ್ಲಿ ಏಕಧರ್ಮಾನ್ವಯ ವರ್ಣಿತವಾದರೆ ಅದು ಕೇವಲ ಅಪ್ರಕೃತಗೋಚರತುಲ್ಯ ಯೋಗಿತಾಲಂಕಾರವಾಗುತ್ತದೆ. ಈ ಎರಡು ಭೇದಗಳಲ್ಲದೆ ಹಿತಾಹಿತವೃತ್ತಿತೌಲ್ಯಯೋಗಿತಾ ಮತ್ತು ಉತ್ಕೃಷ್ಟಗುಣಸಮೀಕರಣೋಕ್ತಿತೌಲ್ಯರೂಪತುಲ್ಯಯೋಗಿತಾ ಎಂದು ಮತ್ತೆ ಎರಡು ಭೇದಗಳಿರುತ್ತವೆ. ಇವುಗಳ ಲಕ್ಷಣಲಕ್ಷ್ಯಸಮನ್ವಯವೆಂದರೆ.

ವರ್ಣ್ಯಾನಾಮಿತರೇಷಾಂ ವಾ ಧರ್ಮೈಕ್ಯಂ ತುಲ್ಯಯೋಗಿತಾ ।
ಸಂಕುಚಂತಿ ಸರೋಜಾನಿ ಸ್ವೈರಿಣೀವದನಾನಿ ಚ ॥ ೩೯ ॥

'ವರ್ಣ್ಯಾನಾಂ, ಇತರೇಷಾಂ=ಅವರ್ಣ್ಯಾನಾಂ ವಾ ಧರ್ಮೈಕ್ಯಂ ತುಲ್ಯಯೋಗಿತಾ' - ಕೇವಲ ವರ್ಣ್ಯಗಳಿಗೆ ಅಥವಾ ಕೇವಲ ಅವರ್ಣ್ಯಗಳಿಗೆ ಏಕಧರ್ಮಾನ್ವವರ್ಣನೆಯು ತುಲ್ಯಯೋಗಿತಾಲಂಕಾರ

ಉದಾಹರಣೆ : ಇದು ಕೇವಲ ಪ್ರಕೃತಗೋಚರತುಲ್ಯಯೋಗಿತಾಕ್ಕೆ - '(ಚಂದ್ರೋದಯೇ) ಸರೋಜಾನಿ ಸಂಕುಚಂತಿ, ಸ್ವೈರಿಣೀವದನಾನಿ ಚ ಸಂಕುಚಂತಿ'. 'ಚಂದ್ರೋದಯವಾಗಲು ಕಮಲಗಳೂ ಸಂಕೋಚಗೊಳ್ಳುತ್ತವೆ ಮತ್ತು ಜಾರಸ್ತ್ರೀಯರ ಮುಖಗಳೂ ಸಹ ಬಾಡುತ್ತವೆ (ಕಳೆಗುಂದುತ್ತವೆ). (ಏಕೆಂದರೆ ಸ್ವೇಚ್ಛೆಯಾಗಿ ಕಾಮುಕನ ಸ್ಥಾನಕ್ಕೆ ಹೋಗಲು ಬೆಳದಿಂಗಳು ವಿರೋಧಿಯಷ್ಟೆ!) ಇಲ್ಲಿ ಚಂದ್ರೋದಯದ ವರ್ಣನೆ ಪ್ರಸ್ತುತವಾಗಿರುವುದರಿಂದ, ಸರೋಜಗಳ ಸಂಕೋಚ ಮತ್ತು ಸ್ವೈರಿಣಿಯರ ಮುಖಸಂಕೋಚ ಈ ಎರಡೂ ಪ್ರಕೃತವೇ ಆಗಿರುತ್ತವೆ. ಈ ಎರಡೂ ಪ್ರಕೃತಗಳಿಗೆ ಸಂಕೋಚರೂಪಏಕಧರ್ಮಾನ್ವಯವನ್ನು ಹೇಳಿರುವುದರಿಂದ ಇದು ಪ್ರಕೃತಗೋಚರತುಲ್ಯಯೋಗಿತಾ.

ಕೇವಲ ಅಪ್ರಕೃತ ಗೋಚರ ತುಲ್ಯಯೋಗಿತಾಕ್ಕೆ ಉದಾಹರಣೆ :

ತ್ವದಂಗಮಾರ್ದವೇ ದೃಷ್ಟೇ ಕಸ್ಯ ಚಿತ್ತೇ ನ ಭಾಸತೇ ।
ಮಾಲತೀಶಶಭೃಲ್ಲೇಖಾಕದಲೀನಾಂ ಕಠೋರತಾ ॥ ೪೦॥

'(ಹೇ ಪ್ರಿಯೇ) ತ್ವದಂಗಮಾರ್ದವೇ ದೃಷ್ಟೇ (ಸತಿ) ಕಸ್ಯ(ವಾ) ಚಿತ್ತೇ ಮಾಲತೀ ಶಶಭೃಲ್ಲೇಖಾಕದಲೀನಾಂ ಕಠೋರತಾ ನ ಭಾಸತೇ? (ಅವಶ್ಯಂ ಭಾಸತೇ ಏವ)'. 'ಎಲೈ ಕಾಂತಯೇ, ನಿನ್ನ ಶರೀರದ ಸೌಕುಮಾರ್ಯವನ್ನು ನೋಡಿದ್ದೇ 'ಆದರೆ, ಎಲ್ಲರ ಮನಸ್ಸಿನಲ್ಲಿಯೂ, ಮಾಲತೀ ಕುಸುಮ, ಚಂದ್ರಲೇಖೆ, ಕದಲಿಗಳ ಕಾಠಿಣ್ಯವು ಗೋಚರಿಸುತ್ತದೆ' - ಎಂಬ ಈ ಉದಾಹರಣೆಯಲ್ಲಿ ಉಪಮಾನಗಳಾಗಿರುವ ಅಂದರೆ ಅಪ್ರಕೃತಗಳಾಗಿರುವ ಮಾಲತೀ, ಚಂದ್ರಲೇಖೆ, ಕದಲಿಗಳಲ್ಲಿ ಕಾಠಿಣ್ಯವನ್ನು ಹೇಳುವುದರ ಮುಖಾಂತರ ತಿರಸ್ಕಾರರೂಪಏಕಧರ್ಮಾನ್ವಯ (ಏಕ ಕ್ರಿಯಾನ್ವಯ) ವಿರುವುದರಿಂದ ಇದು ಕೇವಲ ಅಪ್ರಕೃತಗೋಚರತುಲ್ಯಯೋಗಿತಾಲಂಕಾರ .

೧. ಹಿತಾಹಿತವೃತ್ತಿತೌಲ್ಯರೂಪತುಲ್ಯಯೋಗಿತಾ

ಹಿತಾಹಿತೇ ವೃತ್ತಿತೌಲ್ಯಮಪರಾ ತುಲ್ಯಯೋಗಿತಾ ।
ಪ್ರದೀಯತೇ ಪರಾಭೂತಿರ್ಮಿತ್ರಶಾತ್ರವಯೋಸ್ತ್ವಯಾ ॥ ೪೧ ॥

**'ಹಿತಾಹಿತೇ - ಮಿತ್ರೇ ಅಮಿತ್ರೇ ಚ ವಿಷಯೇ, ವೃತ್ತಿ ತೌಲ್ಯಂ = ಏಕವಿಧಃ ವ್ಯಾಪಾರಃ, ಅಪರಾ ತುಲ್ಯಯೋಗಿತಾ (ಭವತಿ)'.** ಮಿತ್ರ ಮತ್ತು ಶತ್ರುಗಳ ವಿಷಯದಲ್ಲಿ ಸಮಾನ ವ್ಯಾಪಾರತೆ ವರ್ಣಿತವಾದರೆ ಅದೂ ಸಹ ಬೇರೊಂದು ತುಲ್ಯಯೋಗಿತಾಲಂಕಾರ .

**ಉದಾಹರಣೆ :** ಓರ್ವರಾಜನ ಗುಣಾತಿಶಯವರ್ಣನೆ - '(ಹೇ ರಾಜನ್) ತ್ವಯಾ ಮಿತ್ರ ಶಾತ್ರವಯೋಃ (ವಿಷಯೇ) ಪರಾಭೂತಿಃ 1. ಉತ್ಕೃಷ್ಟಂ ಐಶ್ವರ್ಯಂ-ಮಿತ್ರ ಪಕ್ಷೇ, 2. ಪರಾಭವ : (ಶತ್ರುಪಕ್ಷೇ) ಪ್ರದೀಯತೇ'. 'ಎಲೈ ರಾಜನೇ, ನೀನು ಮಿತ್ರರ ವಿಷಯದಲ್ಲಿ ಪರಾಭೂತಿಯನ್ನೂ ಅಂದರೆ ಉತ್ಕೃಷ್ಟ ಐಶ್ವರ್ಯವನ್ನೂ ( ಪರಾ+ಭೂತಿಃ), ಶತ್ರುಗಳ ವಿಷಯದಲ್ಲಿ ಪರಾಭೂತಿಯನ್ನೂ ಅಂದರೆ ಸೋಲನ್ನೂ ಉಂಟುಮಾಡುತ್ತಿರುವೆ' - ಎಂಬ ಈ ಉದಾಹರಣೆಯಲ್ಲಿ ಹಿತರ ಹಾಗೂ ಅಹಿತರ ವಿಷಯದಲ್ಲಿ 'ಪರಾಭೂತಿ' ಎಂಬ ಸಮಾನವ್ಯಾಪಾರತ್ವದ ವರ್ಣನೆ ಇರುವುದರಿಂದ ಇದು ಹಿತಾಹಿತವೃತ್ತಿತೌಲ್ಯರೂಪತುಲ್ಯಯೋಗಿತಾಲಂಕಾರ. (ಪರಾ+ಭೂತಿ-ಸಭಂಗ ಮಿತ್ರಪಕ್ಷದಲ್ಲಿ, ಪರಾಭೂತಿ ಅಭಂಗ ಶುತ್ರುಪಕ್ಷದಲ್ಲಿ)

೨. ಉತ್ಕೃಷ್ಟಗುಣಸಮೀಕರಣರೂಪತುಲ್ಯಯೋಗಿತಾ

ಗುಣೋತ್ಕೃಷ್ಟೈಃ ಸಮೀಕೃತ್ಯವಚೋऽನ್ಯಾ ತುಲ್ಯಯೋಗಿತಾ ।
ಲೋಕಪಾಲೋ ಯಮಃ ಪಾಶೀ ಶ್ರೀದಶ್ಶಕ್ರೋ ಭವಾನಪಿ ॥ ೪೨ ॥

**'ಗುಣೋತ್ಕೃಷ್ಟೈಃ =ಶೌರ್ಯ-ಔದಾರ್ಯಾದಿ- ಗುಣಗರಿಷ್ಠೈಃ, ಸಮೀಕೃತ್ಯ = ಸಮಾನೀಕೃತ್ಯ ವಚಃ (ಅಪಿ) ಅಪರಾ ತುಲ್ಯಯೋಗಿತಾ (ಭವತಿ)'.** 'ವರ್ಣನೀಯ ರಾಜಾದಿಗಳಲ್ಲಿ, ಉತ್ಕೃಷ್ಟ ಗುಣವುಳ್ಳ ಇಂದ್ರಾದಿಗಳೊಂದಿಗೆ ಧರ್ಮಗಳ ಸಮೀಕರಣಗೊಳಿಸಿ ವರ್ಣಿಸುವುದೂ ಸಹ ಒಂದು ತುಲ್ಯಯೋಗಿತಾಲಂಕಾರವಾಗುತ್ತದೆ'.

**ಉದಾಹರಣೆ : '(ಹೇ ರಾಜನ್), ಯಮಃ, ಪಾಶೀ, ಶ್ರೀದಃ, ಶಕ್ರಃ, ಭವಾನ್ ಅಪಿ(ಚ) ಲೋಕಪಾಲಃ** = 'ಯಮನೂ ಹೇಗೆ ಲೋಕಪಾಲಕನೋ, ಪಾಶೀ = ವರುಣನೂ ಹೇಗೆ ಲೋಕಪಾಲಕನೋ, ಶ್ರೀದಃ = ಕುಬೇರನೂ, ಶಕ್ರಃ = ಇಂದ್ರನೂ ಹೇಗೆ ಲೋಕಪಾಲಕನೋ, ಹಾಗೆಯೇ, ನೀನೂ ಸಹ ಲೋಕಪಾಲಕ'. ಇಲ್ಲಿ - ಲೋಕಪಾಲತ್ವಧರ್ಮ ಯಮಾದಿ ಉಪಮಾನ ವಸ್ತುಗಳಲ್ಲಿಯೂ ಇರುವಂತೆ, ಪ್ರಕೃತ ರಾಜನಲ್ಲಿಯೂ ಇರುವುದರಿಂದ, ಇಂದ್ರಾದಿಗಳಲ್ಲಿರುವ ಲೋಕಪಾಲತ್ವವನ್ನು ಪ್ರಕೃತ ರಾಜನೊಂದಿಗೂ ಸಮೀಕರಿಸಿ ವರ್ಣಿಸಿರುವುದರಿಂದ, ಇದು ಉತ್ಕೃಷ್ಟಗುಣಸಮೀಕರಣರೂಪತುಲ್ಯಯೋಗಿತಾಲಂಕಾರ.

## ೧೫. ದೀಪಕಾಲಂಕಾರಃ

ಒಂದೆಡೆ ಇರುವ ದೀಪವು ಇತರ ಕಡೆಗಳಿಗೂ ಕಾರ್ಯಕಾರಿಯಾಗುವಂತೆ, ಒಂದು ಧರ್ಮವು ಅನೇಕತ್ರ ಅನ್ವಯವಾಗುವುದು, ದೀಪಸಾಮ್ಯದಿಂದಾಗಿ ದೀಪಕಾಲಂಕಾರವೆನಿಸುತ್ತದೆ. ಹೀಗೆ ಸಾಮ್ಯವಾದ ಧರ್ಮವು ವರ್ಣ್ಯ ಮತ್ತು ಅವರ್ಣ್ಯಗಳಲ್ಲಿಯೇ ವರ್ಣಿತವಾಗಬೇಕು. ಕೇವಲ ವರ್ಣ್ಯ ಅಥವಾ ಕೇವಲ ಅವರ್ಣ್ಯಗಳಲ್ಲಿ ಆದರೆ ಅದು ತುಲ್ಯಯೋಗಿತಾ ಆಗುತ್ತದೆ.

> 'ವದಂತಿ ವರ್ಣ್ಯಾವರ್ಣ್ಯಾನಾಂ ಧರ್ಮೈಕ್ಯಂ ದೀಪಕಂ ಬುಧಾಃ |
> ಮದೇನ ಭಾತಿ ಕಲಭಃ ಪ್ರತಾಪೇನ ಮಹೀಪತಿಃ || ೪೩ ||

'ವರ್ಣ್ಯಾವರ್ಣ್ಯಾನಾಂ = ಪ್ರಕೃತಾಪ್ರಕೃತಾನಾಂ ಧರ್ಮೈಕ್ಯಂ = ಏಕಧರ್ಮಾನ್ವಯಂ, ಬುಧಾಃ , ದೀಪಕಂ ಇತಿ ವದಂತಿ', 'ವರ್ಣ್ಯ ಮತ್ತು ಅವರ್ಣ್ಯಗಳಲ್ಲಿ ಏಕಧರ್ಮಾನ್ವಯವನ್ನು ವರ್ಣಿಸಿದ್ದಾದರೆ ಅದು ದೀಪಕಾಲಂಕಾರ

**ಉದಾಹರಣೆ** : 'ಮದೇನ ಕಲಭಃ ಭಾತಿ, ಮಹೀಪತಿಃ ಪ್ರತಾಪೇನ ಭಾತಿ' 'ಆನೆಯ ಮರಿಯು ಮದದಿಂದ ಶೋಭಿಸುತ್ತಿದೆ, ಹಾಗೆಯೇ ರಾಜನು ಶೌರ್ಯದಿಂದ ಶೋಭಿಸುತ್ತಿದ್ದಾನೆ'. 'ಈ ಉದಾಹರಣೆಯಲ್ಲಿ ಕಲಭವು (ಗಜಪೋತ) ಅವರ್ಣ್ಯ, ರಾಜನು ವರ್ಣ್ಯ; ಉಭಯಕ್ಕೂ ಭಾನರೂಪ ಏಕಧರ್ಮಾನ್ವಯವನ್ನು 'ಭಾತಿ' ಕ್ರಿಯಾಪದದ ಮುಖಾಂತರ ಹೇಳಿರುವುದರಿಂದ ಇದು ದೀಪಕಾಲಂಕಾರ. ಇದರಿಂದ 'ಕಲಭದಂತೆ ರಾಜನು' ಎಂಬ ಸಾದೃಶ್ಯವು ಇಲ್ಲಿ ಗಮ್ಯವಾಗಿರುತ್ತದೆ.

## ೧೬. ಆವೃತ್ತಿದೀಪಕಾಲಂಕಾರಃ (ತದ್ಭೇದಾಃ)

ದೀಪವು ಅನೇಕ ಉಪಕಾರಕವಾಗಿರುವಂತೆ, ದೀಪಸ್ಥಾನೀಯವಾದ ಪದವಾಗಲೀ, ಅರ್ಥವಾಗಲೀ ಅಥವಾ ಪದಾರ್ಥ ಉಭಯವೇ ಆಗಲಿ, ಆವೃತ್ತಿಯನ್ನು ಹೊಂದಿದಲ್ಲಿ, ಅದು ಆವೃತ್ತಿದೀಪಕಾಲಂಕಾರವಾಗುತ್ತದೆ.

> ತ್ರಿವಿಧಂ ದೀಪಕಾವೃತ್ತೌ ಭವೇದಾವೃತ್ತಿದೀಪಕಂ |
> ವರ್ಷತ್ಯಂಬುದಮಾಲೇಯಂ ವರ್ಷತ್ಯೇಷಾ ಚ ಶರ್ವರೀ || ೪೪ ||
> ಉನ್ಮೀಲಂತಿ ಕದಂಬಾನಿ ಸ್ಫುಟಂತಿ ಕುಟಜೋದ್ಗಮಾಃ |
> ಮಾದ್ಯಂತಿ ಚಾತಕಾಸ್ತೃಪ್ತಾ ಮಾದ್ಯಂತಿ ಚ ಶಿಖಾವಲಾಃ || ೪೫ ||

'ದೀಪಕಾವೃತ್ತೌ (ಸತ್ಯಾಂ) (ಯತ್) ಆವೃತ್ತಿದೀಪಕಂ, (ತತ್) ತ್ರಿವಿಧಂ ಭವೇತ್'; ದೀಪಕಾಲಂಕಾರವೇ ಆವೃತ್ತಿಯನ್ನು ಹೊಂದಿದಲ್ಲಿ ಅದು ಆವೃತ್ತಿದೀಪಕ ವೆನಿಸುತ್ತದೆ. ಈ ಆವೃತ್ತಿದೀಪಕವು-ಪದಾವೃತ್ತಿದೀಪಕ, ಅರ್ಥಾವೃತ್ತಿದೀಪಕ ಮತ್ತು ಪದಾರ್ಥೋಭಯಾವೃತ್ತಿದೀಪಕವೆಂದು ಮೂರು ವಿಧವಾಗುತ್ತದೆ.

೧. ಪದಾವೃತ್ತಿದೀಪಕಕ್ಕೆ ಉದಾಹರಣೆ

'ಇಯಂ ಅಂಬುದಮಾಲಾ ವರ್ಷತಿ, ಏಷಾ ಶರ್ವರೀ ಚ ವರ್ಷತಿ'. - ಇದು ವರ್ಷಾಕಾಲದ ವರ್ಣನೆಯಾಗಿರುವುದರಿಂದ, 'ಈ ಮೇಘಮಾಲೆಯು ನಿರಂತರವಾಗಿ ಮಳೆ ಸುರಿಸುತ್ತದೆ ಮತ್ತು ಮಳೆಗಾಲದ ಈ ರಾತ್ರಿಯು ಒಂದು ವರ್ಷದಂತೆ ಆಚರಿಸುತ್ತಿದೆ' - ಎಂಬ ಓರ್ವ ವಿರಹಿಣಿ ನಾಯಿಕೆಯು ತನ್ನ ಸಖಿಗೆ ಹೇಳುತ್ತಿರುವ ಮಾತಿದು. ಇಲ್ಲಿ ವರ್ಷತಿ ಎಂಬ ಕ್ರಿಯಾಪದದಲ್ಲಿ ಶ್ಲೇಷದಿಂದಾಗಿ ೧. ಮಳೆಸುರಿಸುತ್ತಿದೆ ೨. ವರ್ಷದಂತೆ ಆಚರಿಸುತ್ತಿದೆ - ಎಂಬ ಭಿನ್ನಾರ್ಥಗಳಿದ್ದು ಒಂದೇ ಕ್ರಿಯಾಪದವು ಎರಡೂ ವಾಕ್ಯಗಳಲ್ಲಿ ಅನ್ವಿತವಾಗಿರುವುದರಿಂದ ಇದು ಪದಾವೃತ್ತಿ ದೀಪಕವಾಯ್ತು.

೨. ಅರ್ಥಾವೃತ್ತಿದೀಪಕಕ್ಕೆ ಉದಾಹರಣೆ -

'ಕದಂಬಾನಿ ಉನ್ಮೀಲಂತಿ, ಕುಟಜೋದ್ಗಮಾಃ ಸ್ಫುಟಂತಿ'. ಕದಂಬ ಕುಸುಮಗಳು ಅರಳುತ್ತಿವೆ ಮತ್ತು ಕುಟಜೋದ್ಗಮ ಅಂದರೆ ಗಿರಿಮಲ್ಲಿಕಾ ಕುಸುಮಗಳು ಅರಳುತ್ತಿವೆ' ಈ ಉದಾಹರಣೆಯಲ್ಲಿ 'ಉನ್ಮೀಲಂತಿ, ಸ್ಫುಟಂತಿ' ಎಂಬ ಪದಗಳು ಬೇರೆ ಬೇರೆ ಇದ್ದರೂ, ಇವು ವಿಕಾಸರೂಪ ಏಕಾರ್ಥಬೋಧಕಗಳಾಗಿರುವುದರಿಂದ ಇದು ಅರ್ಥಾವೃತ್ತಿದೀಪಕ.

೩. ಉಭಯಾವೃತ್ತಿದೀಪಕಕ್ಕೆ ಉದಾಹರಣೆ -

'ಚಾತಕಾಃ ತೃಪ್ತಾಃ ಸಂತಃ ಮಾದ್ಯಂತಿ, ತಥಾ ಶಿಖಾವಲಾಃ ಚ ಮಾದ್ಯಂತಿ'. 'ಮೇಘೋದಕಪಾನದಿಂದ ಚಾತಕಪಕ್ಷಿಗಳು ಮದೋನ್ಮತ್ತವಾಗಿವೆ. ಹಾಗೆಯೇ ಮೇಘಮಾಲೆಯನ್ನು ನೋಡಿ ಮಯೂರಗಳೂ ಸಹ ಮದವನ್ನು ಹೊಂದುತ್ತಿವೆ' - ಎಂಬ ಈ ಉದಾಹರಣೆಯಲ್ಲಿ, ಮದಪ್ರಾಪ್ತಿರೂಪವಾದ ಏಕಾರ್ಥಬೋಧಕವಾದ ಮಾದ್ಯಂತಿ ಎಂಬ ಕ್ರಿಯಾಪದವು ಆವೃತ್ತಿ ಹೊಂದಿರುವುದರಿಂದ, ಇಲ್ಲಿ ಪದ ಮತ್ತು ಅರ್ಥ ಈ ಎರಡರ ಆವೃತ್ತಿಯೂ ಇದ್ದು, ಇದು ಉಭಯಾವೃತ್ತಿದೀಪಕವಾಗುತ್ತದೆ.

## ೧೭. ಪ್ರತಿವಸ್ತೂಪಮಾಲಂಕಾರಃ

ಈ ಅಲಂಕಾರದಲ್ಲಿ ಸಾಧಾರಣಧರ್ಮವು ವಸ್ತುಪ್ರತಿವಸ್ತುಭಾವವುಳ್ಳದ್ದಾಗಿರುತ್ತದೆ. ವಸ್ತುಪ್ರತಿ ವಸ್ತುಭಾವವೆಂದರೆ 'ಏಕಸ್ಯೈವ ಅರ್ಥಸ್ಯ ಅಥವಾ ಧರ್ಮಸ್ಯ ಶಬ್ದಭೇದೇನ ಉಪಾದಾನಂ ವಸ್ತುಪ್ರತಿವಸ್ತುಭಾವಃ'. 'ಒಂದೇ ಅರ್ಥ ಅಥವಾ ಧರ್ಮವನ್ನು ಬೇರೆ ಬೇರೆ ಪದದ ಮುಖಾಂತರ ಹೇಳುವುದು ವಸ್ತುಪ್ರತಿವಸ್ತುಭಾವವೆನಿಸುತ್ತದೆ.'

ವಾಕ್ಯಯೋರೇಕಸಾಮಾನ್ಯೇ ಪ್ರತಿವಸ್ತೂಪಮಾ ಮತಾ ।
ತಾಪೇನ ಭ್ರಾಜತೇ ಸೂರಃ ಶೂರಶ್ಚಾಪೇನ ರಾಜತೇ ॥ ೪೬ ॥

ವಾಕ್ಯಯೋಃ = ಉಪಮಾನೋಪಮೇಯ ವಾಕ್ಯಯೋಃ, ಏಕಸಾಮಾನ್ಯೇ (ಸತಿ) = ಏಕಸ್ಯೈವ ಸಾಮಾನ್ಯಧರ್ಮಸ್ಯ ಅನ್ವಯೇ ಸತಿ, ಪ್ರತಿವಸ್ತೂಪಮಾ (ಇತಿ) ಮತಾ - ಉಪಮಾನ ವಾಕ್ಯ

ಮತ್ತು ಉಪಮೇಯವಾಕ್ಯಗಳಲ್ಲಿ ಒಂದೇ ಸಾಧಾರಣಧರ್ಮದ ಅನ್ವಯವು ವರ್ಣಿತವಾದರೆ, ಅದು ಪ್ರತಿವಸ್ತೂಪಮಾ ಅಲಂಕಾರವಾಗುತ್ತದೆ.

**ಉದಾಹರಣೆ : 'ಸೂರಃ ತಾಪೇನ ಭ್ರಾಜತೇ, ಶೂರಃ ಚಾಪೇನ ರಾಜತೇ'** - 'ಸೂರ್ಯನು ತೀಕ್ಷ್ಣವಾದ ತನ್ನ ಆತಪದಿಂದ ಪ್ರಕಾಶಿಸುತ್ತಿದ್ದಾನೆ. ಹಾಗೆಯೇ, ಶೂರನು ತನ್ನ ಭಯಂಕರ ಧನುಸ್ಸಿನಿಂದ ಪ್ರಕಾಶಿಸುತ್ತಿದ್ದಾನೆ. ಇಲ್ಲಿ ಸೂರ್ಯ- ಉಪಮಾನ, ಶೂರ-ಉಪಮೇಯ. ಸೂರ್ಯ ಆತಪದಿಂದ ಪ್ರಕಾಶಿಸುತ್ತಿರುವನು - ಎಂಬುದು ಉಪಮಾನ ವಾಕ್ಯ, ಶೂರನು ಧನುಸ್ಸಿನಿಂದ ಪ್ರಕಾಶಿಸುತ್ತಿರುವನು - ಎಂಬುದು ಉಪಮೇಯ ವಾಕ್ಯ, ಈ ಎರಡೂ ವಾಕ್ಯಗಳಿಗೂ ಪ್ರಕಾಶನರೂಪವಾದ ಒಂದೇ ಸಾಧಾರಣಧರ್ಮವು 'ಭ್ರಾಜತೇ, ರಾಜತೇ' ಎಂಬ ಬೇರೆ ಬೇರೆ ಕ್ರಿಯಾಪದಗಳ ಮುಖಾಂತರ ನಿರ್ದಿಷ್ಟವಾಗಿರುವುದರಿಂದ, ಇದು ಪ್ರತಿವಸ್ತೂಪಮಾಲಂಕಾರ.

## ೧೮. ದೃಷ್ಟಾಂತಾಲಂಕಾರಃ

ಧರ್ಮಗಳಲ್ಲಿ ಬಿಂಬಪ್ರತಿಬಿಂಬಭಾವವಿದ್ದಲ್ಲಿ ಅದು ದೃಷ್ಟಾಂತಾಲಂಕಾರ; ವಸ್ತುಪ್ರತಿವಸ್ತುಭಾವವಿದ್ದಲ್ಲಿ ಅದು ಪ್ರತಿವಸ್ತೂಪಮಾಲಂಕಾರ. ಈ ಎರಡೂ ಅಲಂಕಾರಗಳ ಧರ್ಮಗಳಲ್ಲಿ ಬಿಂಬಪ್ರತಿಬಿಂಬಭಾವವೇ ಇರುತ್ತದೆ - ಎಂಬುದು ಗಮನಾರ್ಹ.

ಚೇದ್ಬಿಂಬಪ್ರತಿಬಿಂಬತ್ವಂ ದೃಷ್ಟಾಂತಸ್ತದಲಂಕೃತಿಃ ।
ತ್ವಮೇವ ಕೀರ್ತಿಮಾನ್ ರಾಜನ್ ವಿಧುರೇವ ಹಿ ಕಾಂತಿಮಾನ್ ॥ ೪೭ ॥

**'(ವಾಕ್ಯಯೋಃ) ಬಿಂಬಪ್ರತಿಬಿಂಬತ್ವಂ (ಸ್ಯಾತ್) ಚೇತ್, ತತ್, ದೃಷ್ಟಾಂತಃ (ಇತಿ) ಅಲಂಕೃತಿಃ (ಭವತಿ)'** 'ಉಪಮಾನೋಪಮೇಯ ವಾಕ್ಯಗಳಲ್ಲಿ ಹೇಳಲ್ಪಟ್ಟ ಧರ್ಮವು ಬಿಂಬಪ್ರತಿಬಿಂಬ ಭಾವದಿಂದ ಕೂಡಿದ್ದಾದರೆ, ಅದು ದೃಷ್ಟಾಂತಾಲಂಕಾರವಾಗುತ್ತದೆ. **'ಬಿಂಬಪ್ರತಿಬಿಂಬ ಭಾವೋ ನಾಮ ವಸ್ತುತಃ ಭಿನ್ನಯೋಃ ಅಪಿ ಧರ್ಮಯೋಃ ಸಾದೃಶ್ಯಾತ್ ಅಭಿನ್ನಯೋಃ ಪೃಥಕ್‌ಉಪಾದಾನಂ'** ಅಂದರೆ, ಎರಡು ವಾಕ್ಯಗಳಲ್ಲಿ ಭಿನ್ನವಾದ ಎರಡು ಧರ್ಮಗಳು ಬಿಂಬಪ್ರತಿಬಿಂಬಭಾವದಿಂದ ಕೂಡಿದ್ದಾದರೆ ಅದು ದೃಷ್ಟಾಂತಾಲಂಕಾರ.

**ಉದಾಹರಣೆ : 'ಹೇ ರಾಜನ್, ತ್ವಮೇವ ಕೀರ್ತಿಮಾನ್ ಹಿ ವಿಧುರೇವ ಕಾಂತಿಮಾನ್ ಹಿ'** ಎಲೈ ರಾಜನೇ, ನೀನೇ ಕೀರ್ತಿವಂತನಷ್ಟೆ! ಮತ್ತು ಚಂದ್ರನೇ ಕಾಂತಿಮಂತನಷ್ಟೆ !' ಇಲ್ಲಿ ರಾಜ-ಉಪಮೇಯ, ಚಂದ್ರ- ಉಪಮಾನ. ರಾಜನೇ ಕೀರ್ತಿವಂತ ಎಂಬುದು ಉಪಮೇಯವಾಕ್ಯ, ಚಂದ್ರನೇ ಕಾಂತಿಮಂತ ಎಂಬುದು ಉಪಮಾನವಾಕ್ಯ. ಈ ಎರಡೂ ವಾಕ್ಯಗಳಲ್ಲಿ ಹೇಳಿರುವ ಸಾಧಾರಣ ಧರ್ಮವಾದ ಕೀರ್ತಿ ಕಾಂತಿಗಳು ಬೇರೆ ಬೇರೆ ಆಗಿದ್ದರೂ, ಶುಭ್ರತ್ವರೂಪ ಸಾಮಾನ್ಯ ಧರ್ಮವುಳ್ಳವುಗಳಾದ್ದರಿಂದ, ಈ ಕೀರ್ತಿ - ಕಾಂತಿಗಳಿಗೆ ಬಿಂಬಪ್ರತಿಬಿಂಬಭಾವ ಬಂದು, ಇದು ದೃಷ್ಟಾಂತಾಲಂಕಾರವಾಗುತ್ತದೆ.

## ೧೯. ನಿದರ್ಶನಾಲಂಕಾರಃ (ತದ್ಭೇದಾಃ)

ಬಿಂಬಪ್ರತಿಬಿಂಬಭಾವಾಪನ್ನವಾದ ಎರಡು ಉಪಮಾನೋಪಮೇಯವಾಕ್ಯಾರ್ಥಗಳಿಗೆ ಪರಸ್ಪರ ಐಕ್ಯಾರೋಪವನ್ನು ಹೇಳುವುದು ಈ ಅಲಂಕಾರದ ತತ್ತ್ವ.

> ವಾಕ್ಯಾರ್ಥಯೋಃ ಸದೃಶಯೋರೈಕ್ಯಾರೋಪೋ ನಿದರ್ಶನಾ ।
> ಯದ್ದಾತುಃ ಸೌಮ್ಯತಾ ಸೇಯಂ ಪೂರ್ಣೇಂದೋರಕಲಂಕತಾ ॥ ೪೮॥

ಈ ನಿದರ್ಶನಾಲಂಕಾರವು 1. ವಾಕ್ಯಾರ್ಥವೃತ್ತಿನಿದರ್ಶನಾ 2. ಪದಾರ್ಥವೃತ್ತಿನಿದರ್ಶನಾ 3. ಸದರ್ಥಬೋಧನರೂಪಾ ನಿದರ್ಶನಾ 4. ಅಸದರ್ಥಬೋಧನರೂಪಾ ನಿದರ್ಶನಾ ಎಂದು ನಾಲ್ಕು ವಿಧವಾಗುತ್ತದೆ.

1. ವಾಕ್ಯಾರ್ಥವೃತ್ತಿನಿದರ್ಶನಾಲಂಕಾರದ ಲಕ್ಷಣವೆಂದರೆ - 'ಸದೃಶಯೋಃ - ಬಿಂಬ ಪ್ರತಿಬಿಂಬಭಾವಾಪನ್ನಯೋಃ ವಾಕ್ಯಾರ್ಥಯೋಃ ಪ್ರತ್ಯಾರೋಪಃ (ಇತಿ ಯತ್ ಸಾ) ನಿದರ್ಶನಾ' - ಬಿಂಬಪ್ರತಿಬಿಂಬಭಾವಾಪನ್ನವಾದ ಎರಡು ವಾಕ್ಯಾರ್ಥಗಳಿಗೆ ಪ್ರತ್ಯಾರೋಪವನ್ನು ಹೇಳಿದ್ದಾದರೆ ಅದು ವಾಕ್ಯಾರ್ಥವೃತ್ತಿನಿದರ್ಶನಾಲಂಕಾರ.

ಉದಾಹರಣೆ : 'ದಾತುಃ ಸೌಮ್ಯತಾ (ಇತಿ) ಯತ್, ಸಾ (ಸೌಮ್ಯತಾ) ಪೂರ್ಣೇಂದೋಃ ಅಕಲಂಕತಾ'. 'ದಾನಶೀಲನಲ್ಲಿ ಸೌಮ್ಯಸ್ವಭಾವವೆಂಬುದೇನಿದೆಯೋ, ಅದು ಪೂರ್ಣಚಂದ್ರನಲ್ಲಿರುವ ಅಕಲಂಕತೆ (ಯಂತೆ)'. ಅಂದರೆ ಪೂರ್ಣಚಂದ್ರನಲ್ಲಿ ಹೇಗೆ ಅಕಳಂಕತೆ ಎಂಬುದು ಅಸಂಭವವೋ ಹಾಗೆಯೇ ದಾನಶೀಲನಲ್ಲಿ ಸೌಮ್ಯತೆ ಎಂಬುದು ಅಸಂಭವ. ದಾನಶೀಲನಲ್ಲಿ ವಿನಯ ಸಂಪತ್ತಿಯೇ ದುರ್ಲಭ - ಎಂದು ತಾತ್ಪರ್ಯ.

ಹಣವನ್ನು ಪಡೆಯಬಯಸಿ, ಒಬ್ಬ ದಾನಿಯ ಬಳಿ ಹೋಗಿ, ಆತನಿಂದ ತಿರಸ್ಕೃತನಾದ ಓರ್ವ ನಿರ್ವಿಣ್ಣಯಾಚಕನ ಮಾತಿದು, ಇಲ್ಲಿ 'ದಾನಶೀಲನಲ್ಲಿ ಸೌಮ್ಯತೆಯ ಅಭಾವ' ಎಂಬುದು ಉಪಮೇಯ ವಾಕ್ಯಾರ್ಥ. 'ಪೂರ್ಣಚಂದ್ರನಲ್ಲಿ ಅಕಲಂಕತೆಯ ಅಭಾವ'. ಎಂಬುದು ಉಪಮಾನ ವಾಕ್ಯಾರ್ಥ. ಈ ಎರಡೂ ವಾಕ್ಯಾರ್ಥಗಳಿಗೂ 'ಯತ್, ತತ್, (ಯತ್, ಸಾ) ಶಬ್ದಗಳ ಮುಖಾಂತರ ಪ್ರತ್ಯಾರೋಪವನ್ನು ಹೇಳುವುದರಿಂದ (ದಾನಶೀಲನಲ್ಲಿನ ಸೌಮ್ಯತೆ ಪೂರ್ಣಚಂದ್ರನಲ್ಲಿನ ಅಕಲಂಕತೆ) ಇದು ವಾಕ್ಯಾರ್ಥವೃತ್ತಿನಿದರ್ಶನಾಲಂಕಾರ.

೨. ಪದಾರ್ಥವೃತ್ತಿನಿದರ್ಶನಾಲಂಕಾರದ ಲಕ್ಷಣವೆಂದರೆ

> ಪದಾರ್ಥವೃತ್ತಿಮಪ್ಯೇಕೇ ವದಂತ್ಯನ್ಯಾಂ ನಿದರ್ಶನಾಂ ।
> ತ್ವನ್ನೇತ್ರಯುಗಲಂ ಧತ್ತೇ ಲೀಲಾಂ ನೀಲಾಂಬುಜನ್ಮನೋಃ ॥ ೪೯ ॥

'ಏಕೇ-ಕೇಚನ ಆಲಂಕಾರಿಕಾಃ, ಪದಾರ್ಥವೃತ್ತಿಂ ಅಪಿ ಅನ್ಯಾಂ ನಿದರ್ಶನಾಂ ವದಂತಿ'. 'ಒಂದು ಪದಾರ್ಥದಲ್ಲಿ ಬೇರೊಂದು ಧರ್ಮದ ಆರೋಪವನ್ನು ವರ್ಣಿಸಿದ್ದಾದರೆ, ಅದಕ್ಕೂ ಪದಾರ್ಥವೃತ್ತಿ ನಿದರ್ಶನಾ ಎಂಬ ಹೆಸರಿನ ಒಂದು ಭೇದವನ್ನು ಕೆಲವು ಆಲಂಕಾರಿಕರು ಒಪ್ಪಿದ್ದಾರೆ'.

ಉದಾಹರಣೆ : '(ಹೇ ಕಾಂತೇ) ತ್ವನ್ನೇತ್ರಯುಗಲಂ ನೀಲಾಂಬುಜನ್ಮನೋಃ ಲೀಲಾಂ ಧತ್ತೇ' - 'ಎಲೌ ಕಾಂತೆಯೇ, ನಿನ್ನ ಎರಡೂ ನೇತ್ರಗಳು ಎರಡು ನೀಲ ನೈದಿಲೆಗಳ ವಿಲಾಸವನ್ನು ಹೊಂದಿವೆ'- ಎಂಬ ಈ ಉದಾಹರಣೆಯಲ್ಲಿ ನೀರು ನೈದಿಲೆಗಳ ಸಂಬಂಧವಾದ ಲೀಲಾರೂಪದ ಧರ್ಮವನ್ನು ನಯನಯುಗಲದಲ್ಲಿ ಆರೋಪಿಸಿ ವರ್ಣಿಸಿರುವುದರಿಂದ ಇದು ಪದಾರ್ಥವೃತ್ತಿ ನಿದರ್ಶನಾಲಂಕಾರ.

ಅಸದರ್ಥಬೋಧನರೂಪಾ ನಿದರ್ಶನಾ ಸದರ್ಥಬೋಧನ ರೂಪಾ ನಿದರ್ಶನಾ

ಅಪರಾಂ ಬೋಧನಂ ಪ್ರಾಹುಃ ಕ್ರಿಯಯಾಸತ್ಸದರ್ಥಯೋಃ|

'ಕ್ರಿಯಯಾ = ಯತ್ಕಿಂಚಿತ್ಕ್ರಿಯಾವಿಶಿಷ್ಟಸ್ಯ ಕಸ್ಯಚಿದರ್ಥಸ್ಯ ಕ್ರಿಯಯಾ, ಅಸತ್ಸದರ್ಥಯೋಃ = ಅಸದರ್ಥಸ್ಯ, ಸದರ್ಥಸ್ಯಚ, ಬೋಧನಂ (ಅಪಿ) ಅಪರಾಂ ನಿದರ್ಶನಾಂ (ಕೇಚನ) ಪ್ರಾಹುಃ' - 'ಒಂದು ವಿಶಿಷ್ಟ ಕ್ರಿಯೆಯಿಂದ ಕೂಡಿರುವ ಒಂದು ಪದಾರ್ಥದ ಆ ಕ್ರಿಯೆಯು ಅಸದರ್ಥವನ್ನಾಗಲೀ ಅಥವಾ ಸದರ್ಥವನ್ನಾಗಲೀ ಬೋಧಿಸಿದಂತೆ ವರ್ಣನೆ ಮಾಡಿದ್ದಾದರೆ, ಅದೂ ಸಹ ಒಂದು ನಿದರ್ಶನಾಲಂಕಾರವಾಗುತ್ತದೆ. ಅಂದರೆ - ಯಾವುದೇ ಒಂದು ಅರ್ಥವು ಯಾವುದಾದರೊಂದು ಕ್ರಿಯೆಯನ್ನು ಮಾಡಿಕೊಡುವುದಾಗಿದ್ದು ದೃಷ್ಟಾಂತ ರೂಪವಾದ ಆ ಕ್ರಿಯೆಯ ಮುಖಾಂತರ ಬೇರೆಯವರಿಗೆ, ಅಸತ್( ಅನಿಷ್ಟಸೂಚಕ) ಅಥವಾ ಸತ್ (ಇಷ್ಟ ಸೂಚಕ) ಅರ್ಥವನ್ನು ಬೋಧಿಸುವುದಾಗಿ ನಿಬದ್ಧವಾದರೆ, ಆ ಬೋಧನೆಯೂ ಕೂಡ ಬೇರೊಂದು ನಿದರ್ಶನಾಲಂಕಾರವಾಗುತ್ತದೆಂದು ಕೆಲವು ಆಲಂಕಾರಿಕರು ವಿವರಿಸುತ್ತಾರೆ.

೩. ಅಸದರ್ಥಬೋಧನರೂಪಾ ನಿದರ್ಶನಾ - ಅಲಂಕಾರಕ್ಕೆ ಉದಾಹರಣೆ :

ನಶ್ಯೇದ್ರಾಜ ವಿರೋಧೀತಿ ಕ್ಷೀಣಂ ಚಂದ್ರೋದಯೇ ತಮಃ ||೫೦||

'ಚಂದ್ರೋದಯೇ (ಸಮಯೇ) ತಮಃ' ರಾಜವಿರೋಧಿ ನಶ್ಯೇತ್ ಇತಿ (ಬೋಧಯತ್‌ಸತ್) ಕ್ಷೀಣಂ (ಅಭವತ್)'. 'ಚಂದ್ರೋದಯ ಸಂದರ್ಭದಲ್ಲಿ ಅಂಧಕಾರವು - ರಾಜ (=ಚಂದ್ರ) ವಿರೋಧಿಯಾದವನು ನನ್ನಂತೆಯೇ ನಾಶವನ್ನು ಹೊಂದುವನು - ಎಂದು ಬೋಧಿಸುವುದಾಗಿ ನಷ್ಟವಾಯಿತು'. ಇಲ್ಲಿ ರಾಜನ್ ಶಬ್ದಕ್ಕೆ - ಚಂದ್ರ - ಮತ್ತು ನೃಪತಿ ಎಂಬ ಎರಡೂ ಅರ್ಥಗಳನ್ನು ಇಟ್ಟುಕೊಳ್ಳಬೇಕು. ಆದ್ದರಿಂದ 'ಚಂದ್ರನೊಡನೆ ವಿರೋಧವನ್ನು ಹೊಂದಿರುವ ತಮಸ್ಸು ಹೇಗೆ ನಾಶಹೊಂದುತ್ತದೋ, ಹಾಗೆಯೇ ರಾಜವಿರೋಧಿಯೂ ಸಹ ನಾಶ ಹೊಂದುವನು. ಎಂದು ಬೋಧಿಸುವುದಾಗಿ ಕತ್ತಲೆಯು ನಷ್ಟವಾಯಿತು - ಎಂಬ ಈ ವಾಕ್ಯದಲ್ಲಿ 'ರಾಜವಿರೋಧಿಯು ಹೀಗೆಯೇ ನಾಶಹೊಂದುವನು'. ಎಂಬ ಅಸದರ್ಥಬೋಧನೆ ಇರುವುದರಿಂದ ಇದು ಅಸದರ್ಥಬೋಧನರೂಪ ನಿದರ್ಶನಾಲಂಕಾರ.

೪. ಸದರ್ಥಬೋಧನರೂಪಾ ನಿದರ್ಶನಾ - ಅಲಂಕಾರಕ್ಕೆ ಉದಾಹರಣೆ

ಉದಯನ್ನೇವ ಸವಿತಾ ಪದ್ಮೇಷ್ವರ್ಪಯತಿ ಶ್ರಿಯಂ ।
ವಿಭಾವಯನ್ಸಮೃದ್ಧೀನಾಂ ಫಲಂ ಸುಹೃದನುಗ್ರಹಂ ॥ ೫೧ ॥

'ಸವಿತಾ ಉದಯನ್ ಸನ್ ಏವ, ಸಮೃದ್ಧೀನಾಂ ಸುಹೃದನುಗ್ರಹಂ ಫಲಂ ವಿಭಾವಯನ್, ಪದ್ಮೇಷು ಶ್ರಿಯಂ (ಕಾಂತಿಂ, ಸಮೃದ್ಧಿಂಚ) ಅರ್ಪಯತಿ' 'ಸೂರ್ಯನು ಉದಯಿಸುತ್ತಿರುವಾಗಲೇ - ಸಮೃದ್ಧಿಗಳಿಗೆ ಮಿತ್ರರನ್ನು ಅನುಗ್ರಹಿಸುವುದೇ ಫಲವು - ಎಂದು ಬೇರೆಯವರಿಗೆ ಬೋಧಿಸುತ್ತಾ, ಪದ್ಮಗಳಲ್ಲಿ ಕಾಂತಿಯನ್ನೂ ಮತ್ತು ಸಮೃದ್ಧಿಯನ್ನೂ ನೀಡುತ್ತಾನೆ'. ಅಂದರೆ, ಸೂರ್ಯನು ತಾನು ಉದಯ (ಏಳಿಗೆ) ವನ್ನು ಹೊಂದುವಾಗ ಕಮಲಗಳಲ್ಲಿ ಲಕ್ಷ್ಮಿಯನ್ನು (ಕಾಂತಿಯನ್ನು) ಇಡತಕ್ಕವನಾಗಿ, ಈ ಲಕ್ಷ್ಮಿಯ ಇಡುವಿಕೆಯ ರೂಪವಾದ ಪ್ರಕ್ರಿಯೆಯಿಂದ, ಸಂಪತ್ಸಮೃದ್ಧಿಗಳ ಮುಖ್ಯ ಫಲವೆಂದರೆ ಸುಹೃದನುಗ್ರಹವೇ ಆಗಿರುತ್ತದೆ - ಎಂಬ ಶ್ರೇಯಸ್ಕರವಾದ ಅರ್ಥವನ್ನು ಬೇರೆಯವರಿಗೆ ಬೋಧಿಸುವವನಾಗಿ ಇಲ್ಲಿ ವರ್ಣಿತನಾಗಿರುವುದರಿಂದ, ಇದು ಸದರ್ಥಬೋಧನರೂಪಾ ನಿದರ್ಶನಾಲಂಕಾರ.

## ೨೦. ವ್ಯತಿರೇಕಾಲಂಕಾರಃ

ಉಪಮಾನ ಉಪಮೇಯಗಳಲ್ಲಿ ವೈಲಕ್ಷಣ್ಯವನ್ನು ಪ್ರತಿಪಾದಿಸಿದ್ದೇ ಆದರೆ ಅದು ವ್ಯತಿರೇಕಾಲಂಕಾರ.

ವ್ಯತಿರೇಕೋ ವಿಶೇಷಶ್ಚೇದುಪಮೇಯೋಪಮಾನಯೋಃ ।
ಶೈಲಾ ಇವೋನ್ನತಾಃ ಸಂತಃ ಕಿಂತು ಪ್ರಕೃತಿಕೋಮಲಾಃ ॥ ೫೨ ॥

'ಉಪಮೇಯೋಪಮಾನಯೋಃ ವಿಶೇಷಃ (ವರ್ಣಿತಃ) ಚೇತ್, (ಅಯಂ) ವ್ಯತಿರೇಕಃ (ಇತ್ಯಲಂಕಾರಃ ಭವತಿ)' ಉಪಮೇಯ ಮತ್ತು ಉಪಮಾನಗಳಲ್ಲಿ ವೈಲಕ್ಷಣ್ಯ (= ವಿಶೇಷ) ವನ್ನು ವರ್ಣಿಸಿದ್ದೇ ಆದರೆ, ಅದು ವ್ಯತಿರೇಕಾಲಂಕಾರ.

ಈ ವ್ಯತಿರೇಕಾಲಂಕಾರವು 1. ಉಪಮೇಯಾಧಿಕ್ಯಪರ್ಯವಸಾಯೀ 2. ಉಪಮೇಯ ನ್ಯೂನತ್ವಪರ್ಯವಸಾಯೀ 3.ಅನುಭಯಪರ್ಯವಸಾಯೀ ಎಂದು ಮೂರು ವಿಧವಾಗಿರುತ್ತದೆ. ಪ್ರಕೃತ ಉದಾಹರಣೆಯು ಮೊದಲನೆಯ ವಿಧಕ್ಕೆ ಕೊಟ್ಟಿರುವುದಾಗಿದೆ.

'ಸಂತಃ ಶೈಲಾಃ ಇವ ಉನ್ನತಾಃ, ಕಿಂತು ಪ್ರಕೃತಿಕೋಮಲಾಃ 'ಸತ್ಪುರುಷರು ಪರ್ವತಗಳಂತೆ ಉನ್ನತರೇ ಆಗಿದ್ದರೂ, ಸ್ವಾಭಾವಿಕವಾಗಿಯೇ ಅವರು ಕೋಮಲಸ್ವಭಾವವುಳ್ಳವರು. ಆದರೆ, ಪರ್ವತಗಳು ಸ್ವಾಭಾವಿಕವಾಗಿಯೇ ಕಠಿಣಸ್ವಭಾವವುಳ್ಳವು' ಇಲ್ಲಿ ಉಪಮಾನವಾದ ಶೈಲದ ಅಪೇಕ್ಷಯಾ, ಉಪಮೇಯವಾದ ಸತ್ಪುರುಷರು ಪ್ರಕೃತಿಕೋಮಲರು ಎಂದು ಉಪಮೇಯದ ಆಧಿಕ್ಯವನ್ನು ವರ್ಣಿಸಿರುವುದರಿಂದ, ಇದು ಉಪಮೇಯಾಧಿಕ್ಯಪರ್ಯವಸಾಯೀವ್ಯತಿರೇಕಾಲಂಕಾರ.

ಇನ್ನುಳಿದ ಎರಡು ಭೇದಗಳ ಉದಾಹರಣೆಗಳನ್ನು ಹೀಗೆಯೇ ಊಹಿಸಿಕೊಳ್ಳಬೇಕು.

## ೨೧. ಸಹೋಕ್ತ್ಯಲಂಕಾರಃ

'ಸಹ (= ಒಡನೆ) ಎಂಬ ಪದದ ಯೋಗವಿದ್ದು, ಇದು ಚಮತ್ಕಾರದಾಯಕವಾಗಿದ್ದರೆ, ಸಹೋಕ್ತ್ಯಲಂಕಾರವೆನಿಸುತ್ತದೆ'. 'ಪುತ್ರೇಣ ಸಹ ಆಗತಃ ಪಿತಾ' ಎಂಬಲ್ಲಿ ಯಾವುದೇ ಚಮತ್ಕಾರವಿಲ್ಲವಾದ್ದರಿಂದ ಇದು ಅಲಂಕಾರವಾಗುವುದಿಲ್ಲ. 'ಸಹ' ಯೋಗವಿದ್ದಾಗ ತೃತೀಯಾ ವಿಭಕ್ತಿ ಬರುತ್ತದೆ.

**ಸಹೋಕ್ತಿಃ ಸಹಭಾವಶ್ಚೇದ್ಭಾಸತೇ ಜನರಂಜನಃ |**
**ದಿಗಂತಮಗಮತ್ತಸ್ಯ ಕೀರ್ತಿಃ ಪ್ರತ್ಯರ್ಥಿಭಿಃ ಸಹ ||೫೩||**

'ಜನರಂಜನಃ ಸಹಭಾವಃ ಭಾಸತೇ ಚೇತ್ ಸಹೋಕ್ತಿಃ(ಇತ್ಯಲಂಕಾರಃ)'. 'ಲೋಕ ರಂಜಕವಾದ ರೀತಿಯಲ್ಲಿ ಸಹಭಾವದ ವರ್ಣನೆಯಾದುದಾದರೆ, ಅದು ಸಹೋಕ್ತ್ಯಲಂಕಾರ' ಲೋಕರಂಜಕವೆಂದರೆ ಸಹೃದಯರ ಹೃದಯಕ್ಕೆ ಆಹ್ಲಾದಕಾರಿ- ಎಂದರ್ಥ.

ಉದಾಹರಣೆ : 'ತಸ್ಯ (ರಾಜ್ಞಃ) ಕೀರ್ತಿಃ ಪ್ರತ್ಯರ್ಥಿಭಿಃ ಸಹ ದಿಗಂತಂ ಅಗಮತ್' 'ಆ ರಾಜನ ಕೀರ್ತಿಯು ಶತ್ರುಗಳೊಡನೆ ದಿಗಂತವನ್ನು ವ್ಯಾಪಿಸಿತು'. ಅಂದರೆ ಪರಾಜಿತರಾದ ಶತ್ರುಗಳು ಪಲಾಯನಮಾಡಿ ದಿಗಂತಗಳನ್ನು ಸೇರಿ, ಅಲ್ಲಿ ಅವನ ಪರಾಕ್ರಮಾದಿಗಳನ್ನು ಕೊಂಡಾಡಿದರು- ಎಂದು ಭಾವ. ಇಲ್ಲಿ, ಕೀರ್ತಿ ಮತ್ತು ಶತ್ರುಗಳ ಸಹಭಾವವು ಚಮತ್ಕಾರವಾಗಿ ವರ್ಣಿತ ವಾಗಿರುವುದರಿಂದ ಇದು ಸಹೋಕ್ತ್ಯಲಂಕಾರ.

## ೨೨. ವಿನೋಕ್ತ್ಯಲಂಕಾರಃ (ತದ್ಭೇದಾಃ)

'ವಿನಾ' ಎಂದರೆ ಹೊರತಾಗಿ ಎಂದರ್ಥ. 'ಸಹ' ಎಂಬುದಕ್ಕೆ ಇದು ವಿರುದ್ಧ ಪದ. ಒಂದಂಶ ವಿಲ್ಲದೆ ಒಂದು ವಸ್ತುವು ಹೀನತ್ವವನ್ನೂ ಹೊಂದಬಹುದು ಅಥವಾ ರಮ್ಯತೆಯನ್ನೂ ಹೊಂದಬಹುದು. ಇದೂ ಸಹ ಒಂದು ರೀತಿಯ ಚಮತ್ಕಾರವೇ ಆಗಿರುತ್ತದೆ. ಈ ಅಲಂಕಾರವು ಈ ಅಂಶದ ಆಧಾರದಿಂದಾಗಿ 1. ಕಿಂಚಿದ್ವಿನಾ ಹೇಯಸ್ವರೂಪ 2. ಕಿಂಚಿದ್ವಿನಾ ರಮ್ಯಸ್ವರೂಪ - ಎಂದು ಎರಡು ವಿಧವಾಗುತ್ತದೆ.

೧. ಕಿಂಚಿದ್ವಿನಾ ಹೇಯಸ್ವರೂಪ - ವಿನೋಕ್ತ್ಯಲಂಕಾರಃ

**ವಿನೋಕ್ತಿಶ್ಚೇದ್ವಿನಾ ಕಿಂಚಿತ್ ಪ್ರಸ್ತುತಂ ಹೀನಮುಚ್ಯತೇ |**
**ವಿದ್ಯಾ ಹೃದ್ಯಾಪಿ ಸಾವದ್ಯಾ ವಿನಾ ವಿನಯಸಂಪದಂ || ೫೪ ||**

'ಕಿಂಚಿದ್ವಿನಾ ಪ್ರಸ್ತುತಂ ಹೀನಂ ಉಚ್ಯತೇ ಚೇತ್ (ಸಾ) ವಿನೋಕ್ತಿಃ' 'ವರ್ಣ್ಯವಸ್ತುವು ಒಂದಂಶ ಹೊರತಾಗಿರುವುದರಿಂದ ಹೀನವೆಂದು ವರ್ಣಿತವಾದಲ್ಲಿ ಅದು ಮೊದಲನೆಯ ವಿನೋಕ್ತ್ಯಲಂಕಾರ'.

ಉದಾಹರಣೆ : ವಿದ್ಯಾ ಹೃದ್ಯಾ ಅಪಿ, ವಿನಯಸಂಪದಂ ವಿನಾ ಸಾ ಅವದ್ಯಾ 'ವಿದ್ಯೆಯು ಹೃದ್ಯವೇ (ಮನೋಹರವೇ) ಆಗಿದ್ದರೂ, ವಿನಯವೆಂಬ ಸಂಪತ್ತು ಅದರಲ್ಲಿ ಇಲ್ಲದೇ ಇದ್ದಲ್ಲಿ ಅದು

ನಿಂದ್ಯವೇ ಆಗುತ್ತದೆ'. ಇಲ್ಲಿ ವಿನಯ ಸಂಪತ್ತಿಯನ್ನು ಹೊಂದಿರದ ವಿದ್ಯೆಯು ನಿಂದ್ಯವೆಂದು ಕಂಚಿದ್ವಿನಾ ಹೀನತ್ವವನ್ನು ವರ್ಣಿಸಿರುವುದರಿಂದ ಇದು ಕಿಂಚಿದ್ವಿನಾಹೇಯಸ್ವರೂಪ ವಿನೋಕ್ತ್ಯಲಂಕಾರ.

೨. ಕಿಂಚಿದ್ವಿನಾರಮ್ಯಸ್ವರೂಪ ವಿನೋಕ್ತ್ಯಲಂಕಾರ:

ತಚ್ಚೇತ್ ಕಿಂಚಿದ್ವಿನಾ ರಮ್ಯಂ ವಿನೋಕ್ತಿ: ಸಾಪಿ ಕಥ್ಯತೇ |
ವಿನಾ ಖಲೈರ್ವಿಭಾತ್ಯೇಷಾ ರಾಜೇಂದ್ರ ಭವತಃ ಸಭಾ || ೫೫ ||

'ತತ್ = ವರ್ಣ್ಯಂ ವಸ್ತು, ಕಿಂಚಿದ್ವಿನಾ ರಮ್ಯಂ ಚೇತ್, ಸಾಪಿ ವಿನೋಕ್ತಿ: (ಇತಿ) ಕಥ್ಯತೇ, 'ಒಂದು ವರ್ಣ್ಯವಸ್ತುವು ಒಂದಂಶಹೊರತಾಗಿ ರಮ್ಯವೇ ಆಗಿದೆ ಎಂದು ವರ್ಣಿತವಾದರೆ, ಅದು ಎರಡನೆಯದಾದ ಕಂಚಿದ್ವಿನಾರಮ್ಯಸ್ವರೂಪ ವಿನೋಕ್ತ್ಯಲಂಕಾರವಾಗುತ್ತದೆ.

ಉದಾಹರಣೆ : 'ಹೇ ರಾಜೇಂದ್ರ ! ಭವತಃ ಏಷಾ ಸಭಾ ಖಲೈ: ವಿನಾ ವಿಭಾತಿ', 'ಎಲೈ ರಾಜ ಶ್ರೇಷ್ಠನೇ! ನಿನ್ನ ಈ ಸಭೆಯು ದುಷ್ಟಜನರಿಲ್ಲದೇ ಶೋಭಿಸುತ್ತಿದೆ. ಈ ಉದಾಹರಣೆಯಲ್ಲಿ ಖಲಜನರ ಸಂಪರ್ಕವಿಲ್ಲದೇ ಸಭೆಯು ಶೋಭಿಸುತ್ತಿದೆ ಎಂದು ವರ್ಣಿಸಿರುವುದರಿಂದ, ಇದು ಕಿಂಚಿದ್ವಿನಾರಮ್ಯಸ್ವರೂಪವಿನೋಕ್ತ್ಯಲಂಕಾರ.

## ೨೩. ಸಮಾಸೋಕ್ತ್ಯಲಂಕಾರ:

'ಸಮಾಸೇನ - ಸಂಕ್ಷೇಪೇಣ ಉಕ್ತಿ: ಸಮಾಸೋಕ್ತಿ:'. ಸಂಕ್ಷೇಪವಾಗಿ ಪ್ರಕೃತ ಮತ್ತು ಅಪ್ರಕೃತ ವೃತ್ತಾಂತಗಳೆರಡನ್ನೂ ವರ್ಣಿಸುವುದರಿಂದ ಇದು ಸಮಾಸೋಕ್ತಿ - ಎಂಬ ಅನ್ವರ್ಥ ನಾಮವುಳ್ಳದ್ದು. ಪ್ರಸ್ತುತವೃತ್ತಾಂತಕ್ಕೆ ಸಂಬಂಧಿಸಿದಂತೆ ಹೇಳಿರುವ ವಿಶೇಷಣಗಳು ಅಪ್ರಸ್ತುತಕ್ಕೂ ಅನ್ವಯಗೊಂಡು, ಅದರಿಂದ ಅಪ್ರಸ್ತುತ ವೃತ್ತಾಂತವು ಪ್ರತೀತವಾಗುವುದಾದರೆ, ಅದು ಸಮಾಸೋಕ್ತ್ಯಲಂಕಾರ. ಹೀಗೆ ಪ್ರತೀತವಾದ ಅಪ್ರಸ್ತುತವೃತ್ತಾಂತ ಮತ್ತು ವಾಚ್ಯವಾಗಿರುವ ಪ್ರಸ್ತುತವೃತ್ತಾಂತಗಳಿಗೆ ಆರೋಪವನ್ನು ಹೇಳುವುದು ಈ ಅಲಂಕಾರದ ತತ್ತ್ವ.

ಸಮಾಸೋಕ್ತಿ: ಪರಿಸ್ಫೂರ್ತಿಃ ಪ್ರಸ್ತುತೇಽಪ್ರಸ್ತುತಸ್ಯ ಚೇತ್ |
ಅಯಮೈಂದ್ರೀಮುಖಂ ಪಶ್ಯ ರಕ್ತಶ್ಚುಂಬತಿ ಚಂದ್ರಮಾಃ || ೫೬ ||

'ಪ್ರಸ್ತುತೇ = ಪ್ರಸ್ತುತವೃತ್ತಾಂತೇ ವರ್ಣಿತೇ ಸತಿ, ಅಪ್ರಸ್ತುತಸ್ಯ ಪರಿಸ್ಫೂರ್ತಿಃ ಚೇತ್ ಸಮಾಸೋಕ್ತಿ: (ಇತಿ ಅಲಂಕಾರು)'. 'ಒಂದು ಪ್ರಸ್ತುತವೃತ್ತಾಂತವನ್ನು ವರ್ಣಿಸುವಾಗ, ವಿಶೇಷಣಗಳ ಸಾಮ್ಯಬಲದಿಂದ ಅಪ್ರಸ್ತುತವೃತ್ತಾಂತವು ತೋರಿದ್ದಾದರೆ, ಅದು ಸಮಾಸೋಕ್ತ್ಯಲಂಕಾರ.

ಉದಾಹರಣೆ : ಓರ್ವ ಕಾಮುಕನು ಓರ್ವ ಕಾಮುಕಿಯನ್ನು ಕುರಿತು ಹೇಳುವ ಮಾತಿದು. 'ಹೇ ಪ್ರಿಯೇ ಅಯಂ ಚಂದ್ರಮಾಃ ರಕ್ತ: (ಸನ್) ಐಂದ್ರೀಮುಖಂ ಚುಂಬತಿ ಪಶ್ಯ' 'ಎಲೌ ಪ್ರಿಯಳೇ! ರಕ್ತವರ್ಣದಿಂದ ಕೂಡಿದವನಾಗಿ ಈ ಚಂದ್ರನು ಪೂರ್ವದಿಗಂತವನ್ನು ಸ್ಪರ್ಶಿಸುತ್ತಿದ್ದಾನೆ ನೋಡು'.

ಇಲ್ಲಿ ಚಂದ್ರೋದಯದ ವರ್ಣನೆ ಪ್ರಸ್ತುತವಾಗಿರುತ್ತದೆ. ಈ ವೃತ್ತಾಂತಕ್ಕೆ ಕೊಟ್ಟಿರುವ ಪದಗಳಲ್ಲಿನ ಅಥವಾ ವಿಶೇಷಣಗಳಲ್ಲಿನ ಶ್ಲೇಷಾದಿಗಳಿಂದ ಅಪ್ರಸ್ತುತವೃತ್ತಾಂತವೊಂದು ಪ್ರತೀತವಾಗುತ್ತದೆ. ಹೇಗೆಂದರೆ - ಐಂದ್ರೀ ಎಂಬಲ್ಲಿನ ಸ್ತ್ರೀಲಿಂಗ ಪದಪ್ರಯೋಗದಿಂದ, ನಾಯಿಕೆಯೋರ್ವಳ ಪ್ರತೀತಿ, ಮುಖಶಬ್ದಕ್ಕೆ - ಪ್ರಾರಂಭ ಮತ್ತು ವದನ ಎಂಬ ಶ್ಲೇಷೆ, ರಕ್ತಃ ಎಂಬ ಪದಕ್ಕೆ ರಕ್ತವರ್ಣವಿಶಿಷ್ಟ ಮತ್ತು ಅನುರಾಗವಿಶಿಷ್ಟ ಎಂಬ ಶ್ಲೇಷೆ, ಚುಂಬತಿ ಎಂಬ ಕ್ರಿಯಾಪದಕ್ಕೆ ಸಂಸ್ಪರ್ಶನ ಮತ್ತು ವದನಸಂಯೋಗ (ಚುಂಬನ) ಎಂಬ ಶ್ಲೇಷೆ, ಚಂದ್ರಮಾಃ ಎಂಬ ಪುಲ್ಲಿಂಗ ಪ್ರಯೋಗದಿಂದ ಕಾಮುಕನ ಪ್ರತೀತಿ - ಈ ಎಲ್ಲವುಗಳಿಂದ 'ಅನುರಾಗಿಯಾದ ಕಾಮುಕನೋರ್ವನು ತನ್ನ ಪ್ರಿಯೆಯ ಮುಖವನ್ನು ಚುಂಬಿಸುತ್ತಿರುವನು' ಎಂಬ ಅಪ್ರಸ್ತುತ ವೃತ್ತಾಂತವು ಪ್ರತೀತವಾಗುತ್ತದೆ ಮತ್ತು ಈ ವೃತ್ತಾಂತಗಳಿಗೆ ಆರೋಪವು ಈ ಅಲಂಕಾರದ ತತ್ತ್ವ. ಅಂದರೆ, ಚಂದ್ರನೆಂಬ ಕಾಮುಕನು, ಪೂರ್ವದಿಗಂಗನೆಯೆಂಬ ನಾಯಿಕೆಯ ಪ್ರಾರಂಭವೆಂಬ ಮುಖವನ್ನು ಸಂಸ್ಪರ್ಶನರೂಪ ಚುಂಬಿಸುತ್ತಿರುವನು - ಎಂಬುದು ಆರೋಪ. ಆದ್ದರಿಂದ ಇದು ಸಮಾಸೋಕ್ತ್ಯಲಂಕಾರ.

## ೨೪. ಪರಿಕರಾಲಂಕಾರಃ

ವಿಶೇಷ್ಯಗಳಿಗೆ ವಿಶೇಷಣಗಳನ್ನು ಹೇಳುವುದು ರೂಢಿಯಷ್ಟೆ । ಆದರೆ ಈ ವಿಶೇಷಣಗಳು ಅರ್ಥಗರ್ಭಿತವಾಗಿದ್ದಲ್ಲಿ ಮಾತ್ರ ಇವುಗಳ ಸಾರ್ಥಕ್ಯ. ಇಂತಹ ಸಾರ್ಥಕ ವಿಶೇಷಣಗಳ ಪ್ರಯೋಗವೇ ಈ ಅಲಂಕಾರ.

> ಅಲಂಕಾರಃ ಪರಿಕರಃ ಸಾಭಿಪ್ರಾಯವಿಶೇಷಣೈಃ ।
> ಸುಧಾಂಶುಕಲಿತೋತ್ತಂಸಸ್ತಾಪಂ ಹರತು ವಃ ಶಿವಃ ॥ ೫೭ ॥

'ಸಾಭಿಪ್ರಾಯ ವಿಶೇಷಣೈಃ ಪರಿಕರಃ (ಇತಿ) ಅಲಂಕಾರಃ'. ಅರ್ಥ - 'ವಿಶೇಷಗರ್ಭಿತವಾದ ವಿಶೇಷಣಗಳಿರುವ ಕಾರಣ ಪರಿಕರಾಲಂಕಾರವಾಗುತ್ತದೆ. ಅಂದರೆ ವಿಶೇಷಣಗಳು ವಿಶೇಷಾರ್ಥ ಬೋಧಕವಾಗಿ ಸಾರ್ಥಕಗಳಾಗಿರಬೇಕು ಎಂದು ತಾತ್ಪರ್ಯ.

**ಉದಾಹರಣೆ** : 'ಸುಧಾಂಶುಕಲಿತೋತ್ತಂಸಃ ಶಿವಃ ವಃ ತಾಪಂ ಹರತು' 'ಚಂದ್ರನನ್ನು ತನ್ನ ಶಿರಸ್ಸಿನಲ್ಲಿ ಧರಿಸಿರುವ ಶಿವನು ನಿಮ್ಮ ಮನಸ್ಸಿನ ತಾಪವನ್ನು ಹೋಗಲಾಡಿಸಲಿ'. ಈ ಉದಾಹರಣೆ ಯಲ್ಲಿ ಶಿವನಿಗೆ ಸುಧಾಂಶುಕಲಿತೋತ್ತಂಸಃ ಎಂಬ ವಿಶೇಷಣವನ್ನು ಕೊಡಲಾಗಿದೆ. ಚಂದ್ರನ ಕಿರಣಗಳಲ್ಲಿ ತಾಪಹರಣಸಾಮರ್ಥ್ಯವಿರುವುದರಿಂದ, ಅಂತಹ ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವ ಶಿವನಲ್ಲಿ ಮನಸ್ತಾಪಹರಣಸಾಮರ್ಥ್ಯ ಸಹಜವಾಗಿಯೇ ಇರುತ್ತದೆಯೆಂಬ ಅರ್ಥವು ಪ್ರತೀತವಾಗುವುದರಿಂದ, ಇದು ಪರಿಕರಾಲಂಕಾರ.

## ೨೫. ಪರಿಕರಾಂಕುರಾಲಂಕಾರಃ

ವಿಶೇಷಣಗಳ ಅನ್ವರ್ಥತೆಯು ಪರಿಕರಾಲಂಕಾರವಾದರೆ, ವಿಶೇಷ್ಯವು ಅಭಿಪ್ರಾಯಗರ್ಭಿತ ವಾಗಿದ್ದಲ್ಲಿ ಪರಿಕರಾಂಕುರಾಲಂಕಾರವಾಗುತ್ತದೆ. ಇದು ಪರಿಕರದ ಅಂಕುರದಂತಿರುವುದು ಎಂಬುದು ಅನ್ವರ್ಥತೆ. ವಿಶೇಷ್ಯದ ಅನ್ವರ್ಥತೆ - ಇದರ ತತ್ತ್ವ.

ಸಾಭಿಪ್ರಾಯೇ ವಿಶೇಷ್ಯೇ ತು ಭವೇತ್ ಪರಿಕರಾಂಕುರಃ ।
ಚತುರ್ಣಾಂ ಪುರುಷಾರ್ಥಾನಾಂ ದಾತಾ ದೇವಶ್ಚತುರ್ಭುಜಃ ॥ ೫೮ ॥

ವಿಶೇಷ್ಯೇತು ಸಾಭಿಪ್ರಾಯೇ ಸತಿ ಪರಿಕರಾಂಕುರಃ (ಇತಿ ಅಲಂಕಾರಃ) ಭವೇತ್'. 'ವಿಶೇಷ್ಯವು ಅರ್ಥಗರ್ಭಿತವಾದುದಾದರೆ, ಅದು ಪರಿಕರಾಂಕುರಾಲಂಕಾರ'.

ಉದಾಹರಣೆ : 'ಚತುರ್ಣಾಂ ಪುರುಷಾರ್ಥಾನಾಂ ದಾತಾ ದೇವಃ ಚತುರ್ಭುಜಃ 'ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಕೊಡುವ ಸಾಮರ್ಥ್ಯವುಳ್ಳ ದೇವನೆಂದರೆ ಚತುರ್ಭುಜನಾದ ವಿಷ್ಣುವು'. ವಿಷ್ಣುವು ಚತುರ್ಭುಜವುಳ್ಳವನಾಗಿರುವುದರಿಂದ, ಏಕಕಾಲದಲ್ಲಿಯೇ ಚತುರ್ವಿಧಪುರುಷಾರ್ಥಗಳನ್ನೂ ಕೊಡುವ ಸಾಮರ್ಥ್ಯವುಳ್ಳವನೆಂಬ ಅಭಿಪ್ರಾಯವು ಚತುರ್ಭುಜಪದದಲ್ಲಿ ಗರ್ಭಿತವಾಗಿರುವುದರಿಂದ, ಚತುರ್ಭುಜಪದವು ವಿಶೇಷ್ಯವೂ ಆಗಿರುವುದರಿಂದ ಇದು ಪರಿಕರಾಂಕುರಾಲಂಕಾರ.

## ೨೬. ಶ್ಲೇಷಾಲಂಕಾರಃ (ತದ್ಭೇದಾಃ)

ಶ್ಲೇಷಃ - ಅಂದರೆ ಕೂಡಿಕೊಂಡಿರುವಿಕೆ. ಅಂದರೆ, ಒಂದು ಪದದಲ್ಲಿ ಎರಡು ಅರ್ಥಗಳು (ಅಥವಾ ಹೆಚ್ಚು ಅರ್ಥಗಳು) ಸೇರಿಕೊಂಡಿರುವುದು ಎಂದರ್ಥ. ಜತುಕಾಷ್ಠನ್ಯಾಯಃ, ಏಕವೃಂತಗತಫಲದ್ವಯನ್ಯಾಯಃ ಎಂಬ ಎರಡು ನ್ಯಾಯಗಳನ್ನು ಈ ಅಲಂಕಾರದಲ್ಲಿ ಯೋಜಿಸಿಕೊಳ್ಳಲಾಗುತ್ತದೆ. ಅಂದರೆ, ಪದವನ್ನು ಅರ್ಥಕ್ಕನುಗುಣವಾಗಿ ಬಿಡಿಸಿಕೊಳ್ಳುವುದು ಜತುಕಾಷ್ಠನ್ಯಾಯ, ಪದವನ್ನು ಬಿಡಿಸದೆ ಹಾಗೆಯೇ ಅನೇಕಾರ್ಥವನ್ನು ಹೇಳಿಕೊಳ್ಳುವುದು ಏಕವೃಂತಗತಫಲದ್ವಯನ್ಯಾಯ. ಜತು ಎಂದರೆ ಮರವಜ್ರ. ಮರವಜ್ರದಿಂದ ಮರದ ಹಲಗೆಗಳನ್ನು ಜೋಡಿಸಲಾಗಿರುತ್ತದೆ. ಅದನ್ನು ನಮಗೆ ಬೇಕಾದ ಆಕಾರದಲ್ಲಿ ಕುಯ್ದುಕೊಳ್ಳಬಹುದು. ಒಂದು ತೊಟ್ಟಿನಲ್ಲಿ ಎರಡು ಹಣ್ಣುಗಳಿರುವಂತೆ ಒಂದು ಪದದಲ್ಲಿ ಎರಡು ಅರ್ಥಗಳಿರುವುವು. ಇವುಗಳನ್ನು ಕ್ರಮವಾಗಿ ಸಭಂಗಶ್ಲೇಷ ಮತ್ತು ಅಭಂಗಶ್ಲೇಷ ಎಂದು ಎರಡು ವಿಧವಾಗಿ ಹೇಳಲಾಗುತ್ತದೆ.

ಈ ಶ್ಲೇಷವು ಕೇವಲ ಪ್ರಕೃತಗಳಲ್ಲಿ ಕೇವಲ ಅಪ್ರಕೃತಗಳಲ್ಲಿ ಮತ್ತು ಪ್ರಕೃತಾಪ್ರಕೃತಗಳಲ್ಲಿ ಕಂಡು ಬರುವುದರಿಂದ ಕ್ರಮವಾಗಿ ಪ್ರಕೃತಶ್ಲೇಷ, ಅಪ್ರಕೃತಶ್ಲೇಷ, ಉಭಯಶ್ಲೇಷವೆಂದು ಮೂರು ವಿಧ.

ನಾನಾರ್ಥಸಂಶ್ರಯಃ ಶ್ಲೇಷೋ ವರ್ಣ್ಯಾವರ್ಣ್ಯೋಭಯಾಶ್ರಿತಃ ।
ಸರ್ವದೋ ಮಾಧವಃ ಪಾಯಾತ್ಸಯೋ(ऽ)ಗಂಗಾಮದೀಧರತ್ ॥ ೫೯ ॥
ಅಬ್ಜೇನ ತ್ವನ್ಮುಖಂ ತುಲ್ಯಂ ಹರಿಣಾऽऽಹಿತಸಕ್ತಿನಾ ।
ಉಚ್ಚರದ್ಭೂರಿಕೀಲಾಲಃ ಶುಶುಭೇ ವಾಹಿನೀಪತಿಃ ॥ ೬೦ ॥

'ನಾನಾರ್ಥಸಂಶ್ರಯಃ ವರ್ಣ್ಯಾವರ್ಣ್ಯೋಭಯಾಶ್ರಿತಃ ಶ್ಲೇಷಃ (ಅಲಂಕಾರಃ)' 'ಅನೇಕಾರ್ಥ ಗೋಚರವಾದ ಶ್ಲೇಷವು ಕೇವಲ ಪ್ರಕೃತಗೋಚರ, ಕೇವಲ ಅಪ್ರಕೃತಗೋಚರ ಮತ್ತು ಪ್ರಕೃತಾ

ಪ್ರಕೃತೋಭಯಗೋಚರವೆಂದು ಮೂರು ವಿಧವಾಗಿರುತ್ತದೆ. ಈ ಮೂರು ಭೇದಕ್ಕೂ ಕ್ರಮವಾಗಿ ಉದಾಹರಣೆಗಳೆಂದರೆ.

೧. ಕೇವಲಪ್ರಕೃತಗೋಚರಶ್ಲೇಷ :

ಅ. **ಸರ್ವದಃ ಮಾಧವಃ ಪಾಯಾತ್ ಸಃ ಯಃ ಅಗಂ ಗಾಂ ಅದೀಧರತ್.**

ಆ. **ಸರ್ವದಾ ಉಮಾಧವಃ ಪಾಯಾತ್ ಸಃ ಯಃ ಗಂಗಾಂ ಅದೀಧರತ್.** ಹೀಗೆ ಭೇದ (ಸಭಂಗ) ಮಾಡಿಕೊಂಡು ವಿಷ್ಣು ಹಾಗೂ ಶಿವಪರವಾಗಿ ಅರ್ಥವನ್ನು ಹೇಳಿಕೊಳ್ಳಬೇಕು. ಅರ್ಥ-

ಅ. ಯಾವ ವಿಷ್ಣುವು ಗೋವರ್ಧನ ಪರ್ವತವನ್ನು ಮತ್ತು ಭೂಮಿಯನ್ನು ಧರಿಸಿದನೋ ಅಂತಹ ಸಕಲ ಇಷ್ಟಗಳನ್ನೂ ಕೊಡುವ ಮಾಧವನು ಕಾಪಾಡಲಿ.

ಆ. ಯಾವ ಈಶ್ವರನು ಗಂಗೆಯನ್ನು (ತನ್ನ ಜಡೆಯಲ್ಲಿ) ಧರಿಸಿದನೋ, ಅಂತಹ ಉಮಾಪತಿಯು ಯಾವಾಗಲೂ ಕಾಪಾಡಲಿ. ಇಲ್ಲಿ ಶಿವ ಮತ್ತು ವಿಷ್ಣು ಇಬ್ಬರೂ ಪ್ರಕೃತವೇ ಆಗಿರುವುದರಿಂದ, ಇದು ಕೇವಲಪ್ರಕೃತಗೋಚರಶ್ಲೇಷ.

೨. ಕೇವಲ ಅಪ್ರಕೃತಗೋಚರ ಶ್ಲೇಷ

೧. **(ಹೇ ಪ್ರಿಯೇ) ಹರಿಣಾ ಆಹಿತಸಕ್ತಿನಾ ಅಬ್ಜೇನ ತ್ವನ್ಮುಖಂ ತುಲ್ಯಮ್'.**

೨. **(ಹೇ ಪ್ರಿಯೇ) ಹರಿಣಾಹಿತಸಕ್ತಿನಾ ಅಬ್ಜೇನ ತ್ವನ್ಮುಖಂ ತುಲ್ಯಂ'** (ಅಬ್ಜಂ ನಪುಂಸಕ ಲಿಂಗವಾದರೆ ಕಮಲವೆಂದರ್ಥ. ಅಬ್ಜಃ ಎಂದು ಪುಲ್ಲಿಂಗವಾದರೆ ಚಂದ್ರ ಎಂದರ್ಥ. ಹರಿ=ಸೂರ್ಯ, ಹರಿಣ = ಜಿಂಕೆ).

೧. 'ಎಲೌ ಪ್ರಿಯಳೇ, ನಿನ್ನ ಮುಖವು ಸೂರ್ಯನ (ಕಿರಣಗಳ) ಸಂಪರ್ಕವುಳ್ಳ ಕಮಲಕ್ಕೆ ಸಮಾನವಾಗಿದೆ.

೨. 'ಎಲೌ ಪ್ರಿಯಳೇ ನಿನ್ನ ಮುಖವು ಜಿಂಕೆಯ ಚಿಹ್ನೆಯನ್ನುಳ್ಳ ಚಂದ್ರನಿಗೆ ಸಮಾನವಾಗಿದೆ'. ಈ ಉದಾಹರಣೆಯಲ್ಲಿ ಅಬ್ಜ ಪದದಲ್ಲಿ ಶ್ಲೇಷವಿರುತ್ತದೆ. ಇದು ಉಪಮಾನಪದ ವಾಗಿರುವುದರಿಂದ, ಇದು ಅಪ್ರಕೃತಗೋಚರಶ್ಲೇಷವಾಯ್ತು.

೩. ಉಭಯಗೋಚರಶ್ಲೇಷ

೧. **ಉಚ್ಚೈರತ್ ಭೂರಿ ಕೀಲಾಲಃ (ಭೂರಿ ರಕ್ತ:) ವಾಹಿನೀಪತಿ: (=ಸೇನಾಪತಿ:) ಶುಶುಭೇ**

೨. **ಉಚ್ಚೈರತ್ ಭೂರಿ ಕೀಲಾಲಃ (ಭೂರಿ ಜಲರಾಶಿ: ) ವಾಹಿನಿ ಪತಿ: (=ಸಮುದ್ರ:) ಶುಶುಭೇ'**

೩. ಅಪಾರವಾಗಿ ಹೊರ ಚಿಮ್ಮುತ್ತಿರುವ ರಕ್ತವುಳ್ಳವನಾಗಿ ಸೇನಾಪತಿಯು ಪ್ರಕಾಶಿಸಿದನು.

೪. ಅಪಾರವಾಗಿ ವಿಜೃಂಭಿಸುತ್ತಿರುವ ಜಲರಾಶಿಯುಳ್ಳದ್ದಾಗಿ ಸಮುದ್ರವು ಶೋಭಿಸಿತು .

ಈ ಉದಾಹರಣೆಯಲ್ಲಿ ಸೇನಾಪತಿ ಪ್ರಕೃತ, ಸಮುದ್ರ ಅಪ್ರಕೃತ. ಹೀಗೆ ಪ್ರಕೃತ ಮತ್ತು ಅಪ್ರಕೃತ ಉಭಯಸಂಬಂಧಿ ಶ್ಲೇಷವಿರುವುದರಿಂದ ಇದು (ಉಭಯಶ್ಲೇಷ) ಪ್ರಕೃತಾಪ್ರಕೃತೋಭಯಗೋಚರಶ್ಲೇಷ

## ೨೭. ಅಪ್ರಸ್ತುತ ಪ್ರಶಂಸಾಲಂಕಾರಃ

ಒಂದು ಪ್ರಸ್ತುತವೃತ್ತಾಂತವನ್ನು ಪ್ರತೀತಿ ಮಾಡಿಕೊಳ್ಳುವ ಸಲುವಾಗಿ ಅಪ್ರಸ್ತುತವೃತ್ತಾಂತವನ್ನು ವರ್ಣಿಸುವುದು ಈ ಅಲಂಕಾರದ ಮರ್ಮ. ಅಂದರೆ ಅಪ್ರಸ್ತುತವೃತ್ತಾಂತವು ವಾಚ್ಯವಾಗಿದ್ದು, ಪ್ರಸ್ತುತವೃತ್ತಾಂತವು ವ್ಯಂಗ್ಯವಾಗಿರುತ್ತದೆ. ಈ ರೀತಿಯ ಪ್ರಸ್ತುತಪ್ರತೀತಿಯು ಈ ಕೆಳಕಂಡಂತೆ ಸಂಭವಿಸಬಹುದು.

1. ಅಪ್ರಸ್ತುತಸಾಮಾನ್ಯದಿಂದ ಪ್ರಸ್ತುತವಿಶೇಷಪ್ರತೀತಿ,
2. ಅಪ್ರಸ್ತುತವಿಶೇಷದಿಂದ ಪ್ರಸ್ತುತಸಾಮಾನ್ಯಪ್ರತೀತಿ.
3. ಅಪ್ರಸ್ತುತಕಾರಣದಿಂದ ಪ್ರಸ್ತುತಕಾರ್ಯಪ್ರತೀತಿ
4. ಅಪ್ರಸ್ತುತಕಾರ್ಯದಿಂದ ಪ್ರಸ್ತುತಕಾರಣಪ್ರತೀತಿ ಮತ್ತು
5. ಅಪ್ರಸ್ತುತಸರೂಪದಿಂದ ಪ್ರಸ್ತುತಸರೂಪಪ್ರತೀತಿ - ಹೀಗೆ ಐದು ವಿಧ.

**ಅಪ್ರಸ್ತುತ ಪ್ರಶಂಸಾ ಸ್ಯಾತ್ ಸಾ ಯತ್ರ ಪ್ರಸ್ತುತಾಶ್ರಯಾ ।**
**ಏಕಃ ಕೃತೀ ಶಕುಂತೇಷು ಯೋಽನ್ಯಂ ಶಕ್ರಾನ್ನ ಯಾಚತೇ ॥ ೬೧ ॥**

**'ಯತ್ರ ಸಾ ( = ಅಪ್ರಸ್ತುತಪ್ರಶಂಸಾ) ಪ್ರಸ್ತುತಾಶ್ರಯಾ ಸ್ಯಾತ್ (ಸಾ) ಅಪ್ರಸ್ತುತ ಪ್ರಶಂಸಾ (ಇತಿ ಅಲಂಕಾರಃ)'.** 'ಒಂದು ಅಪ್ರಸ್ತುತವೃತ್ತಾಂತದ ವರ್ಣನೆಯು ಪ್ರಸ್ತುತವೃತ್ತಾಂತದ ಪ್ರತೀತಿಯಲ್ಲಿ ಪರ್ಯಾವಸಾನಹೊಂದುವುದಾದರೆ, ಅದು ಅಪ್ರಸ್ತುತಪ್ರಶಂಸಾಲಂಕಾರ.

**ಉದಾಹರಣೆ :** ಇಲ್ಲಿನ ಉದಾಹರಣೆಯು ಮೇಲ್ಕಂಡ ಐದು ಪ್ರಕಾರಗಳ ಪೈಕಿ ಐದನೆಯದಾದ ಸಾರೂಪ್ಯನಿಬಂಧನ ಅಪ್ರಸ್ತುತಪ್ರಶಂಸಾಸಂಬಂಧಿಯಾಗಿದೆ. - **ಯಃ (ಚಾತಕಃ) ಶಕ್ರಾತ್ ಅನ್ಯಂ ನ ಯಾಚತೇ) (ಸಃ) ಏಕಃ (ಏವ) (ಚಾತಕಃ) ಶಕುಂತೇಷು (ಮಧ್ಯೇ) ಕೃತೀ (ನಾನ್ಯೇ ಪಕ್ಷಿಣಃ),** 'ಯಾವ ಚಾತಕಪಕ್ಷಿಯು ನೀರಿಗಾಗಿ ಇಂದ್ರನನ್ನು ಹೊರತು ಬೇರಾರನ್ನೂ ಬೇಡುವುದಿಲ್ಲವೋ, ಅಂತಹ ಈ ಚಾತಕಪಕ್ಷಿಯೇ ಪಕ್ಷಿಗಳಲ್ಲೆಲ್ಲಾ ಕೃತಕೃತ್ಯವಾದುದು. ಆದರೆ, ಬೇರೆಯ ಪಕ್ಷಿಗಳು ಕೃತಕೃತ್ಯಗಳಲ್ಲ' - ಎಂಬ ಈ ಉದಾಹರಣೆಯಲ್ಲಿ ಚಾತಕಪಕ್ಷಿಯ ವೃತ್ತಾಂತವು ಅಪ್ರಸ್ತುತ. ಆದರೆ, ಸಾರ್ವಭೌಮನನ್ನು ಹೊರತು ಬೇರಾವ ರಾಜರನ್ನೂ ಪ್ರಾರ್ಥಿಸದಿರುವ ಅಭಿಮಾನಶಾಲಿಯೋರ್ವನ ವೃತ್ತಾಂತವು ಇಲ್ಲಿ ವರ್ಣನೀಯವಾದುದಾಗಿ ಪ್ರತೀತವಾಗುವ ಸಲುವಾಗಿ, ಈ ವೃತ್ತಾಂತಕ್ಕೆ ಸರೂಪವಾದ ಚಾತಕವೃತ್ತಾಂತವನ್ನು ವರ್ಣಿಸಲಾಗಿದ್ದೆಯಾದ್ದರಿಂದ ಇದು ಸಾರೂಪ್ಯನಿಬಂಧನ ಅಪ್ರಸ್ತುತಪ್ರಶಂಸಾಲಂಕಾರ.

## ೨೮. ಪ್ರಸ್ತುತಾಂಕುರಾಲಂಕಾರಃ

ಈ ಅಲಂಕಾರದಲ್ಲಿ ವಾಚ್ಯ ಮತ್ತು ಪ್ರತೀಯಮಾನಾರ್ಥಗಳೆರಡೂ ಪ್ರಸ್ತುತವೇ ಆಗಿರುತ್ತವೆ. ಆದ್ದರಿಂದ, ಒಂದು ಪ್ರಸ್ತುತವೃತ್ತಾಂತವನ್ನು ಪ್ರತೀತಿಮಾಡಿಕೊಳ್ಳುವ ಸಲುವಾಗಿ ಮತ್ತೊಂದು ಪ್ರಸ್ತುತ ವೃತ್ತಾಂತವನ್ನು ವರ್ಣಿಸುವುದೇ ಈ ಅಲಂಕಾರದ ಮುಖ್ಯ ತತ್ತ್ವ.

ಪ್ರಸ್ತುತೇನ ಪ್ರಸ್ತುತಸ್ಯ ದ್ಯೋತನೇ ಪ್ರಸ್ತುತಾಂಕುರಃ ।
ಕಿಂ ಭೃಂಗ ಸತ್ಯಾಂ ಮಾಲತ್ಯಾಂ ಕೇತಕ್ಯಾ ಕಂಟಕೇದ್ಧಯಾ ॥ ೬೨ ॥

'ಪ್ರಸ್ತುತೇನ ಪ್ರಸ್ತುತಸ್ಯ ದ್ಯೋತನೇ (ಸತಿ) ಪ್ರಸ್ತುತಾಂಕುರಃ (ಇತಿ ಅಲಂಕಾರಃ ಭವತಿ)'. 'ಒಂದು ಪ್ರಸ್ತುತವೃತ್ತಾಂತದಿಂದ ಮತ್ತೊಂದು ಪ್ರಸ್ತುತವೃತ್ತಾಂತವು ತೋರಿದ್ದಾದರೆ ಅದು ಪ್ರಸ್ತುತಾಂಕುರಾಲಂಕಾರ.

ಉದಾಹರಣೆ : 'ಹೇ ಭೃಂಗ, ಮಾಲತ್ಯಾಂ ಸತ್ಯಾಂ ಕಂಟಕೇದ್ಧಯಾ ಕೇತಕ್ಯಾ ಕಿಂ? (ಕಿಂ ಪ್ರಯೋಜನಂ?) (ನ ಕಿಮಪಿ ಪ್ರಯೋಜನಂ)' 'ಎಲೈ ಭ್ರಮರವೇ ! ಮಾಲತೀಕುಸುಮವಿ ಇಲ್ಲಿರುವಾಗ, ಕಂಟಕಗಳಿಂದ (ಮುಳ್ಳುಗಳಿಂದ) ತುಂಬಿರುವ ಕೇತಕಿಯಿಂದ ನಿನಗೇನು ಪ್ರಯೋಜನ?' ನಾಯಕನು ಸ್ವಕಾಂತೆಯೊಡನೆ ಉಪವನದಲ್ಲಿ ವಿಹರಿಸುತ್ತಿರುವಾಗ, ತನ್ನ ಕಾಂತನು ಪರವನಿತಾಸಕ್ತನಾಗಿರುತ್ತಾನೆ. ಇದೇ ಸಂದರ್ಭದಲ್ಲಿ ಒಂದು ಭ್ರಮರವು ಹತ್ತಿರದಲ್ಲಿಯೇ ಇರುವ ಮಾಲತೀಕುಸುಮವನ್ನು ಬಿಟ್ಟು ಕೇವಲ ಮುಳ್ಳುಗಳಿಂದ ತುಂಬಿರುವ ಕೇತಕೀಪುಷ್ಪದೆಡೆಗೆ ಸಾಗುತ್ತಿದೆ. ಈ ಭ್ರಮರವನ್ನುದ್ದೇಶಿಸಿ ಹೇಳುವ ನೆಪದಲ್ಲಿ ನಾಯಿಕೆಯು ನಾಯಕನನ್ನು ಪರವನಿತಾಸಕ್ತಿಯಿಂದ ನಿವಾರಣೆಮಾಡಲು ಹೀಗೆ ಹೇಳುತ್ತಿದ್ದಾಳೆ.

'ಸನಿಹದಲ್ಲಿಯೇ ಅತಿ ಸೌಂದರ್ಯವತಿಯಾದ ನಾನಿರುವಾಗ, ಮಾವ ಭಾವಮೈದುನಾದಿ ಕ್ರೂರಜನರಿಂದ, ಪರಿವೃತಳಾಗಿರುವ ಪರವನಿತೆಯ ವಿಷಯದಲ್ಲಿ ಏತಕ್ಕಾಗಿ ಅನುರಕ್ತನಾಗಿರುವೆ?' ಎಂಬುದು ಪ್ರಸ್ತುತವೃತ್ತಾಂತ. ಈ ವೃತ್ತಾಂತವನ್ನು ಪ್ರತೀತಿ ಮಾಡಿಕೊಳ್ಳುವ ಸಲುವಾಗಿ, ಇದಕ್ಕೆ ಸರೂಪವಾಗಿರುವ ಭ್ರಮರಸಂಬಂಧಿ ಪ್ರಸ್ತುತವೃತ್ತಾಂತವನ್ನು ವರ್ಣಿಸಲಾಗಿದೆ. ಆದ್ದರಿಂದ ಇದು ಪ್ರಸ್ತುತಾಂಕುರಾಲಂಕಾರ.

## ೨೯. ಪರ್ಯಾಯೋಕ್ತಾಲಂಕಾರಃ (ತದ್ಭೇದಾಃ)

ಯಾವ ಅರ್ಥವು ವ್ಯಂಗ್ಯರೂಪವಾಗಿ ತೋರಬೇಕಾಗಿರುತ್ತದೋ, ಆ ಅರ್ಥವನ್ನೇ ಬೇರೆ ಭಂಗಿಯಿಂದ ವರ್ಣಿಸುವುದು ಪರ್ಯಾಯೋಕ್ತವಾಗುತ್ತದೆ. ಇದು 1. ಗಮ್ಯಸ್ಯ ರೂಪಾಂತರ ವರ್ಣನರೂಪಂ 2. ವ್ಯಾಜೇನ ಇಷ್ಟಸಾಧನರೂಪಂ ಎಂದು ಎರಡು ವಿಧ.

೧. ಗಮ್ಯಸ್ಯ ರೂಪಾಂತರವರ್ಣನರೂಪಂ ಪರ್ಯಾಯೋಕ್ತಂ

ಪರ್ಯಾಯೋಕ್ತಂ ತು ಗಮ್ಯಸ್ಯ ವಚೋಭಂಗ್ಯಂತರಾಶ್ರಯಮ್ ।
'ನಮಸ್ತಸ್ಮೈ ಕೃತೌ ಯೇನ ಮುಧಾ ರಾಹುವಧೂಕುಚೌ ॥ ೬೩ ॥

'ಗಮ್ಯಸ್ಯ ಭಂಗ್ಯಂತರಾಶ್ರಯಂ ವಚಃ ತು ಪರ್ಯಾಯೋಕ್ತಂ (ಇತ್ಯಲಂಕಾರಃ)' 'ವ್ಯಂಗ್ಯವಾಗಿರುವ ಅರ್ಥವನ್ನೇ ಆ ರೂಪವನ್ನು ಬಿಟ್ಟು ಬೇರೆ ರೂಪದಿಂದ ವರ್ಣಿಸುವುದು ಪರ್ಯಾಯೋಕ್ತಾಲಂಕಾರ

**ಉದಾಹರಣೆ :** ಯೇನ ರಾಹುವಧೂಕುಚೌ ಮುಧಾ ಕೃತೌ ತಸ್ಮೈ ನಮಃ, 'ವಿಷ್ಣುವು ತನ್ನ ಚಕ್ರದಿಂದ ರಾಹುವಿನ ಶಿರಸ್ಸನ್ನು ಛೇದಿಸಿ, ಅವನನ್ನು ಕೇವಲ ಶಿರೋಮಾತ್ರವುಳ್ಳವನನ್ನಾಗಿ ಮಾಡಿದ್ದರಿಂದ, ಅವನ ಪತ್ನಿಯ ಕುಚಗಳು ವ್ಯರ್ಥಗಳಾಗಿ ಮಾಡಲ್ಪಟ್ಟವು. ಹೀಗೆ ವ್ಯರ್ಥಗಳಾಗಿ ಮಾಡಲ್ಪಟ್ಟ ರಾಹುವಧುವಿನ ಕುಚಗಳುಳ್ಳ ಆ ವಾಸುದೇವನಿಗೆ ನಮಸ್ಕಾರ' - ಎಂಬ ಈ ಉದಾಹರಣೆಯಲ್ಲಿ, ಲಕ್ಷ್ಮೀಪತಿತ್ವಾದಿ ಅಸಾಧಾರಣಧರ್ಮದಿಂದ ವಾಸುದೇವನು ಗಮ್ಯನಾಗಿದ್ದು, ಈ ವಾಸುದೇವನನ್ನು 'ರಾಹುವಧೂಕುಚವೈಯರ್ಥ್ಯಕಾರಿತ್ವ' ರೂಪದಿಂದ ಪ್ರತಿಪಾದನ ಮಾಡಿರುವುದರಿಂದ, ಇದು ಪರ್ಯಾಯೋಕ್ತಾಲಂಕಾರ. (ರಾಹುವಿಗೆ ರುಂಡಮಾತ್ರವಿದ್ದು, ಮುಂಡಾದಿಗಳಿರುವುದಿಲ್ಲ)

೨. ವ್ಯಾಜೇನ ಇಷ್ಟಸಾಧನರೂಪಂ ಪರ್ಯಾಯೋಕ್ತಂ -

ಪರ್ಯಾಯೋಕ್ತಂ ತದಪ್ಯಾಹುರ್ಯದ್ವ್ಯಾಜೇನೇಷ್ಟಸಾಧನಂ ।
ಯಾಮಿ ಚೂತಲತಾಂ ದ್ರಷ್ಟುಂ ಯುವಾಭ್ಯಾಮಾಸ್ಯತಾಮಿಹ ॥ ೬೪ ॥

'ವ್ಯಾಜೇನ ಇಷ್ಟಸಾಧನಂ (ಇತಿ)ಯತ್ ತದಪಿ. ಪರ್ಯಾಯೋಕ್ತಂ ಆಹುಃ'. 'ಯಾವುದಾದರೊಂದು ಅನ್ಯಕಾರ್ಯನೆಪದಿಂದ ಇಷ್ಟಾರ್ಥಸಾಧನೆಯ ವರ್ಣನೆಯು ಪರ್ಯಾಯೋಕ್ತಾಲಂಕಾರವಾಗುತ್ತದೆ'

**ಉದಾಹರಣೆ :** ನಾಯಕ ನಾಯಿಕೆಯರು ಲಜ್ಜಾಪರರಾಗಿರಲು, ಅವರ ಸಮೀಪದಲ್ಲಿಯೇ ಇರುವ ಸಖಿಯು ಚೂತಾಲತಾದರ್ಶನದ ನೆಪದಿಂದ ಹೊರಡುವವಳಾಗಿ ಅವರ ಸ್ವೇಚ್ಛಾವಿಹಾರಕ್ಕೆ ಅನುವು ಮಾಡಿಕೊಡುವ ಸಲುವಾಗಿ ಹೀಗೆ ಹೇಳುತ್ತಿರುವಳು' (ಅಹಂ) ಚೂತಲತಾಂ ದ್ರಷ್ಟುಂ ಯಾಮಿ, ಯುವಾಭ್ಯಾಂ ಇಹ(ಏವ) ಆಸ್ಯತಾಂ'. 'ನಾನು ಆ ಚೂತಲತೆಯನ್ನು (ಮಾವಿನ ಗಿಡವನ್ನು) ನೋಡಲು ಹೋಗುತ್ತೇನೆ. ನೀವಿಬ್ಬರೂ ಕುಸುಮವುಳ್ಳ ಮತ್ತು ನಿರ್ಜನವಾದ ಈ ಲತಾಗೃಹದಲ್ಲಿಯೇ ಇರಿ' - ಇಲ್ಲಿ ಚೂತಲತಾದರ್ಶನದ ನೆಪದಿಂದ ಸಖಿಯು ನಾಯಕ ನಾಯಕಿಯರ ಇಷ್ಟಸಾಧನೆಮಾಡಿಸುವುದರಿಂದ ಇದು ವ್ಯಾಜೇನ ಇಷ್ಟಸಾಧನರೂಪ ಪರ್ಯಾಯೋಕ್ತಾಲಂಕಾರ.

## ೩೦. ವ್ಯಾಜಸ್ತುತ್ಯಲಂಕಾರಃ

ವ್ಯಾಜೇನ ಸ್ತುತಿಃ, ವ್ಯಾಜರೂಪಾ ಸ್ತುತಿಃ - ಈ ಎರಡೂ ರೀತಿಯೂ ಎರಡು ರೀತಿಯ ವ್ಯಾಜಸ್ತುತ್ಯಲಂಕಾರವಾಗುತ್ತದೆ. ಅಂದರೆ ನಿಂದಾವ್ಯಾಜದಿಂದ ಸ್ತುತಿ ಮೊದಲ ವಿಧವಾದರೆ, ಸ್ತುತಿಯ ವ್ಯಾಜದಿಂದ ನಿಂದೆ ಎರಡನೆಯ ವಿಧವಾಗುತ್ತದೆ. ವ್ಯಾಜವೆಂದರೆ ನೆಪ. ನಿಂದೆಯು ಸ್ತುತಿಯಲ್ಲಿಯೂ, ಸ್ತುತಿಯು ನಿಂದೆಯಲ್ಲಿಯೂ ಕ್ರಮವಾಗಿ ಪರ್ಯವಸಾನವಾಗುವುದೇ ಇವುಗಳ ತತ್ತ್ವ.

ಉಕ್ತಿರ್ವ್ಯಾಜಸ್ತುತಿರ್ನಿಂದಾಸ್ತುತಿಭ್ಯಾಂ ಸ್ತುತಿನಿಂದಯೋಃ ।
ಕಃ ಸ್ವರ್ಧುನಿ ವಿವೇಕಸ್ತೇ ನಯಸೇ ಪಾಪಿನೋ ದಿವಮ್ ॥ ೬೫ ॥
ಸಾಧು ದೂತಿ ಪುನಃ ಸಾಧು ಕರ್ತವ್ಯಂ ಕಿಮತಃ ಪರಮ್ ? ।
ಯನ್ಮದರ್ಥಂ ವಿಲೂನಾಸಿ ದಂತೈರಪಿ ನಖೈರಪಿ ॥ ೬೬ ॥

'ನಿಂದಾಸ್ತುತಿಭ್ಯಾಂ ಸ್ತುತಿನಿಂದಯೋಃ ಉಕ್ತಿಃ ವ್ಯಾಜಸ್ತುತಿಃ (ಇತ್ಯಲಂಕಾರಃ)'. 'ನಿಂದಾವ್ಯಾಜದಿಂದ ಸ್ತುತಿಮಾಡುವುದು ಅಥವಾ ಸ್ತುತಿವ್ಯಾಜದಿಂದ ನಿಂದೆಮಾಡುವುದು ವ್ಯಾಜಸ್ತುತ್ಯಲಂಕಾರ'. ಅಂದರೆ, ವ್ಯಾಜವಾದ ನಿಂದೆಯು ಸ್ತುತಿಯಲ್ಲಿ ಪರ್ಯವಸಾನ ಹೊಂದು ವುದು ಮೊದಲನೆಯ ವ್ಯಾಜಸ್ತುತಿ, ವಾಚ್ಯವಾದ ಸ್ತುತಿಯು ನಿಂದೆಯಲ್ಲಿ ಪರ್ಯವಸಾನ ಹೊಂದುವುದು ಎರಡನೆಯ ವ್ಯಾಜಸ್ತುತಿ.

೧. ನಿಂದಾವ್ಯಾಜದಿಂದ ಸ್ತುತಿರೂಪ ವ್ಯಾಜಸ್ತುತಿಗೆ ಉದಾಹರಣೆ —

**ಹೇ ಸ್ವರ್ಧುನಿ, ತೇ ಕಃ ವಿವೇಕಃ? ಯತಃ ಪಾಪಿನಃ (ಅಪಿ) ದಿವಂ ನಯಸೇ.** 'ಎಲೌ ಗಂಗೆಯೇ, ನಿನಗೆ ವಿವೇಕವೆಂಬುದೇ ಇಲ್ಲ. ಏಕೆಂದರೆ, ಪಾಪಿಗಳನ್ನೂ ಸಹ ಸ್ವರ್ಗಕ್ಕೆ ಒಯ್ಯುವೆ'. ಇಲ್ಲಿ ಪಾಪಿಗಳನ್ನೂ ಸಹ ನೀನು ಸ್ವರ್ಗಕ್ಕೆ ಒಯ್ಯುವುದರಿಂದ ನಿನ್ನ ಪ್ರಭಾವವು ನಿರವಧಿಕವಾದುದು ಎಂಬ ಸ್ತುತಿಯಲ್ಲಿ ಗಂಗೆಯ ನಿಂದೆಯು ಪರ್ಯವಸಾನ ಹೊಂದುವುದರಿಂದ ಇದು ಮೊದಲನೆಯ ವ್ಯಾಜಸ್ತುತ್ಯಲಂಕಾರ.

೨. ಸ್ತುತಿವ್ಯಾಜದಿಂದ ನಿಂದಾರೂಪವ್ಯಾಜಸ್ತುತಿಗೆ ಉದಾಹರಣೆ —

ತನ್ನ ಪ್ರಿಯಕರನ ವಿರಹವನ್ನು ಸಹಿಸದ ಓರ್ವ ನಾಯಿಕೆಯು, ನಾಯಕನನ್ನು ಕರೆತರು ಸಲುವಾಗಿ ದೂತಿಯನ್ನು ಕಳುಹಿಸುವಳು. ದೂತಿಯು ಆ ನಾಯಕನಿಂದ ಉಪಭುಕ್ತಳಾಗಿ ಬಂದು ನಖಕ್ಷತಾದಿ ಚಿಹ್ನೆಗಳಿಂದ ಇದನ್ನರಿತ ನಾಯಿಕೆಯು ಆ ದೂತಿಯನ್ನು ಸ್ತುತಿಯ ನೆಪದಿ ನಿಂದಿಸುತ್ತಿರುವಳು.

**'ಹೇ ದೂತಿ, ಸಾಧು, ಪುನಃ ಸಾಧು, ಇತಃ ಪರಂ ಕಿಂ (ತ್ವಯಾ) ಕರ್ತವ್ಯಂ? ಯತ್ ಮದರ್ಥ (ಗತ್ವಾ) ದಂತೈಃ ಅಪಿ, ನಖೈಃ ಅಪಿ ವಿಲೂನಾ ಅಸಿ'** 'ಎಲೌ ದೂತಿಯೇ, ಒಳ್ಳೆಯದು, ತುಂಬ ಒಳ್ಳೆಯದು. ನೀನು ಇದಕ್ಕಿಂತಲೂ ನನ್ನ ವಿಷಯದಲ್ಲಿ ಮತ್ತಾವ ಒಳ್ಳೆಯ ಕೆಲಸವನ್ನು ಮಾಡಬೇಕಾಗಿದೆ ? (ಮತ್ತಾವುದೂ ಇಲ್ಲ) ಏಕೆಂದರೆ, ನನ್ನ ಕಾರ್ಯಕ್ಕಾಗಿ ಹೋದ ನೀನು ದಂತಗಳಿಂದ, ನಖಗಳಿಂದ ಘಾಯಗೊಳಿಸಲ್ಪಟ್ಟಿರುವೆ'. ಇಲ್ಲಿ 'ನೀನು ನನ್ನ ಪ್ರಿಯನನ್ನು ಕ ತರಲು ಹೋದವಳಲ್ಲ. ಆದರೆ, ಅವನೊಡನೆ ಸಂತೋಷಹೊಂದಲೆಂದೇ ಹೋಗಿರುವೆ. ದೂತಿ ಮರ್ಯಾದೆಯನ್ನು ಉಲ್ಲಂಘಿಸಿರುವ ನಿನಗೆ ಧಿಕ್ಕಾರವಿರಲಿ' ಎಂಬ ನಿಂದೆಯಲ್ಲಿ ಈ ಸ್ತುತಿಯ ಪರ್ಯವಸಾನ ಹೊಂದುವುದರಿಂದ ಇದು ಎರಡನೆಯ ವ್ಯಾಜಸ್ತುತಿ.

## ೩೧. ವ್ಯಾಜನಿಂದಾಲಂಕಾರಃ

**ನಿಂದಾಯಾ ನಿಂದಯಾ ವ್ಯಕ್ತಿರ್ವ್ಯಾಜನಿಂದೇತಿ ಗೀಯತೇ ।**
**ವಿಧೇ ಸ ನಿಂದ್ಯೋ ಯಸ್ತೇ ಪ್ರಾಗೇಕಮೇವಾಹರಚ್ಛಿರಃ ॥ ೬೭ ॥**

ಒಬ್ಬ ವ್ಯಕ್ತಿಯ ನಿಂದೆ ಬೇರೊಬ್ಬ ವ್ಯಕ್ತಿಯ ನಿಂದೆಯಲ್ಲಿ ಪರ್ಯವಸಾನವಾಗುವುದು ಅಲಂಕಾರದ ತತ್ತ್ವ. 'ನಿಂದಯಾ (ಅನ್ಯಸ್ಯ) ನಿಂದಾಯಾಃ ವ್ಯಕ್ತಿಃ. 'ವ್ಯಾಜನಿಂದಾ ಇತಿ ಗೀಯತೇ'

'ಒಬ್ಬ ವ್ಯಕ್ತಿಯ ನಿಂದೆಯಿಂದ ಬೇರೊಬ್ಬ ವ್ಯಕ್ತಿಯ ನಿಂದೆಯು ಪ್ರತೀತವಾಗುವುದಾದರೆ ಅದು ವ್ಯಾಜನಿಂದಾಲಂಕಾರ. ನಿಂದೆಯ ವ್ಯಾಜದಿಂದ ನಿಂದೆ ಮಾಡುವಿಕೆ ಎಂದು ಅನ್ವರ್ಥತೆ.

**ಉದಾಹರಣೆ : ಹೇ ವಿಧೇ, ಸಃ(ಹರಃ) ನಿಂದ್ಯಃ, ಯಃ(ಹರಃ) ಪ್ರಾಕ್ ತೇ ಏಕಂ ಏವ ಶಿರಃ ಅಹರತ್.** ಸಂಸಾರದಲ್ಲಿ ನಿರ್ವಿಣ್ಣನಾದ ವ್ಯಕ್ತಿಯು ಏತಾದೃಶ ಸಂಸಾರವನ್ನು ನಿರ್ಮಿಸಿದ ವಿಧಿಯನ್ನು ನಿಂದಿಸುವ ನೆಪದಲ್ಲಿ ಶಿವನನ್ನು ಹೀಗೆ ನಿಂದಿಸುತ್ತಿದ್ದಾನೆ. 'ಎಲೈ ಬ್ರಹ್ಮನೇ ! ಹಿಂದೆ ನಿನ್ನ ಪಂಚ ಮುಖಗಳ ಪೈಕಿ ಕೇವಲ ಒಂದೇ ಮುಖವನ್ನು ಕಿತ್ತು ಹಾಕಿದ ಆ ಶಿವನು ನಿಂದ್ಯನಾಗಿರುತ್ತಾನೆ'. ಈ ಉದಾಹರಣೆಯಲ್ಲಿ ಶಿವನು ಬ್ರಹ್ಮನ ಎಲ್ಲಾ ಶಿರಸ್ಸುಗಳನ್ನು ಛೇದನ ಮಾಡಿದ್ದಿದ್ದರೆ, ಈ ಸಂಸಾರದ ನಿರ್ಮಾಣವೇ ಆಗುತ್ತಿರಲಿಲ್ಲ. ಆಗ ಎಲ್ಲರೂ ಈ ಸಂಸಾರಭಾರದ ಕ್ಲೇಶದಿಂದ ಮುಕ್ತರಾಗಿರುತ್ತಿದ್ದರು. ಎಂದು ಶಿವನನ್ನು ನಿಂದಿಸುವುದರ ಮುಖಾಂತರ ಈ ವಿಷಮಸಂಸಾರವನ್ನು ಸೃಷ್ಟಿಸಿದ ಬ್ರಹ್ಮನ ನಿಂದೆಯು ಇಲ್ಲಿ ಅಭಿವ್ಯಕ್ತವಾಗುವುದರಿಂದ ಇದು ವ್ಯಾಜನಿಂದಾಲಂಕಾರ.

## ೩೨. ಆಕ್ಷೇಪಾಲಂಕಾರಃ (ತದ್ಭೇದಾಃ)

ಮೊದಲು ತಾನೇ ಹೇಳಿದ ಹೇಳಿಕೆಯನ್ನು ಪುನಃ ಪರಿಶೀಲಿಸಿ, ಅದನ್ನು ಸಕಾರಣ ನಿಷೇಧಿಸುವುದು ಆಕ್ಷೇಪವಾಗುತ್ತದೆ. ಈ ರೀತಿಯ ನಿಷೇಧವು ಆ ನಿಷಿದ್ಧವಸ್ತುವಿನ ವೈಯರ್ಥ್ಯವನ್ನು ಸೂಚಿಸುತ್ತದೆ. ಇದು

೧. ಸ್ವಯಂ ಉಕ್ತಸ್ಯೈವ ವಿಚಾರಣಾತ್ ಪ್ರತಿಷೇಧರೂಪಃ ೨. ನಿಷೇಧಾಭಾಸರೂಪಃ
೩. ತಿರೋಹಿತನಿಷೇಧವ್ಯಕ್ತವಿಧಿರೂಪಃ - ಎಂದು ಮೂರು ವಿಧ.

### ೧. ಸ್ವಯಂ ಉಕ್ತಸ್ಯೈವ ವಿಚಾರಣಾತ್ ಪ್ರತಿಷೇಧರೂಪಃ ಆಕ್ಷೇಪಃ

> ಆಕ್ಷೇಪಃ ಸ್ವಯಮುಕ್ತಸ್ಯ ಪ್ರತಿಷೇಧೋ ವಿಚಾರಣಾತ್ ।
> ಚಂದ್ರಂ ಸಂದರ್ಶಯಾತ್ಮಾನಮಥವಾಸ್ತಿ ಪ್ರಿಯಾಮುಖಂ ॥ ೬೮ ॥

'ಸ್ವಯಂ ಉಕ್ತಸ್ಯ (ಅರ್ಥಸ್ಯ) ವಿಚಾರಣಾತ್ ಪ್ರತಿಷೇಧಃ ಆಕ್ಷೇಪಃ (ಇತ್ಯಲಂಕಾರಃ)' ಮೊದಲು ತಾನೇ ಹೇಳಿದ ಅರ್ಥವನ್ನು ಬೇರೊಂದು ವಸ್ತುವಿನ ಸದ್ಭಾವದಿಂದಾಗಿ ಅದರ ವೈಯರ್ಥ್ಯವನ್ನು ತಿಳಿದು, ವಿಚಾರಿಸಿ, ಅದನ್ನು ನಿಷೇಧಿಸುವುದು ಆಕ್ಷೇಪಾಲಂಕಾರವಾಗುತ್ತದೆ'
**ಉದಾಹರಣೆ : (ಹೇ ಸಖೇ ! (ತ್ವಂ) ಆತ್ಮಾನಂ ಚಂದ್ರಂ ಸಂದರ್ಶಯ, ಅಥವಾ ಪ್ರಿಯಾಮುಖಂ (ಏವ) ಅಸ್ತಿ** 'ಎಲೈ ಮಿತ್ರನೇ ! ನನಗೆ ಚಂದ್ರನನ್ನು ತೋರಿಸು (ಎಂದು ಹೇಳಿದ ಬಳಿಕ ಪರಿಶೀಲಿಸಿ,) ಅಥವಾ ಚಂದ್ರನನ್ನು ತೋರಿಸುವುದು ಬೇಡ. ಏಕೆಂದರೆ ಕಾಂತೆಯ ಮುಖವೇ ಇರುತ್ತದೆ. ಚಂದ್ರನಿಂದ ಆಗಬಹುದಾದ ಆನಂದಾದಿಯು ಕಾಂತೆಯ ಮುಖದರ್ಶನದಿಂದಲೇ ಆಗುವುದರಿಂದ, 'ಅಥವಾ' ಎಂಬ ಪದದ ಮುಖಾಂತರ ಮೊದಲು ಹೇಳಿದ ಅರ್ಥವನ್ನು ನಿಷೇಧಿಸಿರುವುದರಿಂದ ಇದು ಸ್ವಯಂ ಉಕ್ತಸ್ಯೈವ ವಿಚಾರಣಾತ್ ಪ್ರತಿಷೇಧರೂಪ ಆಕ್ಷೇಪಾಲಂಕಾರ.

೨. ನಿಷೇಧಾಭಾಸರೂಪಃ ಆಕ್ಷೇಪಃ

ನಿಷೇಧಾಭಾಸಮಾಕ್ಷೇಪಂ ಬುಧಾಃ ಕೇಚನಮನ್ವತೇ ।
ನಾಹಂ ದೂತೀ ತನೋಸ್ತಾಪಸ್ತಸ್ಯಾ ಕಾಲಾನಲೋಪಮಃ ॥ ೬೯ ॥

'ಕೇಚನ ಬುಧಾಃ ನಿಷೇಧಾಭಾಸಂ (ಅಪಿ) ಆಕ್ಷೇಪಂ ಮನ್ವತೇ' ಕೆಲವು ಆಲಂಕಾರಿಕರು ಆಭಾಸರೂಪವಾದ ನಿಷೇಧವನ್ನೂ ಸಹ ಆಕ್ಷೇಪಾಲಂಕಾರವೆಂದು ಒಪ್ಪಿದ್ದಾರೆ. ಕೇವಲ ಆಕ್ಷೇಪವು ಚಮತ್ಕಾರವುಳ್ಳದ್ದಲ್ಲ. ಆದರೆ, ನಿಷೇಧವು ಬಾಧಿತವಾದುದಾಗಿ, ಅಂದರೆ ಆಭಾಸತ್ವವನ್ನು ಹೊಂದಿದ್ದಾಗಿ, ಮತ್ತು ಅರ್ಥಾಂತರದಲ್ಲಿ ಪರ್ಯವಸಾನವನ್ನು ಹೊಂದಿದ್ದಾಗಿ, ಒಂದು ವಿಶೇಷವನ್ನು ಆಕ್ಷೇಪಮಾಡುವುದರಿಂದ ಇದು ಆಕ್ಷೇಪವೆನಿಸುತ್ತದೆ.

ಉದಾಹರಣೆ : ಓರ್ವ ವಿರಹತಪ್ತ ನಾಯಿಕೆಯಿಂದ ನಾಯಕನ ಬಳಿಗೆ ಕಳುಹಿಸಲ್ಪಟ್ಟಿರುವ ಚತುರೆಯಾದ ದೂತಿಯು ನಾಯಕನಿಗೆ ಹೇಳುವ ಮಾತು - '(ಹೇ ನಾಯಕ) ಅಹಂ ದೂತೀ ನ (ಅಸ್ಮಿ) (ಕಿಂತು) ತಸ್ಯಾಃ ತನೋಃ ಕಾಲಾನಲೋಪಮಃ ತಾಪಃ (ಅಸ್ಮಿ)' 'ತತ್ಕಾಲದಲ್ಲಿ ಸುಳ್ಳು ಹೇಳುವ ದೂತಿಯಂತೂ ನಾನಲ್ಲ. ಆದರೆ, ನಿನ್ನ ಪ್ರಿಯೆಯ ಶರೀರದಲ್ಲಿನ ಪ್ರಲಯಕಾಲೀನ ಅಗ್ನಿಸದೃಶವಾದ ತಾಪವೇ ನಾನಾಗಿರುವೇ'. (ಆದ್ದರಿಂದ ನಾನು ಹೇಳುವ ಮಾತಿನಲ್ಲಿ ಸಂಪೂರ್ಣ ಸತ್ಯತೆ ಇದೆ ಎಂದು ತಾತ್ಪರ್ಯ). ಇಲ್ಲಿ 'ನಾಹಂ ದೂತೀ' ಎಂಬಲ್ಲಿನ ನಿಷೇಧವು ಬಾಧಿತವಾದುದಾಗಿ (ಏಕೆಂದರೆ ಸಾಕ್ಷಾತ್ ದೂತಿಯೇ ಹೇಳುತ್ತಿರುವುದರಿಂದ ಈ ನಿಷೇಧವು ಬಾಧಿತವಾಗಿ) ಆಭಾಸರೂಪವಾಗಿ, 'ನಾನು ಅನುನಯಕಾಲೋಚಿತವಾಗಿ ಸುಳ್ಳನ್ನು ಹೇಳುವ ದೂತಿಯಲ್ಲ, ಆದರೆ, ಸಂಪೂರ್ಣ ಸತ್ಯವನ್ನೇ ಹೇಳತಕ್ಕವಳು' - ಎಂಬ ಅರ್ಥದಲ್ಲಿ ಪರ್ಯವಸಾನ ಹೊಂದಿದ್ದಾಗಿ, ನೀನು ಈ ಕೂಡಲೇ ಅವಳ ಬಳಿಗೆ ಬರತಕ್ಕದ್ದು, ತಡಮಾಡಿದರೆ ಅವಳು ಬದುಕಲಾರಳು. 'ನೀನು ಬಂದಲ್ಲಿ ಮಾತ್ರ ನಿನ್ನ ಪ್ರಿಯೆ ಬದುಕುವಳು' ಎಂಬ ವಿಶೇಷಾರ್ಥವನ್ನು ಆಕ್ಷೇಪ ಮಾಡಿಕೊಡುವುದರಿಂದ ಇದು ನಿಷೇಧಾಭಾಸರೂಪ ಆಕ್ಷೇಪಾಲಂಕಾರ.

೩. ತಿರೋಹಿತನಿಷೇಧವ್ಯಕ್ತವಿಧಿರೂಪಃ ಆಕ್ಷೇಪಃ

ಆಕ್ಷೇಪೋಽನ್ಯೋ ವಿಧೌ ವ್ಯಕ್ತೇ ನಿಷೇಧೇ ಚ ತಿರೋಹಿತೇ ।
ಗಚ್ಛ ಗಚ್ಛಸಿ ಚೇತ್ ಕಾಂತ ತತ್ರೈವ ಸ್ಯಾಜ್ಜನಿರ್ಮಮ ॥ ೭೦ ॥

'ವಿಧೌ ವ್ಯಕ್ತೇ (ಸತಿ), ನಿಷೇಧೇ ಚ ತಿರೋಹಿತೇ (ಸತಿ) (ಸಃ) ಅನ್ಯಃ ಆಕ್ಷೇಪಃ (ಭವತಿ)'. 'ವಿಧಿಯು ಸ್ಫುಟವಾಗಿಯೇ ತೋರುತ್ತಿದ್ದು, ನಿಷೇಧವು ತಿರೋಹಿತವಾದುದಾದಲ್ಲಿ (ಮರೆ ಮಾಚಲ್ಪಟ್ಟುದಾದರೆ ಅಂದರೆ ಅಸ್ಫುಟವಾದಲ್ಲಿ) ಅದೂ ಸಹ ಆಕ್ಷೇಪಾಲಂಕಾರವಾಗುತ್ತದೆ'. ನಿಷೇಧವು ವಸ್ತುತಃ ಅಭಿಮತವಾಗಿರುತ್ತದೆ. ಆದರೆ, ಈ ರೀತಿಯ ನಿಷೇಧವನ್ನು ವಾಚ್ಯವಾಗಿ ಹೇಳದೆ, ಅನಭಿಮತವಾದ ವಿಧಿಯನ್ನೇ ಪ್ರಕಟಪಡಿಸಿ ಪ್ರಕಾರಾಂತರದಿಂದ ಅಭಿಮತವಾದ ನಿಷೇಧವು ಗರ್ಭೀಕೃತವಾಗಿರುವ ರೀತಿಯಲ್ಲಿ ವಿಧಿಯನ್ನು ಹೇಳುವುದು ಮತ್ತೊಂದು ರೀತಿಯ ಆಕ್ಷೇಪ.

**ಉದಾಹರಣೆ:** ಪರಸ್ಥಳಕ್ಕೆ ವ್ಯಾಪಾರಾದಿ ಕಾರಣದಿಂದ ದೀರ್ಘಕಾಲ ಹೊರಡಲು ಅನುವಾಗಿರುವ ನಾಯಕನನ್ನು ಕುರಿತು, ಅವನ ಗಮನವನ್ನೇ ಇಚ್ಛಿಸದವಳಾದ ನಾಯಿಕೆಯು ಹೇಳುವ ಮಾತು - **ಹೇ 'ಕಾಂತ! (ತ್ವಂ) ಗಚ್ಛ, (ಯದಿ) ಗಚ್ಛಸಿ ಚೇತ್ (ತದಾ) ತತ್ರ ಏವ ಮಮ ಜನಿಃ ಸ್ಯಾತ್'.** 'ಎಲೈ ಕಾಂತನೇ! ನೀನು ಹೋಗು. ಒಂದು ವೇಳೆ ನೀನು ಹೋದುದಾದರೆ, ನೀನಿರುವ ಸ್ಥಳದಲ್ಲಿಯೇ ನನ್ನ ಜನ್ಮವಾದೀತು'. (ನೀನು ಹೋಗುತ್ತಿರುವ ಸ್ಥಳದಲ್ಲಿಯೇ ನನಗೆ ಪುನರ್ಜನ್ಮವಾಗಲೆಂದು ಪ್ರಾರ್ಥಿಸುತ್ತೇನೆ. ಒಂದು ವೇಳೆ ನಾನು ಮೃತಳಾದರೂ ಬೇರೆ ಜನ್ಮದಲ್ಲಿ ನಿನ್ನ ಪತ್ನಿಯಾದೇನೇ ಹೊರತು ಬೇರೆಯವರ ಪತ್ನಿಯಾಗಲಾರೆ ಎಂದು ಭಾವ). ಈ ವಾಕ್ಯದಲ್ಲಿ 'ನಾನು ಮರಣಕ್ಕೆ ಹೆದರಲಾರೆ. ಆದರೆ ನಾನು ಜೀವಿಸಿರಬೇಕೆಂದು ನೀನು ಬಯಸುವಿಯಾದರೆ ನೀನೀಗ ಹೋಗಬೇಡ' ಎಂಬ ನಿಷೇಧವು 'ಗಚ್ಛ' ಎಂಬ ವಿಧಿಯಲ್ಲಿ ಗರ್ಭೀಕೃತವಾಗಿರುವುದರಿಂದ, ಇಲ್ಲಿ ಗಮನದ ನಿಷೇಧವನ್ನು ಮರೆಮಾಚಿ ವಿಧಿಯೇ ಸ್ಫುಟವಾಗಿರುವುದರಿಂದ, ತಿರೋಹಿತನಿಷೇಧವ್ಯಕ್ತವಿಧಿರೂಪ ಆಕ್ಷೇಪಾಲಂಕಾರ.

## ೩೩. ವಿರೋಧಾಭಾಸಾಲಂಕಾರಃ

ವಾಚ್ಯವಾಗಿರುವ ವಿರೋಧವು ವಿರೋಧದಂತೆ ತೋರಿದರೂ, ಅದು ವಸ್ತುತಃ ವಿರೋಧವಾಗಿರದೆ, ಆ ವಿರೋಧವು ವಿರೋಧಪರಿಹಾರದಲ್ಲಿ ಪರ್ಯವಸಾನ ಹೊಂದುವುದೇ ವಿರೋಧಾಭಾಸದ ಮುಖ್ಯತತ್ತ್ವ. ವಿರೋಧದಂತೆ ತೋರುವುದು ವಿರೋಧಾಭಾಸ ಎಂಬುದು ಅನ್ವರ್ಥ.

ಆಭಾಸತ್ವೇ ವಿರೋಧಸ್ಯ ವಿರೋಧಾಭಾಸ ಉಚ್ಯತೇ ।
ವಿನಾಪಿ ತನ್ವಿ ಹಾರೇಣ ವಕ್ಷೋಜೌ ತವ ಹಾರಿಣೌ ॥ ೭೧ ॥

'ವಿರೋಧಸ್ಯ ಆಭಾಸತ್ವೇ (ಸತಿ) ವಿರೋಧಾಭಾಸ (ಇತಿ) ಉಚ್ಯತೇ'. 'ವಿರೋಧದಂತೆ ತೋರುವುದಾದರೆ ಅದು ವಿರೋಧಾಭಾಸಾಲಂಕಾರ'.ಅಂದರೆ ಈ ವಿರೋಧವು ವಿರೋಧ ಪರಿಹಾರದಲ್ಲಿ ಪರ್ಯವಸಾನವಾಗುತ್ತದೆ. ಈ ಪರಿಹಾರವಾದರೋ ಶ್ಲೇಷದಿಂದ ಆಗುತ್ತದೆ.

**ಉದಾಹರಣೆ :** 'ಹೇ ತನ್ವಿ!, ತವ ವಕ್ಷೋಜೌ ಹಾರೇಣ ವಿನಾ ಅಪಿ, ಹಾರಿಣೌ (ಭವತಃ)'. 'ಎಲೌ ಸುಂದರಿ! ನಿನ್ನ ವಕ್ಷೋಜಗಳು ಮುಕ್ತಾಹಾರದಿಂದ ಕೂಡಿರದೇ ಇದ್ದರೂ ಹಾರವುಳ್ಳವುಗಳಾಗಿವೆ'- ಇಲ್ಲಿ 'ಹಾರೇಣ ವಿನಾ ಅಪಿ ಹಾರಿಣೌ' ಹಾರವಿಲ್ಲದೆ ಇದ್ದರೂ ಹಾರವುಳ್ಳವು' ಎಂಬಲ್ಲಿ ವಿರೋಧ. ಹಾರಿಣೌ ಎಂಬ ಪದಕ್ಕೆ ಮನೋಹಾರಿಣೌ, ಮನೋಹರೌ 'ಮನೋಹರಗಳಾಗಿವೆ' ಎಂಬ ಅರ್ಥವನ್ನು ಶ್ಲೇಷದಿಂದ ಸ್ವೀಕರಿಸಿ, ವಿರೋಧಪರಿಹಾರ ಮಾಡಿಕೊಳ್ಳುವುದರಿಂದ ಇದು ವಿರೋಧಾಭಾಸಾಲಂಕಾರ.

## ೩೪. ವಿಭಾವನಾಲಂಕಾರಃ (ತದ್ಭೇದಾಃ)

ಕಾರಣವಿಲ್ಲದೆ ಕಾರ್ಯದ ಉತ್ಪತ್ತಿಯಾಗಲಾರದು. ಆದ್ದರಿಂದ ಕಾರ್ಯಕಾರಣಗಳಿಗೆ ನಿತ್ಯಸಂಬಂಧವುಂಟು. ಆದರೆ, ಚಮತ್ಕಾರದ ದೃಷ್ಟಿಯಿಂದ ಕಾರಣವಿಲ್ಲದೆಯೂ ಕಾರ್ಯ ಹುಟ್ಟಬಹುದು ಇತ್ಯಾದಿ ಇದೇ ವಿಭಾವನಾಲಂಕಾರ. ಈ ವಿಭಾವನಾಲಂಕಾರವು

1. ಕಾರಣಂ ವಿನಾ ಕಾರ್ಯೋತ್ಪತ್ತಿರೂಪಾ
2. ಹೇತುವೈಕಲ್ಯೇऽಪಿ ಕಾರ್ಯೋತ್ಪತ್ತಿರೂಪಾ
3. ಪ್ರತಿಬಂಧಕಸತ್ತ್ವೇऽಪಿ ಕಾರ್ಯೋತ್ಪತ್ತಿರೂಪಾ
4. ಅಕಾರಣಾತ್ ಕಾರ್ಯೋತ್ಪತ್ತಿರೂಪಾ
5. ವಿರುದ್ಧಾತ್ ಕಾರಣಾತ್ ಕಾರ್ಯೋತ್ಪತ್ತಿರೂಪಾ
6. ಕಾರ್ಯಾತ್ ಕಾರಣೋತ್ಪತ್ತಿರೂಪಾ ಎಂದು ಆರು ವಿಧವಾಗಿರುತ್ತದೆ. ಕ್ರಮವಾಗಿ ಇವುಗಳ ಲಕ್ಷಣ - ಲಕ್ಷ್ಯಸಮನ್ವಯವೆಂದರೆ

೧. ಕಾರಣಂ ವಿನಾ ಕಾರ್ಯೋತ್ಪತ್ತಿ ರೂಪಾ ವಿಭಾವನಾ

ವಿಭಾವನಾ ವಿನಾಪಿ ಸ್ಯಾತ್ ಕಾರಣಂ ಕಾರ್ಯಜನ್ಮ ಚೇತ್ |
ಅಪ್ಯಲಾಕ್ಷಾರಸಾಸಿಕ್ತಂ ರಕ್ತಂ ತ್ವಚ್ಚರಣದ್ವಯಂ || ೭೨ ||

'ಕಾರಣಂ ವಿನಾ ಅಪಿ ಕಾರ್ಯಜನ್ಮ ಸ್ಯಾತ್ ಚೇತ್ ವಿಭಾವನಾ (ಇತ್ಯಲಂಕಾರಃ)' 'ಕಾರಣವೇ ಇಲ್ಲದಿದ್ದರೂ ಕಾರ್ಯವು ಹುಟ್ಟಿದೆ ಎಂದು ವರ್ಣಿಸುವುದಾದರೆ ಅದು ಮೊದಲನೆಯ ವಿಭಾವನಾಲಂಕಾರವಾಗುತ್ತದೆ '.

**ಉದಾಹರಣೆ :** '(ಹೇ ಕಾಂತೇ) ತ್ವಚ್ಚರಣದ್ವಯಂ ಅಲಾಕ್ಷಾರಸಾಸಿಕ್ತಂ (ಸತ್) ಅಪಿ, ರಕ್ತಂ (ಜಾತಂ) (ಅಥವಾ ಅಸ್ತಿ)'. 'ಎಲೌ ಕಾಂತೆಯೇ, ನಿನ್ನ ಎರಡು ಪಾದಗಳೂ ಲಾಕ್ಷಾರಸದ ಲೇಪನವನ್ನು ಹೊಂದದೇ ಇದ್ದರೂ ಸಹ ರಕ್ತವರ್ಣದಿಂದ, ಕೂಡಿವೆ. ಇಲ್ಲಿ ರಕ್ತತ್ವಕ್ಕೆ ಕಾರಣ ಲಾಕ್ಷಾರಸಲೇಪನ. ಈ ಲೇಪನರೂಪಕಾರಣವಿಲ್ಲದೇ ಇದ್ದರೂ ರಕ್ತಿಮತ್ವರೂಪಕಾರ್ಯವು ಹುಟ್ಟಿರುವುದರಿಂದ ಇದು ಮೊದಲನೆಯ ವಿಭಾವನಾಲಂಕಾರ. ಈ ವಿರೋಧಕ್ಕೆ ಪರಿಹಾರವೆಂದರೆ, ಕಾಂತೆಯ ಪಾದಗಳು ಸ್ವಾಭಾವಿಕವಾಗಿಯೇ ರಕ್ತವರ್ಣವುಳ್ಳವು ಎಂಬುದು.

೨. ಹೇತು ವೈಕಲ್ಯೇऽಪಿ ಕಾರ್ಯೋತ್ಪತ್ತಿರೂಪಾ ವಿಭಾವನಾ

ಹೇತೂನಾಮಸಮಗ್ರತ್ವೇ ಕಾರ್ಯೋತ್ಪತ್ತಿಶ್ಚ ಸಾ ಮತಾ |
ಅಸ್ತ್ರೈರತೀಕ್ಷ್ಣಕಠಿನೈರ್ಜಗಜ್ಜಯತಿ ಮನ್ಮಥಃ || ೭೩ ||

'ಹೇತೂನಾಂ ಅಸಮಗ್ರತ್ವೇ (ಅಪಿ) ಕಾರ್ಯೋತ್ಪತ್ತಿಃ ಚ ಸಾ ವಿಭಾವನಾ (ಇತಿ) ಮತಾ' 'ಕಾರಣಗಳು ಸಮಗ್ರ(ಸಂಪೂರ್ಣ)ವಾಗಿ ಇಲ್ಲದೇ ಇದ್ದರೂ, ಕಾರ್ಯೋತ್ಪತ್ತಿಯಾಗುವುದಾದರೆ ಅದು ಎರಡನೆಯ ವಿಭಾವನಾಲಂಕಾರ'.

**ಉದಾಹರಣೆ :** 'ಮನ್ಮಥಃ ಅತೀಕ್ಷ್ಣಕಠಿನೈಃ ಅಸ್ತ್ರೈಃ ಜಗತ್ ಜಯತಿ'. ಮನ್ಮಥನು ತನ್ನ, ಅತ್ಯಂತ ತೀಕ್ಷ್ಣವೂ ಅಲ್ಲದ, ಮತ್ತು ಅತ್ಯಂತ ಕಠಿನವೂ ಅಲ್ಲದ, ಆದರೆ ಕೇವಲ ಕೋಮಲವಾದ ಕುಸುಮಬಾಣಗಳಿಂದಲೇ ಜಗತ್ತನ್ನು ಗೆಲ್ಲುತ್ತಾನೆ ವಸ್ತುತಃ ಅಸ್ತ್ರಗಳು ತೀಕ್ಷ್ಣಗಳೂ ಕಠಿಣಗಳೂ ಆಗಿರಬೇಕು. ಆದರೆ ಮನ್ಮಥನ ಅಸ್ತ್ರಗಳಾದ 'ಅರವಿಂದ, ಅಶೋಕ, ಚೂತ, ನವಮಲ್ಲಿಕಾ,

ನೀಲೋತ್ಪಲ' ಎಂಬ ಪಂಚ ಕುಸುಮಬಾಣಗಳು, ತೀಕ್ಷ್ಣಗಳೂ ಅಲ್ಲ, ಕಠಿಣಗಳೂ ಅಲ್ಲ. ಪ್ರತಿಯಾಗಿ ಅತ್ಯಂತ ಕೋಮಲಗಳು. ಆದ್ದರಿಂದ ಜಗಜ್ಜಯನರೂಪ ಕಾರ್ಯಕ್ಕೆ ಇವು ಅಸಮಗ್ರ ಕಾರಣಗಳಾಗಿದ್ದರೂ ಜಗಜ್ಜಯನರೂಪ ಕಾರ್ಯೋತ್ಪತ್ತಿಯಾಗಿರುವುದರಿಂದ, ಇದು ಎರಡನೆಯ ವಿಭಾವನಾಲಂಕಾರ. ಕೇವಲ ಕೋಮಲವಾದ ಸುಮಬಾಣಗಳಿಂದಲೇ ಮನ್ಮಥನು ಸಮಸ್ತ ಜಗತ್ತನ್ನೇ ವಶಮಾಡಿಕೊಳ್ಳಬಲ್ಲನೆಂಬ ಅವನ ಮಹಿಮಾತಿಶಯ ವ್ಯಕ್ತವಾಗುತ್ತದೆ.

೩. ಪ್ರತಿಬಂಧಕಸತ್ತ್ವೇಽಪಿ ಕಾರ್ಯೋತ್ಪತ್ತಿರೂಪಾ ವಿಭಾವನಾ

ಕಾರ್ಯೋತ್ಪತ್ತಿಸ್ತೃತೀಯಾ ಸ್ಯಾತ್ ಸತ್ಯಪಿ ಪ್ರತಿಬಂಧಕೇ ।
ನರೇಂದ್ರಾನೇವ ತೇ ರಾಜನ್ ದಶತ್ಯಸಿಭುಜಂಗಮಃ ॥ ೭೪ ॥

'ಪ್ರತಿಬಂಧಕೇ ಸತಿ ಅಪಿ, ಕಾರ್ಯೋತ್ಪತ್ತಿಃ ಸ್ಯಾತ್ (ಚೇತ್) ತೃತೀಯಾ ವಿಭಾವನಾ (ಇತಿ ಅಲಂಕಾರಃ ಭವತಿ)'. 'ಕಾರ್ಯೋತ್ಪತ್ತಿಗೆ ಪ್ರತಿಬಂಧಕ(ಅಡ್ಡಿ) ಇದ್ದರೂ, ಕಾರ್ಯೋತ್ಪತ್ತಿ ಯಾಯಿತೆಂದು ವರ್ಣಿಸುವುದು ಮೂರನೆಯ ವಿಭಾವನಾಲಂಕಾರವಾಗುತ್ತದೆ'.

ಉದಾಹರಣೆ : 'ಹೇ ರಾಜನ್! ತೇ ಅಸಿಭುಜಂಗಮಃ ನರೇಂದ್ರಾನ್ ಏವ ದಶತಿ' - 'ಎಲೈ ರಾಜೇಂದ್ರ, ರಾಮಚಂದ್ರನೇ ! ನಿನ್ನ ಖಡ್ಗವೆಂಬ ಸರ್ಪವು ನರೇಂದ್ರರನ್ನೇ (ರಾಜ ಶ್ರೇಷ್ಠರನ್ನೇ, ವಿಷವೈದ್ಯರನ್ನೇ) ಕಚ್ಚುತ್ತದೆ'. ನರೇಂದ್ರ = ಮಣಿಮಂತ್ರೌಷಧಾದಿಗಳಿಂದ ಸಿದ್ಧಿ ಪಡೆದಿರುವ ವಿಷವೈದ್ಯ ಎಂಬ ಅರ್ಥವನ್ನು ಇಟ್ಟುಕೊಂಡಾಗ, ವಿಷವೈದ್ಯನನ್ನು ಸರ್ಪ ಕಚ್ಚುವಲ್ಲಿ ಪ್ರತಿಬಂಧಕವಿರುತ್ತದೆಯಷ್ಟೆ । ಈ ಪ್ರತಿಬಂಧಕವಿದ್ದರೂ ನರೇಂದ್ರ = ವಿಷವೈದ್ಯನನ್ನೇ ಅಸಿಭುಜಂಗಮವು ಕಚ್ಚುತ್ತದೆ - ಎಂದು ವರ್ಣಿಸಿರುವುದರಿಂದ ಕಾರ್ಯೋತ್ಪತ್ತಿ ವರ್ಣಿತವಾಯಿತು. ಆದ್ದರಿಂದ ಇದು ಮೂರನೆಯ ವಿಭಾವನಾಲಂಕಾರ. ಈ ವಿರೋಧಕ್ಕೆ ಪರಿಹಾರ 'ನಿನ್ನ ಖಡ್ಗವೆಂಬ ಸರ್ಪವು ಶತ್ರು ರಾಜಶ್ರೇಷ್ಠರನ್ನೇ ಕಚ್ಚುತ್ತದೆ, ನಾಶಮಾಡುತ್ತದೆ' ಎಂದು.

೪. ಅಕಾರಣಾತ್ ಕಾರ್ಯೋತ್ಪತ್ತಿರೂಪಾ ವಿಭಾವನಾ

ಅಕಾರಣಾತ್ ಕಾರ್ಯಜನ್ಮ ಚತುರ್ಥೀ ಸ್ಯಾದ್ವಿಭಾವನಾ ।
ಶಂಖಾದ್ವೀಣಾನಿನಾದೋಽಯಮುದೇತಿ ಮಹದದ್ಭುತಂ ॥ ೭೫ ॥

'ಅಕಾರಣಾತ್ ಕಾರ್ಯಜನ್ಮ ಚೇತ್ ಚತುರ್ಥೀ ವಿಭಾವನಾ ಸ್ಯಾತ್'. ಕಾರಣವಲ್ಲದ್ದರಿಂದ ಅಂದರೆ ಭಿನ್ನಕಾರಣದಿಂದ ಕಾರ್ಯೋತ್ಪತ್ತಿಯನ್ನು ವರ್ಣಿಸಿದ್ದಾದರೆ ಅದು ನಾಲ್ಕನೆಯ ವಿಭಾವನಾಲಂಕಾರ.

ಉದಾಹರಣೆ : 'ಶಂಖಾತ್ ಅಯಂ ವೀಣಾನಿನಾದಃ ಉದೇತಿ (ಏತತ್) ಮಹತ್ ಅದ್ಭುತಂ' 'ಶಂಖದಿಂದ ಈ ವೀಣಾಧ್ವನಿಯು ಮೂಡಿಬರುತ್ತಿದೆಯೆಂಬುದು ಅತ್ಯಂತ ಅದ್ಭುತ'. ಇಲ್ಲಿ ವೀಣಾಧ್ವನಿಯ ಉತ್ಪತ್ತಿಗೆ ವೀಣೆಯೇ ಕಾರಣ. ಆದರೆ ಶಂಖವು ಭಿನ್ನಕಾರಣ. ಹೀಗೆ ಭಿನ್ನ ಕಾರಣದಿಂದ ಕಾರ್ಯದ ಉತ್ಪತ್ತಿಯನ್ನು ವರ್ಣಿಸಿರುವುದರಿಂದ ಇದು ನಾಲ್ಕನೆಯ

ವಿಭಾವನಾಲಂಕಾರ. ಇಲ್ಲಿ ಕಾಮಿನಿಯ ಕಂಠವು ಶಂಖರೂಪದಿಂದಲೂ, ಅವಳ ಮಧುರಗಾನವು ವೀಣಾನಿನಾದರೂಪದಿಂದಲೂ ಅಧ್ಯವಸಿತವಾಗಿರುವುದರಿಂದ ವಿರೋಧ ಪರಿಹಾರ. ಅಂದರೆ 'ಶಂಖದಂತೆ ಸುಂದರವಾದ ಕಂಠದಿಂದ, ವೀಣಾಧ್ವನಿಯಂತೆ ಮಧುರವಾದ ಗಾನವು ಹೊರಹೊಮ್ಮುತ್ತಿದೆ' ಎಂದು ತಾತ್ಪರ್ಯ.

**೫. ವಿರುದ್ಧಾತ್ ಕಾರಣಾತ್ ಕಾರ್ಯೋತ್ಪತ್ತಿರೂಪಾ ವಿಭಾವನಾ**

> **ವಿರುದ್ಧಾತ್ ಕಾರ್ಯನಿಷ್ಪತ್ತಿರ್ದೃಷ್ಟಾ ಕಾಚಿದ್ವಿಭಾವನಾ ।**
> **ಶೀತಾಂಶುಕಿರಣಾಸ್ತನ್ವೀಂ ಹಂತ ಸಂತಾಪಯಂತಿ ತಾಂ ॥ ೭೭ ॥**

'ವಿರುದ್ಧಾತ್ (ಕಾರಣಾತ್) ಕಾರ್ಯ ನಿಷ್ಪತ್ತಿಃ (ಅಪಿ) ಕಾಚಿತ್ ವಿಭಾವನಾ ದೃಷ್ಟಾ'. ವಿರುದ್ಧವಾದ ಕಾರಣದಿಂದಲೂ ಕಾರ್ಯೋತ್ಪತ್ತಿಯ ವರ್ಣನೆಯೂ ಸಹ ಐದನೆಯ ವಿಭಾವನಾಲಂಕಾರವಾಗುತ್ತದೆ.

ಉದಾಹರಣೆ : 'ಶೀತಾಂಶುಕಿರಣಾಃ ತಾಂ ತನ್ವೀಂ ಸಂತಾಪಯಂತಿ, ಹಂತ'. 'ತಂಪು ಕಿರಣನಾದ ಚಂದ್ರನ ತಂಪುಕಿರಣಗಳೂ ಸಹ ಆ ಸುಂದರಿಯನ್ನು ಅಯ್ಯೋ! ಸಂತಾಪಗೊಳಿಸುತ್ತಿವೆ'. ಇಲ್ಲಿ ಸಂತಾಪಕಾರ್ಯಕ್ಕೆ ತಂಪುಕಿರಣಗಳು ವಿರುದ್ಧಕಾರಣ. ತಂಪುಕಿರಣಗಳಿಂದ ಶೀತವೇ ಆಗಬೇಕು. ಆದರೂ ವಿರುದ್ಧಕಾರಣದಿಂದ ಕಾರ್ಯೋತ್ಪತ್ತಿಯನ್ನು ವರ್ಣಿಸಿರುವುದರಿಂದ ಇದು ಐದನೆಯ ವಿಭಾವನಾಲಂಕಾರ. ಈ ತನ್ವಿಯು ಪತಿವಿರಹದಿಂದ ತಪ್ತಳಾಗಿರುವುದರಿಂದ, ಚಂದ್ರನ ತಂಪುಕಿರಣಗಳು ವಿರಹಕ್ಕೆ ಉದ್ದೀಪನಕಾರಣಗಳಾಗಿರುವುದರಿಂದ, ವಿರೋಧ ಪರಿಹಾರ.

**೬. ಕಾರ್ಯಾತ್ ಕಾರಣೋತ್ಪತ್ತಿರೂಪಾ ವಿಭಾವನಾ**

> **ಕಾರ್ಯಾತ್ ಕಾರಣಜನ್ಮಾಪಿ ದೃಷ್ಟಾ ಕಾಚಿದ್ವಿಭಾವನಾ ।**
> **ಯಶಃ ಪಯೋರಾಶಿರಭೂತ್ ಕರಕಲ್ಪತರೋಸ್ತವ ॥ ೭೭॥**

'ಕಾರ್ಯಾತ್ ಕಾರಣಜನ್ಮ ಅಪಿ ಕಾಚಿತ್ ವಿಭಾವನಾ ದೃಷ್ಟಾ' 'ಕಾರ್ಯದಿಂದ ಕಾರಣದ ಉತ್ಪತ್ತಿಯ ವರ್ಣನೆಯೂ ಸಹ ಆರನೆಯ ವಿಭಾವನಾಲಂಕಾರವಾಗುತ್ತದೆ' ವಸ್ತುತಃ ಲೋಕದಲ್ಲಿ ಕಾರಣದಿಂದಲೇ ಕಾರ್ಯದ ಉತ್ಪತ್ತಿ ಎಂಬುದು ಪ್ರಸಿದ್ಧವಷ್ಟೆ ! ಆದರೆ, ಇದಕ್ಕೆ ವಿಪರೀತವಾಗಿ ಕಾರ್ಯದಿಂದಲೇ ಕಾರಣದ ಉತ್ಪತ್ತಿಯ ವರ್ಣನೆ ಒಂದು ವಿಶಿಷ್ಟ ಚಮತ್ಕಾರವೇ ಆಗಿರುತ್ತದೆ.

ಉದಾಹರಣೆ : '(ಹೇ ರಾಜನ್) ತವ ಕರಕಲ್ಪತರೋಃ (ಸಕಾಶಾತ್) ಯಶಃ ಪಯೋರಾಶಿಃ ಅಭೂತ್ 'ಎಲೈ ರಾಜನೇ। ನಿನ್ನ ಕೈ ಎಂಬ ಕಲ್ಪತರುವಿನ ಮುಖಾಂತರ ಯಶಸ್ಸೆಂಬ ಸಮುದ್ರವು ಉಂಟಾಯಿತು'. ಕ್ಷೀರಸಾಗರದ ಮಥನದಿಂದ ಅನೇಕ ವಸ್ತುಗಳು ಹುಟ್ಟಿದವು. ಅವುಗಳಲ್ಲಿ ಕಲ್ಪವೃಕ್ಷವೂ ಒಂದು. ಆದ್ದರಿಂದ, ಸಮುದ್ರವು ಕಾರಣ. ಕಲ್ಪವೃಕ್ಷವು ಕಾರ್ಯವಾಯ್ತು. ಆದರೆ, ಈ ಉದಾಹರಣೆಯಲ್ಲಿ ಕಾರ್ಯರೂಪವಾದ ಕಲ್ಪವೃಕ್ಷದಿಂದಲೇ ಕಾರಣರೂಪವಾದ ಪಯೋರಾಶಿ ಸಂಭವಿಸಿತೆಂದು ವರ್ಣಿಸಿರುವುದರಿಂದ ಇದು ಆರನೆಯ ವಿಭಾವನಾಲಂಕಾರ. ಪ್ರಕೃತ ರಾಜನು ಕಲ್ಪತರುವಿಗಿಂತಲೂ

ಶ್ರೇಷ್ಠರೀತಿಯಲ್ಲಿ ಅರ್ಥಿಗಳ ಇಷ್ಟಾರ್ಥಗಳನ್ನು ನೆರವೇರಿಸುತ್ತಿದ್ದುದರಿಂದ, ಅವನ ಕೀರ್ತಿಯು ಸರ್ವತ್ರ ಹಬ್ಬಿತ್ತು ಎಂದು ತಾತ್ಪರ್ಯ. ಅಲ್ಲದೆ ಕೀರ್ತಿಯು ಶುಭ್ರವಾಗಿರುತ್ತದೆಂಬುದು ಕವಿಸಮಯವಾದ್ದರಿಂದ, ದಾನಶೀಲತೆಯಿಂದ ಕೀರ್ತಿಯೆಂಬ ಕ್ಷೀರಸಾಗರ ಹರಡಿತ್ತು ಎಂಬುದು ಸಮುಚಿತವೇ ಆಗುತ್ತದೆ.

## ೩೫. ವಿಶೇಷೋಕ್ತ್ಯಲಂಕಾರಃ

ಕಾರಣದಿಂದ ಕಾರ್ಯೋತ್ಪತ್ತಿಯಾಗುವುದು ಸಹಜವಷ್ಟೆ। ಆದರೆ ಕಾರ್ಯೋತ್ಪತ್ತಿಗೆ ಸಾಕಷ್ಟು ಕಾರಣವಿದ್ದರೂ ಕಾರ್ಯೋತ್ಪತ್ತಿಯೇ ಆಗಲಿಲ್ಲವೆಂದು ವರ್ಣಿತವಾದಲ್ಲಿ ಅದು ವಿಶೇಷೋಕ್ತಿ ಯಾಗುತ್ತದೆ.

> ಕಾರ್ಯಾಜನಿರ್ವಿಶೇಷೋಕ್ತಿಃ ಸತಿ ಪುಷ್ಕಲಕಾರಣೇ।
> ಹೃದಿ ಸ್ನೇಹಕ್ಷಯೋ ನಾಭೂತ್ ಸ್ಮರದೀಪೇ ಜ್ವಲತ್ಯಪಿ ॥ ೭೮ ॥

'ಪುಷ್ಕಲಕಾರಣೇ ಸತಿ (ಅಪಿ) ಕಾರ್ಯಾಜನಿಃ ವಿಶೇಷೋಕ್ತಿಃ (ಅಲಂಕಾರಃ)'. 'ಕಾರ್ಯೋತ್ಪತ್ತಿಗೆ ಸಾಕಷ್ಟು ಕಾರಣವಿದ್ದರೂ ಕಾರ್ಯೋತ್ಪತ್ತಿಯಾಗದೇ ಇದ್ದಲ್ಲಿ ಅದು ವಿಶೇಷೋಕ್ತ್ಯಲಂಕಾರವಾಗುತ್ತದೆ'.

**ಉದಾಹರಣೆ : ಸ್ಮರದೀಪೇ ಜ್ವಲತಿ (ಸತಿ) ಅಪಿ, ಹೃದಿ ಸ್ನೇಹಕ್ಷಯಃ ನ ಅಭೂತ್'. ಕಾಂತೆಯೇ!** ಹೃದಯದಲ್ಲಿ ಮನ್ಮಥನೆಂಬ ದೀಪವು ಉರಿಯುತ್ತಿದ್ದರೂ ಸ್ನೇಹದ ಅಂದರೆ ತೈಲದ ನಾಶ ವಾಗಲಿಲ್ಲ'. ಇಲ್ಲಿ ದೀಪಜ್ವಲನದಿಂದ ತೈಲನಾಶವಾಗಬೇಕಾಗಿತ್ತು. ತೈಲನಾಶರೂಪಕಾರ್ಯಕ್ಕೆ ದೀಪಜ್ವಲನರೂಪ ಕಾರ್ಯವು ಪರ್ಯಾಪ್ತವೇ ಆಗಿದ್ದರೂ, ತೈಲನಾಶರೂಪ ಕಾರ್ಯವಾಗಲಿಲ್ಲ- ಎಂದು ವರ್ಣಿಸಿರುವುದರಿಂದ ಇದು ವಿಶೇಷೋಕ್ತ್ಯಲಂಕಾರ. ಈ ನಾಯಿಕೆಯು ಅತ್ಯಂತ ವಿರಹ ತಪ್ತೆಯಾಗಿರುವುದರಿಂದ, ಇವಳ ಹೃದಯದಲ್ಲಿ ಮನ್ಮಥನ ಆವೇಗ ಅತ್ಯಂತವಾಗಿದ್ದು, ಪ್ರಿಯನ ವಿಷಯಕವಾದ ಸ್ನೇಹವು ಅಂದರೆ ಪ್ರೀತಿಯು ಇನ್ನೂ ಹೆಚ್ಚಾಗುತ್ತಿತ್ತು ಎಂದು ವಿರೋಧಕ್ಕೆ ಪರಿಹಾರ.

## ೩೬. ಅಸಂಭವಾಲಂಕಾರಃ

ಊಹಿಸಲು ಸಾಧ್ಯವೇ ಇಲ್ಲದಂತಹ ಕಾರ್ಯವು ಸಂಭವವಾದಲ್ಲಿ ಅದನ್ನು ಅಸಂಭವಾಲಂಕಾರ ವೆಂದು ಕರೆಯಲಾಗುತ್ತದೆ.

> ಅಸಂಭವೋಽರ್ಥನಿಷ್ಪತ್ತೇರಸಂಭಾವ್ಯತ್ವವರ್ಣನಮ್ ।
> ಕೋ ವೇದ ಗೋಪಶಿಶುಕಃ ಶೈಲಮುತ್ಪಾಟಯೇದಿತಿ ॥ ೭೯ ॥

ಅರ್ಥನಿಷ್ಪತ್ತೇಃ ಅಸಂಭಾವ್ಯತ್ವವರ್ಣನಂ ಅಸಂಭವಃ (ಇತ್ಯಲಂಕಾರಃ)' 'ಕಾರ್ಯದ ಸಿದ್ಧಿಯು ಅತ್ಯಂತ ಅಸಂಭವ - ಎಂಬ ರೀತಿಯಿಂದ ವರ್ಣಿತವಾದರೆ ಅದು ಅಸಂಭವಾಲಂಕಾರ'. ಅಂದರೆ, ಒಂದು ಕಾರ್ಯದ ಸಿದ್ಧಿಯು ಆಗಿದೆಯೆಂದು ಪರಿಭಾವಿಸಲು ಸಾಧ್ಯವೇ ಇಲ್ಲ, ಎನ್ನುವ ರೀತಿಯ ವರ್ಣನೆ ಎಂದು ತಾತ್ಪರ್ಯ.

ಉದಾಹರಣೆ : ಗೋಪಶಿಶುಕಃ ಶೈಲಂ ಉತ್ಪಾಟಯೇತ್ ಇತಿ ಕಃ ವೇದ? 'ಚಿಕ್ಕ ಗೋಪ ಬಾಲಕನಾದ ಕೃಷ್ಣನು ಗೋವರ್ಧನಪರ್ವತವನ್ನು ಬುಡಸಹಿತ ಕಿತ್ತು ಎತ್ತಬಲ್ಲನೆಂದು ಯಾರು ತಾನೆ ತಿಳಿಯಲು ಸಾಧ್ಯ?' ಇಲ್ಲಿ ಗೋಪಬಾಲಕನಿಂದಾದ ಶೈಲೋದ್ಧಾರವನ್ನು ಯಾರು ತಾನೆ ಸಂಭಾವಿಸಲು ಸಾಧ್ಯ? - ಎಂದು ವರ್ಣಿಸಿರುವುದರಿಂದ ಇದು ಅಸಂಭವಾಲಂಕಾರ.

## ೩೭. ಅಸಂಗತ್ಯಲಂಕಾರಃ (ತದ್ಭೇದಾಃ)

ಕಾರಣ-ಕಾರ್ಯಗಳು ಪರಸ್ಪರ ವಿರುದ್ಧಗಳೂ, ಭಿನ್ನಾಶ್ರಯಗಳೂ ಆದಲ್ಲಿ ಅಸಂಗತ್ಯಲಂಕಾರ ವಾಗುತ್ತದೆ. ಇದು 1. ಕಾರ್ಯಹೇತ್ವೋಃ ಭಿನ್ನದೇಶತ್ವರೂಪಾ ಅಸಂಗತಿಃ 2. ಏಕತ್ರ ಕರ್ತವ್ಯಸ್ಯ ಅನ್ಯತ್ರ ಕೃತಿರೂಪಾ ಅಸಂಗತಿಃ 3. ಅನ್ಯತ್ ಚಿಕೀರ್ಷೋಃ ತದ್ವಿರುದ್ಧಕೃತಿರೂಪಾ ಅಸಂಗತಿಃ ಎಂದು ಮೂರು ವಿಧ.

### ೧. ಕಾರ್ಯಹೇತ್ವೋಃ ಭಿನ್ನದೇಶತ್ವರೂಪಾ ಅಸಂಗತಿಃ

> ವಿರುದ್ಧಂ ಭಿನ್ನದೇಶತ್ವಂ ಕಾರ್ಯಹೇತ್ವೋರಸಂಗತಿಃ|
> ವಿಷಂ ಜಲಧರೈಃ ಪೀತಂ ಮೂರ್ಛಿತಾಃ ಪಥಿಕಾಂಗನಾಃ || ೮೦ ||

'(ಯಯೋಃ) ಕಾರ್ಯಹೇತ್ವೋಃ ಭಿನ್ನದೇಶತ್ವಂ ವಿರುದ್ಧಂ (ಸತ್ ವರ್ಣ್ಯತೇ) ಸಃ ಅಸಂಗತಿಃ (ಇತ್ಯಲಂಕಾರಃ)'. 'ಕಾರ್ಯಕಾರಣಗಳಿಗೆ ಭಿನ್ನ ಭಿನ್ನ ಆಶ್ರಯತ್ವವು ವಿರುದ್ಧವಾಗಿ ವರ್ಣಿತ ವಾದುದಾದರೆ, ಅದು ಅಸಂಗತ್ಯಲಂಕಾರ'.

ಉದಾಹರಣೆ : ವಿಷಧರೈಃ = ಮೇಘೈಃ, ವಿಷಂ = ಜಲಂ, ಕಾಲಕೂಟಶ್ಚ ಪೀತಂ, ಪಥಿಕಾಂಗನಾಃ ಮೂರ್ಛಿತಾಃ - 'ಮೇಘಗಳು ಜಲಪಾನ (ವಿಷಪಾನ) ಮಾಡಿದವು; ಆದರೆ ವಿರಹಿಜನರ ಸ್ತ್ರೀಯರು ಮೂರ್ಛೆ ಹೊಂದಿದರು' - ಇಲ್ಲಿ ವಿಷಪಾನ, ಮೂರ್ಛೆಗಳೆಂಬ ಕಾರಣಕಾರ್ಯಗಳಿಗೆ ವಿರುದ್ಧವಾದ ಭಿನ್ನದೇಶತ್ವವು ವರ್ಣಿತವಾಗಿರುವುದರಿಂದ ಮೊದಲನೆಯ ಅಸಂಗತ್ಯಲಂಕಾರ. ಇದು ವರ್ಷಾಕಾಲದ ವರ್ಣನೆಯಾಗಿರುವುದರಿಂದ, ವರ್ಷಾಕಾಲದ ಪ್ರಾರಂಭವಾದರೂ ತಮ್ಮ ತಮ್ಮ ಪತಿಯರು ಹಿಂತಿರುಗಿಬರಲಿಲ್ಲವೆಂದು, ವಿರಹೋದ್ದೀಪಕವಾದ ನೀಲಮೇಘರಾಶಿಯನ್ನು ನೋಡಿದ ವಿರಹತಪ್ತಕಾಂತೆಯರು ಮೂರ್ಛೆಗೊಂಡರು ಎಂದು ತಾತ್ಪರ್ಯ. ವಿಷ ಪದದಲ್ಲಿನ ಶ್ಲೇಷಮೂಲಕ ಅಭೇದಾಧ್ಯವಸಾಯದಿಂದಾಗಿ, 'ಮೇಘಗಳು ಜಲವೆಂಬ ಕಾಲಕೂಟವನ್ನು ಪಾನ ಮಾಡಲಾಗಿ, ಪಥಿಕ ಸ್ತ್ರೀಯರು ಮೂರ್ಛೆಗೊಂಡರು' - ಎಂಬ ಅರ್ಥವು ಪ್ರತೀತವಾಗುತ್ತದೆ. ವಸ್ತುತಃ ಲೋಕದಲ್ಲಿ ವಿಷಪಾನಮಾಡುವವನಿಗೆ ಮಾತ್ರ ಮೂರ್ಛೆ ಸ್ವಾಭಾವಿಕ. ಇದು ಸಮಾನದೇಶತ್ವ. ಆದರೆ ವಿಷಪಾನರೂಪ ಕಾರಣ. ಮೂರ್ಛಾರೂಪ ಕಾರ್ಯಗಳಿಗೆ ವಿರುದ್ಧಭಿನ್ನದೇಶತ್ವವು ವರ್ಣಿತವಾಗಿರುವುದರಿಂದ ಅಸಂಗತ್ಯಲಂಕಾರ.

೨.ಏಕತ್ರ ಕರಣೀಯಸ್ಯ ಅನ್ಯತ್ರಕೃತಿರೂಪಾ ಅಸಂಗತಿಃ

ಅನ್ಯತ್ರ ಕರಣೀಯಸ್ಯ ತತೋಽನ್ಯತ್ರ ಕೃತಿಶ್ಚ ಸಾ ।
ಅಪಾರಿಜಾತಾಂ ವಸುಧಾಂ ಚಿಕೀರ್ಷನ್ ದ್ಯಾಂ ತಥಾಕರೋಃ ||೮೧||

'ಅನ್ಯತ್ರ ಕರಣೀಯಸ್ಯ ತಸ್ಮಾತ್- ಉಚಿತದೇಶಾತ್, ಅನ್ಯತ್ರ ಅನುಚಿತಸ್ಥಲೇ ಕೃತಿಃ ಚ, ಸಾ (ಅನ್ಯಾ ಅಸಂಗತಿಃ)'. 'ಒಂದು ಸ್ಥಳದಲ್ಲಿ ಮಾಡಬಯಸಿದ ಕಾರ್ಯವನ್ನು, ಆ ಸ್ಥಳವನ್ನು ಬಿಟ್ಟು ಬೇರೆ ಸ್ಥಳದಲ್ಲಿ ಮಾಡಿದಂತೆ ಆದ ವರ್ಣನೆಯು ಎರಡನೆಯ ಅಸಂಗತ್ಯಲಂಕಾರ'.

ಉದಾಹರಣೆ : '(ಹೇ ಕೃಷ್ಣ) ವಸುಧಾಂ ಅಪಾರಿಜಾತಾಂ ಚಿಕೀರ್ಷನ್ ದ್ಯಾಂ ತಥಾ (ಅಪಾರಿ ಜಾತಾಂ) ಅಕರೋಃ' - 'ಎಲೈ ಕೃಷ್ಣನೇ, ನೀನು ಭೂಮಿಯನ್ನು ಅಪಾರಿಜಾತವನ್ನಾಗಿ ಮಾಡ ಬಯಸಿ, ಬದಲಾಗಿ ಸ್ವರ್ಗವನ್ನು ಅಪಾರಿಜಾತವನ್ನಾಗಿ ಮಾಡಿದೆ'. ಇಲ್ಲಿ ಅಪಾರಿಜಾತತ್ವಕ್ರಿಯೆ ಭೂಮಿಯಲ್ಲಿ ಆಗಬೇಕಾಗಿತ್ತು. ಬದಲಾಗಿ ಸ್ವರ್ಗದಲ್ಲಿ ಈ ಅಪಾರಿಜಾತತ್ವ ಕಾರ್ಯವಾಗಿರುವುದ ರಿಂದ, ಇದು ಎರಡನೆಯ ಅಸಂಗತ್ಯಲಂಕಾರ. ಕೃಷ್ಣನನ್ನು ಕುರಿತು ಇಂದ್ರನು ಹೇಳುವ ಮಾತು. ಅಪಾರಿಜಾತತ್ವ ಪದದಲ್ಲಿ 1. ಅಪಗತ ಅರಿಜಾತತ್ವ = ಸಂಪೂರ್ಣ ನಾಶಗೊಳಿಸಲ್ಪಟ್ಟ ಶತ್ರು ಸಮುದಾಯತ್ವ 2. ಪಾರಿಜಾತರಹಿತತ್ವ - ಸ್ವರ್ಗದಲ್ಲಿದ್ದ ಪಾರಿಜಾತ ವೃಕ್ಷವನ್ನು ತೆಗೆದುಕೊಂಡು ಬಂದು ಕೃಷ್ಣನು ಭೂಮಿಯಲ್ಲಿ ಇಟ್ಟನಾದ್ದರಿಂದ ಸ್ವರ್ಗವು ಪಾರಿಜಾತವೃಕ್ಷರಹಿತವಾಯ್ತು, ಎಂಬ ಈ ಶ್ಲೇಷೆಯಿಂದ ವಿರೋಧಪರಿಹಾರ.

೩.ಅನ್ಯತ್ ಚಿಕೀರ್ಷೋಃ ತದ್ವಿರುದ್ಧಕೃತಿರೂಪಾ ಅಸಂಗತಿಃ

ಅನ್ಯತ್ ಕರ್ತುಂ ಪ್ರವೃತ್ತಸ್ಯ ತದ್ವಿರುದ್ಧಕೃತಿಶ್ಚ ಸಾ ।
'ಗೋತ್ರೋದ್ಧಾರಪ್ರವೃತ್ತೋಽಪಿ ಗೋತ್ರೋದ್ಭೇದಂ ಪುರಾಕರೋಃ || ೮೨ ||

'ಅನ್ಯತ್ ಕರ್ತುಂ ಪ್ರವೃತ್ತಸ್ಯ ತದ್ವಿರುದ್ಧಕೃತಿಃ ಚ ಸಾ (ಅಸಂಗತಿಃ)'. 'ಒಂದು ಕಾರ್ಯವನ್ನು ಮಾಡಬಯಸಿ, ಅದಕ್ಕೆ ವಿರುದ್ಧವಾದ ಕಾರ್ಯವನ್ನೇ ಮಾಡಿದಂತೆ ವರ್ಣಿಸಿದ್ದಾದರೆ ಅದು ಮೂರನೆಯ ಅಸಂಗತ್ಯಲಂಕಾರ'. '(ಹೇ ಕೃಷ್ಣ) ಗೋತ್ರೋದ್ಧಾರಪ್ರವೃತ್ತಃ ಅಪಿ, (ತ್ವಂ) ಪುರಾ ಗೋತ್ರೋದ್ಭೇದಂ ಅಕರೋಃ'. ಇಂದ್ರನು ಕೃಷ್ಣನನ್ನು ಕುರಿತು ಹೀಗೆ ಹೇಳುತ್ತಿರುವುದು. 'ಎಲೈ ಕೃಷ್ಣನೇ! ನೀನು ಗೋತ್ರೋದ್ಧಾರದಲ್ಲಿ ತೊಡಗಿದವನಾದರೂ ಗೋತ್ರೋದ್ಭೇದವನ್ನೇ ಹಿಂದೆ ಮಾಡಿದೆ' ಎಂಬ ಈ ಉದಾಹರಣೆಯಲ್ಲಿ ಗೋತ್ರೋದ್ಧಾರದಲ್ಲಿ ತೊಡಗಿ, ಇದಕ್ಕೆ ವಿರುದ್ಧವಾದ ಗೋತ್ರದ ಉದ್ಭೇದವನ್ನೇ ಮಾಡಿರುವಿಕೆ- ಎಂದು ವರ್ಣಿತವಾಗಿರುವುದರಿಂದ ಇದು ಮೂರನೆಯ ಅಸಂಗತ್ಯಲಂಕಾರ.ಇಲ್ಲಿ ಗೋತ್ರ ಶಬ್ದಕ್ಕೆ 1. ಗೋತ್ರೋದ್ಧಾರ ಎಂಬಲ್ಲಿ 'ಗೋತ್ರಾಯಾಃ = ಉರ್ವ್ಯಾಃ ಉದ್ಧಾರಃ ಎಂದೂ, 2. ಗೋತ್ರಾಣಾಂ ಉದ್ಭೇದಂ - ಪರ್ವತಾನಾಂ ವರಾಹಾವತಾರೇ ಖುರಘಟ್ಟನೈಃ ದಲನಂ - ಎಂದೂ ಶ್ಲೇಷದಿಂದ ಅರ್ಥವನ್ನು ಪರಿಗ್ರಹಿಸಿ ವಿರೋಧಪರಿಹಾರ ಮಾಡಿಕೊಳ್ಳಬೇಕು.

## ೩೮. ವಿಷಮಾಲಂಕಾರಃ (ತದ್ಭೇದಾಃ)

ಪರಸ್ಪರ ಅನನುರೂಪವಲ್ಲದ ವಸ್ತುಗಳ ಏಕತ್ರ ಯೋಜನೆಯು ಈ ವಿಷಮಾಲಂಕಾರ ವಾಗುತ್ತದೆ. ಇದೂ ಸಹ 1. ಅನುರೂಪಘಟನಾರೂಪ ವಿಷಮಾಲಂಕಾರಃ 2. ವಿರೂಪ ಕಾರ್ಯೋತ್ಪತ್ತಿರೂಪ ವಿಷಮಾಲಂಕಾರಃ 3. ಇಷ್ಟಾರ್ಥೋದ್ಯಮಾತ್ ಅನಿಷ್ಟಾವಾಪ್ತಿರೂಪ ವಿಷಮಾಲಂಕಾರಃ ಎಂದು ಮೂರು ವಿಧವಾಗಿರುತ್ತದೆ.

### ೧. ಅನನುರೂಪ ಘಟನಾರೂಪ ವಿಷಮಾಲಂಕಾರಃ

ವಿಷಮಂ ವರ್ಣ್ಯತೇ ಯತ್ರ ಘಟನಾನನುರೂಪಯೋಃ ।
ಕ್ವೇಯಂ ಶಿರೀಷ ಮೃದ್ವಂಗೀ ? ಕ್ವ ತಾದೃಜ್ ಮದನ ಜ್ವರಃ ? ॥ ೮೩ ॥

'ಯತ್ರ ಅನನುರೂಪಯೋಃ ಘಟನಾ ವರ್ಣ್ಯತೇ (ತತ್) ವಿಷಮಂ (ಇತ್ಯಲಂಕಾರಃ)'. 'ಪರಸ್ಪರ ಅನುರೂಪವಲ್ಲದ ಎರಡು ವಸ್ತುಗಳ ಏಕತ್ರವರ್ಣನೆಯು ಮೊದಲನೆಯ ವಿಷಮಾಲಂಕಾರ'.

**ಉದಾಹರಣೆ** : 'ಇಯಂ ಶಿರೀಷಮೃದ್ವಂಗೀ ಕ್ವ? ತಾದೃಕ್ ಮದನಜ್ವರಃ ಕ್ವ ?'. - 'ಶಿರೀಷ ಕುಸುಮದಂತೆ ಅತ್ಯಂತ ಕೋಮಲವಾದ ಈ ನಾಯಿಕೆಯ ಶರೀರವೆಲ್ಲಿ ? ಇದನ್ನು ಬಾಧಿಸುತ್ತಿರುವ ಅತ್ಯಂತ ಕಠೋರವಾದ ಮನ್ಮಥಜ್ವರವೆಲ್ಲಿ? - ಈ ಎರಡೂ ಪರಸ್ಪರ ಅನನುರೂಪಗಳಾಗಿದ್ದು, ಇವುಗಳ ಘಟನೆಯನ್ನು ವರ್ಣಿಸಿರುವುದರಿಂದ, ಇದು ಮೊದಲನೆಯ ವಿಷಮಾಲಂಕಾರ. ಶರೀರವು ಅತಿ ಮೃದು, ಜ್ವರವು ಅತಿ ದುಃಸಹವಾದ್ದರಿಂದ ಪರಸ್ಪರ ಅನನುರೂಪತ್ವ- ಎಂದು ಭಾವಿಸಬೇಕು.

### ೨. ವಿರೂಪಕಾರ್ಯೋತ್ಪತ್ತಿರೂಪ ವಿಷಮಾಲಂಕಾರಃ

ವಿರೂಪಕಾರ್ಯಸ್ಯೋತ್ಪತ್ತಿರಪರಂ ವಿಷಮಂ ಮತಮ್ ।
ಕೀರ್ತಿಂ ಪ್ರಸೂತೇ ಧವಲಾಂ ಶ್ಯಾಮಾ ತವ ಕೃಪಾಣಿಕಾ ॥ ೮೪ ॥

'ವಿರೂಪಕಾರ್ಯಸ್ಯ ಉತ್ಪತ್ತಿಃ ಅಪರಂ ವಿಷಮಂ ಮತಂ'. 'ಕಾರಣವಿರುದ್ಧವಾದ ಕಾರ್ಯದ ಉತ್ಪತ್ತಿಯು ವರ್ಣಿತವಾದರೆ ಅದು ಎರಡನೆಯ ವಿಷಮಾಲಂಕಾರವಾಗುತ್ತದೆ'.

**ಉದಾಹರಣೆ** : (ಹೇ ರಾಜನ್) ತವ ಶ್ಯಾಮಾ ಕೃಪಾಣಿಕಾ ಧವಲಾಂ ಕೀರ್ತಿಂ ಪ್ರಸೂತೇ'. 'ಎಲೈ ರಾಜನೇ, ನಿನ್ನ ಕಪ್ಪಾದ ಖಡ್ಗವು ಶುಭ್ರವಾದ ಕೀರ್ತಿಯನ್ನು ಉಂಟು ಮಾಡುತ್ತಿದೆ' ಇಲ್ಲಿ ಕಾರಣ ಕಪ್ಪುಖಡ್ಗ, ಕಾರ್ಯ ಶುಭ್ರಕೀರ್ತಿ. ಹೀಗೆ ಕಾರಣವಿರುದ್ಧವಾದ ಕಾರ್ಯದ ಉತ್ಪತ್ತಿ ಇರುವುದರಿಂದ ಎರಡನೆಯ ವಿಷಮಾಲಂಕಾರ. ಕಾರಣದ ಗುಣವನ್ನೇ ಕಾರ್ಯವೂ ಹೊಂದಿರುತ್ತದೆಂಬುದು ಲೋಕದ ನಿಯಮ. ಆದರೆ, ಇಲ್ಲಿ ಶ್ಯಾಮಖಡ್ಗರೂಪ ಕಾರಣದಿಂದ ತದ್ವಿರುದ್ಧವಾದ ಧರ್ಮವುಳ್ಳ ಶುಭ್ರಕೀರ್ತಿಯ ಜನನ ಎರಡನೆಯ ವಿಷಮಾಲಂಕಾರ. ತಾತ್ಪರ್ಯವೆಂದರೆ ರಾಜನ ಭಯಂಕರ ಖಡ್ಗವು ಶತ್ರುಗಳ ಸಂಹಾರದಿಂದಾಗಿ ರಾಜನ ಕೀರ್ತಿಯನ್ನು ಸರ್ವತ್ರ ಹಬ್ಬಿಸಿದೆ ಎಂದು ಪರಿಹಾರ.

೩. ಇಷ್ಟಾರ್ಥೋದ್ಯಮಾತ್ ಅನಿಷ್ಟಾವಾಪ್ತಿರೂಪ ವಿಷಮಾಲಂಕಾರಃ

ಅನಿಷ್ಟಸ್ಯಾಪ್ಯವಾಪ್ತಿಶ್ಚ ತದಿಷ್ಟಾರ್ಥಸಮುದ್ಯಮಾತ್ ।
ಭಕ್ಷ್ಯಾಶಯಾ ಹಿ ಮಂಜೂಷಾಂ ದಷ್ಟ್ವಾಖುಸ್ತೇನ ಭಕ್ಷಿತಃ ||೮೫||

'ಇಷ್ಟಾರ್ಥ ಸಮುದ್ಯಮಾತ್ ಅನಿಷ್ಟಸ್ಯ ಅವಾಪ್ತಿಃ ಅಪಿ ಚ ತತ್ (ವಿಷಮಂ)' 'ಅಭಿಲಷಿತವಾದ ಕಾರ್ಯಕ್ಕಾಗಿ ತೊಡಗಿ ಅದರಿಂದ ಕೇವಲ ಅನಿಷ್ಟವನ್ನೇ ಹೊಂದುವುದೂ ಸಹ ಮೂರನೆಯ ವಿಷಮಾಲಂಕಾರ. ಅಂದರೆ ಇತ್ತ ತನ್ನ ಇಷ್ಟಾರ್ಥದ ಪ್ರಾಪ್ತಿಯೂ ಇಲ್ಲ. ಜತೆಗೆ ಅನಿಷ್ಟದ ಪ್ರಾಪ್ತಿ ಎಂಬುದು ಈ ಭೇದದ ಮರ್ಮ.

ಉದಾಹರಣೆ : 'ಆಖುಃ ಭಕ್ಷ್ಯಾಶಯಾ ಅಹಿಮಂಜುಷಾಂ ದಷ್ಟ್ವಾ, ತೇನ ಭಕ್ಷಿತಃ'. 'ಇಲಿಯು ತಿಂಡಿಯಿದೆ ಎಂಬ ಆಸೆಯಿಂದ ಸರ್ಪದ ಪೆಟ್ಟಿಗೆಯನ್ನು ಕಚ್ಚಿ, ಅದರೊಳಗಿದ್ದ ಸರ್ಪದಿಂದ ತಾನೇ ಭಕ್ಷಿತವಾಯ್ತು'. ಈ ಉದಾಹರಣೆಯಲ್ಲಿ ಭಕ್ಷ್ಯವನ್ನು ತಿನ್ನುವ ಆಸೆಯಿಂದ ಕಾರ್ಯ ಪ್ರವೃತ್ತವಾದ ಇಲಿಗೆ, ತನ್ನ ಇಷ್ಟಾರ್ಥವೂ ತನಗೆ ಆಗಲಿಲ್ಲ. ಬದಲಾಗಿ ತನ್ನ ಪ್ರಾಣಹಾನಿ ರೂಪವಾದ ಅನಿಷ್ಟವೇ ಪ್ರಾಪ್ತವಾಯ್ತೆಂದು ವರ್ಣಿಸಿರುವುದರಿಂದ ಇದು ಮೂರನೆಯ ವಿಷಮಾಲಂಕಾರ.

## ೩೯. ಸಮಾಲಂಕಾರಃ (ತದ್ಭೇದಾಃ)

ವಿಷಮಾಲಂಕಾರಕ್ಕೆ ಪ್ರತಿದ್ವಂದ್ವಿಯಾದ ಅಲಂಕಾರವಿದು. ಪರಸ್ಪರ ಅನುರೂಪವಸ್ತುಗಳ ಘಟನೆಯು ವರ್ಣಿತವಾದರೆ ಅದು ಸಮಾಲಂಕಾರ. ಇದೂ ಸಹ 1. ಅನುರೂಪವರ್ಣನ ರೂಪ ಸಮಾಲಂಕಾರಃ 2. ಕಾರಣಸಾರೂಪ್ಯವರ್ಣನರೂಪ ಸಮಾಲಂಕಾರಃ 3. ಅಕ್ಲೇಶೇನ ಕಾರ್ಯಸಿದ್ಧಿ ವರ್ಣನರೂಪ ಸಮಾಲಂಕಾರಃ ಎಂದು ಮೂರು ವಿಧವಾಗಿರುತ್ತದೆ.

೧. ಅನುರೂಪವರ್ಣನರೂಪ ಸಮಾಲಂಕಾರಃ

ಸಮಂ ಸ್ಯಾದ್ವರ್ಣನಂ ಯತ್ರ ದ್ವಯೋರಪ್ಯನುರೂಪಯೋಃ ।
ಸ್ವಾನುರೂಪಂ ಕೃತಂ ಸದ್ಮ ಹಾರೇಣ ಕುಚಮಂಡಲಂ || ೮೬ ||

'ಯತ್ರ ಅನುರೂಪಯೋಃ ದ್ವಯೋಃ ಅಪಿ ವರ್ಣನಂ(ತತ್) ಸಮಂ (ಇತಿ ಅಲಂಕಾರಃ) ಸ್ಯಾತ್' 'ಪರಸ್ಪರ ಅನುರೂಪವಾದ ಎರಡು ವಸ್ತುಗಳ ವರ್ಣನೆ ಅಥವಾ ಎರಡು ವಸ್ತುಗಳ ಪರಸ್ಪರ ಅನುರೂಪತ್ವ ವರ್ಣನೆ ಮೊದಲನೆಯ ಸಮಾಲಂಕಾರ'.

ಉದಾಹರಣೆ : 'ಹಾರೇಣ ಕುಚಮಂಡಲಂ ಸ್ವಾನುರೂಪಂ ಸದ್ಮ ಕೃತಂ' 'ಹಾರವು ಕುಚಮಂಡಲ ದಲ್ಲಿ ತನಗನುರೂಪವಾದ ಸ್ಥಾನವನ್ನು ಹೊಂದಿದೆ.' ಇಲ್ಲಿ ಹಾರ ಮತ್ತು ಕುಚಮಂಡಲಗಳ ಪರಸ್ಪರ ಸಾರೂಪ್ಯವರ್ಣನೆ ಇರುವುದರಿಂದ ಇದು ಮೊದಲನೆಯ ಸಮಾಲಂಕಾರ.

೨. ಕಾರಣಸಾರೂಪ್ಯವರ್ಣನರೂಪ ಸಮಾಲಂಕಾರಃ

> ಸಾರೂಪ್ಯಮಪಿ ಕಾರ್ಯಸ್ಯ ಕಾರಣೇನ ಸಮಂ ವಿದುಃ ।
> ನೀಚಪ್ರವಣತಾ ಲಕ್ಷ್ಮಿ ಜಲಜಾಯಾಸ್ತವೋಚಿತಾ ॥ ೮೭ ॥

'ಕಾರ್ಯಸ್ಯ ಕಾರಣೇನ (ಸಾಕಂ) ಸಾರೂಪ್ಯಂ ಅಪಿ ಸಮಂ (ಅಲಂಕಾರಂ) ವಿದುಃ'. 'ಕಾರಣ ಮತ್ತು ಕಾರ್ಯಗಳ ಅನುರೂಪತೆಯ ವರ್ಣನೆಯೂ ಸಹ ಎರಡನೆಯ ಸಮಾಲಂಕಾರ'.

**ಉದಾಹರಣೆ :** 'ಹೇ ಲಕ್ಷ್ಮಿ, ಜಲಜಾಯಾಃ ತವ ನೀಚಪ್ರವಣತಾ ಉಚಿತಾ' 'ಎಲೌ ಲಕ್ಷ್ಮಿಯೇ, ಸಮುದ್ರದಲ್ಲಿ ಹುಟ್ಟಿದ ನಿನಗೆ ನೀಚಪ್ರವಣತ್ವವು ಯೋಗ್ಯವೇ ಆದುದು'. ನೀಚ ಪ್ರವಣತ್ವ= 1. ನಿಕೃಷ್ಟ ಜನರನ್ನು ಅನುಸರಿಸುವಿಕೆ 2. ತಗ್ಗಾದ ಪ್ರದೇಶದೆಡೆಗೇ ಹರಿಯುವಿಕೆ. ಜಲವು ತಗ್ಗು ಪ್ರದೇಶಕ್ಕೆ ಹರಿಯುವುದು (ನೀಚ ಪ್ರಾವಣ್ಯ) ಸ್ವಾಭಾವಿಕವೇ ಆಗಿರುವುದರಿಂದ, ನೀರಿನಲ್ಲಿಯೇ ಹುಟ್ಟಿದ ಲಕ್ಷ್ಮಿಗೂ ಸಹ 'ಕಾರಣಗುಣಾಃ ಕಾರ್ಯೇ ಸಂಕ್ರಾಮಂತಿ' (ಕಾರಣದ ಗುಣಗಳು ಕಾರ್ಯದಲ್ಲಿಯೂ ಸಂಗಮಿಸುತ್ತವೆ) ಎಂಬಂತೆ, ನೀಚಪ್ರಾವಣ್ಯವು ಸಹಜವಾದುದು ಎಂದು ವರ್ಣಿಸಿರುವುದರಿಂದ, ಕಾರಣ - ಕಾರ್ಯಗಳ ಸಾನುರೂಪತೆಯಿರುವುದರಿಂದ ಇದು ಎರಡನೆಯ ಸಮಾಲಂಕಾರ. ಅಂದರೆ, ಲಕ್ಷ್ಮಿಯು ಕೇವಲ ನೀಚಜನಸಾಂಗತ್ಯವುಳ್ಳವಳು, ಜಲವು ಕೇವಲ ತಗ್ಗುಪ್ರದೇಶದಲ್ಲಿಯೇ ಹರಿಯುವಂತೆ - ಎಂದು ಶ್ಲೇಷಮೂಲಕ ಅಭೇದಾಧ್ಯವಸಾನದಿಂದ ಲಕ್ಷ್ಮಿಯಲ್ಲಿ ಕಾರಣಗುಣದ ಸಾರೂಪ್ಯವರ್ಣನೆ - ಎಂದು ತಿಳಿಯಬೇಕು.

೩. ಅಕ್ಲೇಶೇನ ಕಾರ್ಯಸಿದ್ಧಿವರ್ಣನರೂಪ ಸಮಾಲಂಕಾರಃ

> ವಿನಾನಿಷ್ಟಂ ಚ ತತ್ಸಿದ್ಧಿರ್ಯದರ್ಥಂ ಕರ್ತುರುದ್ಯಮಃ ।
> ಯುಕ್ತೋ ವಾರಣಲಾಭೋಽಯಂ ಸ್ಯಾಲ ತೇ ವಾರಣಾರ್ಥಿನಃ ॥ ೮೮ ॥

'ಯದರ್ಥಂ ಕರ್ತುಃ ಉದ್ಯಮಃ ಅನಿಷ್ಟಂ ವಿನಾ ತತ್ಸಿದ್ಧಿಃ ಚ (ಸಮಂ)'. 'ಯಾವ ಪ್ರಯೋಜನಕ್ಕಾಗಿ ಕರ್ತೃವು ಕಾರ್ಯತತ್ಪರನಾಗುತ್ತಾನೋ, ಆ ಕಾರ್ಯವು ಯಾವುದೇ ಅನಿಷ್ಟವಿಲ್ಲದೆ ಸಿದ್ಧಿಸುವುದಾದರೆ ಅದು ಮೂರನೆಯ ಸಮಾಲಂಕಾರ'.

**ಉದಾಹರಣೆ :** 'ಹೇ ಸ್ಯಾಲ, ವಾರಣಾರ್ಥಿನಃ ತೇ ಅಯಂ ವಾರಣಲಾಭಃ ಯುಕ್ತಃ'. ನನಗೆ ಆನೆಯನ್ನು ಕೊಡು ಎಂದು ಬಹಳ ಕಾಲ ಪೀಡಿಸುತ್ತಿರುವ ರಾಜನ ಭಾವಮೈದುನನನ್ನು ಮಹಾದ್ವಾರದಲ್ಲಿ ದ್ವಾರಪಾಲಕರು ತಡೆಯಲಾಗಿ, ಅವನನ್ನು ಕುರಿತು ರಾಜನು ಹಾಸ್ಯಮಾಡುತ್ತಾ ಹೇಳುವ ಮಾತಿದು 'ಎಲೈ ಸ್ಯಾಲನೇ, ವಾರಣ(=ಆನೆ) ವನ್ನುಬೇಡುತ್ತಿರುವ ನಿನಗೆ (ಈಗ) ಈ ವಾರಣ (ಬಾಗಿಲಲ್ಲಿ ತಡೆಯುವಿಕೆಯ) ಲಾಭವು ಯುಕ್ತವೇ ಆದುದು'. ವಾರಣಶಬ್ದಕ್ಕೆ ಶ್ಲೇಷಮೂಲಕ ಅಭೇದಾಧ್ಯವಸಾನದಿಂದಾಗಿ, ವಾರಣವನ್ನು (ಆನೆಯನ್ನು ಮತ್ತು ತಡೆಯುವಿಕೆಯನ್ನು) ಬೇಡುತ್ತಿದ್ದ ಸ್ಯಾಲನಿಗೆ, ಯಾವುದೇ ಅನಿಷ್ಟವಿಲ್ಲದೆ ವಾರಣದ (ತಡೆಯುವಿಕೆಯ ರೂಪ) ಪ್ರಾಪ್ತಿಯು ವರ್ಣಿತವಾಗಿರುವುದರಿಂದ ಇದು ಮೂರನೆಯ ಸಮಾಲಂಕಾರ.

ಸೂಚನೆ :-

ವಿಷಮಾಲಂಕಾರದ ಮೂರೂ ಭೇದಗಳಿಗೆ ಕ್ರಮವಾಗಿ ಈ ಅಲಂಕಾರದ ಮೂರೂ ಪ್ರಕಾರಗಳು ಪ್ರತಿದ್ವಂದ್ವಿಯಾಗಿರುತ್ತವೆ.

## ೪೦. ಚಿತ್ರಾಲಂಕಾರಃ

ಒಂದು ಪ್ರಯತ್ನವು ಅದಕ್ಕೆ ವಿಪರೀತವಾದ ಅಥವಾ ವಿರುದ್ಧವಾದ ಫಲವನ್ನು ಕೊಡುವಂತ ವರ್ಣಿತವಾದರೆ ಅದು ಚಿತ್ರಾಲಂಕಾರ.

ಚಿತ್ರಂ ತತ್ರ ಪ್ರಯತ್ನಶ್ಚೇದ್ವಿಪರೀತಫಲೇಪ್ಸಯಾ ।
ನಮಂತಿ ಸಂತಸ್ತ್ರೈಲೋಕ್ಯಾದಪಿ ಲಬ್ಧುಂ ಸಮುನ್ನತಿಮ್ ॥ ೮೯ ॥

'ವಿಪರೀತ ಫಲೇಪ್ಸಯಾ (ಯತ್ರ) ಪ್ರಯತ್ನಃ (ಸ್ಯಾತ್) ಚೇತ್ ತತ್ರ ಚಿತ್ರಮ್'. 'ವಿರುದ್ಧವಾದ ಫಲವನ್ನು ಬಯಸಿ ಪ್ರಯತ್ನದ ವರ್ಣನೆ ಇರುವುದಾದರೆ ಅದು ಚಿತ್ರಾಲಂಕಾರ'.

ಉದಾಹರಣೆ : 'ಸಂತಃ ತ್ರೈಲೋಕ್ಯಾತ್ ಅಪಿ ಸಮುನ್ನತಿಂ ಲಬ್ಧುಂ ನಮಂತಿ' 'ಸತ್ಪುರುಷರು ಮೂರು ಲೋಕಗಳಿಗಿಂತಲೂ ಔನ್ನತ್ಯವನ್ನು ಹೊಂದಬಯಸಿ ನಮ್ರರಾಗಿರುತ್ತಾರೆ. ನಮನವೆಂಬ ಪ್ರಯತ್ನ ದಿಂದ ಅಧೋದೇಶಸಂಯೋಗವೇ ಫಲ, ಹಾಗೆಯೇ ತ್ರೈಲೋಕ್ಯಕ್ಕಿಂತ ಔನ್ನತ್ಯವನ್ನು ಪಡೆಯಲು ಇದಕ್ಕೆ ವಿಪರೀತವಾದ ಪ್ರಯತ್ನವಿರಬೇಕು. ಆದರೆ, ಆ ವಿಧದ ಔನ್ನತ್ಯವನ್ನು ಪಡೆಯಲು ಅದಕ್ಕೆ ವಿರುದ್ಧವಾದ ನಮನರೂಪಪ್ರಯತ್ನವು ವರ್ಣಿತವಾಗಿರುವುದರಿಂದ ಚಿತ್ರಾಲಂಕಾರ. ಸಜ್ಜನರು ತಮ್ಮಲ್ಲಿ ಔದ್ಧತ್ಯಗುಣವನ್ನು ಬಿಟ್ಟು ವಿನಯಶೀಲರಾಗಿ ಗುರುದೇವತಾದಿಗಳಿಗೆ ನಮಸ್ಕರಿಸಿ ಅತ್ಯುನ್ನತಪದವಿಯನ್ನು ಲೋಕದಲ್ಲಿಯೇ ಅಲ್ಲದೆ ತ್ರೈಲೋಕ್ಯದಲ್ಲಿಯೂ ಪಡೆಯುತ್ತಾರೆ ಎಂಬುದು ತಾತ್ಪರ್ಯ.

## ೪೧. ಅಧಿಕಾಲಂಕಾರಃ

ಆಧಾರ — ಆಧೇಯಗಳಿಗೆ ಸಂಬಂಧಿಸಿದ ಅಲಂಕಾರವಿದು. ಬಹುಮಟ್ಟಿಗೆ ಆಧಾರವು ದೊಡ್ಡದಾಗಿರಬೇಕು, ಆಧೇಯವು ಚಿಕ್ಕದಾಗಿರಬೇಕು. ಆಧಾರಕ್ಕಿಂತಲೂ ಆಧೇಯವೇ ಪೃಥುಲ ವಾದುದಾಗಿಯೂ, ಆಧೇಯಕ್ಕಿಂತಲೂ ಆಧಾರವೇ ಪೃಥುಲವಾದುದಾಗಿಯೂ ವರ್ಣಿತ ವಾಗಿರುವುದುಂಟು. ಈ ಎರಡೂ ರೀತಿಯ ಚಮತ್ಕಾರವನ್ನು ಅಧಿಕಾಲಂಕಾರವೆಂದು ಕರೆಯಲಾಗಿದೆ. ಅಂದರೆ 1. ಆಧಾರಾತ್ ಆಧೇಯಾಧಿಕ್ಯವರ್ಣನರೂಪ - ಅಧಿಕಾಲಂಕಾರಃ 2. ಆಧೇಯಾತ್ ಆಧಾರಾಧಿಕ್ಯವರ್ಣನರೂಪ ಅಧಿಕಾಲಂಕಾರಃ ಎಂದು ಎರಡು ವಿಧ

೧. ಆಧಾರಾತ್ ಆಧೇಯಾಧಿಕ್ಯವರ್ಣನರೂಪ - ಅಧಿಕಾಲಂಕಾರಃ

ಅಧಿಕಂ ಪೃಥುಲಾಧಾರಾದಾಧೇಯಾಧಿಕ್ಯವರ್ಣನಂ ।
ಬ್ರಹ್ಮಾಂಡಾನಿ ಜಲೇ ಯತ್ರ ತತ್ರ ಮಾಂತಿ ನ ತೇ ಗುಣಾಃ ॥ ೯೦ ॥

'ಪೃಥುಲಾಧಾರಾತ್ ಆಧೇಯಾಧಿಕ್ಯವರ್ಣನಂ ಅಧಿಕಂ(ಇತ್ಯಲಂಕಾರಃ)'. 'ಆಧಾರವೇ ಅತ್ಯಂತ ವಿಶಾಲ; ಆಧೇಯವು ಅದಕ್ಕೂ ಅಧಿಕವೇ ಆದುದು-ಎಂದು ವರ್ಣಿತವಾದರೆ, ಅದು ಮೊದಲನೆಯ ಅಧಿಕಾಲಂಕಾರ'.

**ಉದಾಹರಣೆ** : ರಾಮನ ವರ್ಣನೆ, '(ಹೇ ರಾಮ!) ಯತ್ರ ಜಲೇ ಬ್ರಹ್ಮಾಂಡಾನಿ (ಬುದ್ಬುದ ಪ್ರಾಯಾಣಿ ತಿಷ್ಠಂತಿ) ತತ್ರ (ಮಹಾಜಲೇ) ತೇ ಗುಣಾಃ ನ ಮಾಂತಿ - ನ ನಿಲೀಯಂತೆ' 'ಎಲೈ ರಾಮನೇ! ಯಾವ ಮಹಾಜಲದಲ್ಲಿ ಸಮಸ್ತ ಬ್ರಹ್ಮಾಂಡಗಳೂ ಗುಳ್ಳೆಯ ರೂಪದಲ್ಲಿರುತ್ತವೆಯೋ, ಅಂತಹ ಮಹಾಜಲರಾಶಿಯಲ್ಲಿ ನಿನ್ನ ಅನಂತಕಲ್ಯಾಣಗುಣಗಳು ಮುಳುಗಲಾರವು'. ಆ ಮಹಾಜಲದಲ್ಲಿ ಕೇವಲ ಕೆಲವೇ ನಿನ್ನ ಗುಣಗಳು ಮುಳುಗಲಾರವಷ್ಟೆ ಅಲ್ಲ. ನಿನ್ನ ಅಪಾರ ಗುಣಗಳೂ ಸಹ ಮುಳುಗಲಾರವು- ಎಂಬ ಈ ಉದಾಹರಣೆಯಲ್ಲಿ ಪ್ರಸಿದ್ಧ ಜಲರಾಶಿಯೇ ಅತ್ಯಂತ ಪೃಥುಲವಾದ ಆಧಾರವಾಗಿದ್ದು, ಆಧೇಯಗಳಾದ ರಾಮನ ಅನಂತ ಕಲ್ಯಾಣಗುಣಗಳು ಅಲ್ಲಿ ಮುಳುಗಲಾರವೆಂದು ಹೇಳಿದ್ದರಿಂದ, ಆಧಾರಕ್ಕಿಂತಲೂ ಆಧೇಯವೇ ಅತ್ಯಂತ ಪೃಥುಲವೆಂದು ವರ್ಣಿತವಾಗಿರುವುದರಿಂದ, ಇದು ಮೊದಲನೆಯ ಅಧಿಕಾಲಂಕಾರ.

**೨. ಆಧೇಯಾತ್ ಆಧಾರಾಧಿಕ್ಯವರ್ಣನರೂಪ - ಅಧಿಕಾಲಂಕಾರಃ**

> ಪೃಥ್ವಾಧೇಯಾದ್ಯದಾಧಾರಾಧಿಕ್ಯಂ ತದಪಿ ತನ್ಮತಮ್ |
> ಕಿಯದ್ ವಾಗ್ಬ್ರಹ್ಮ ಯತ್ರೈತೇ ವಿಶ್ರಾಮ್ಯಂತಿ ಗುಣಾಸ್ತವ || ೬೧ ||

ಪೃಥ್ವಾಧೇಯಾತ್ ಆಧಾರಾಧಿಕ್ಯಂ (ಇತಿ) ಯತ್ ತತ್ ಅಪಿ ತತ್ (ಅಧಿಕಂ) ಮತಂ.' ' 'ಅತ್ಯಂತ ಪೃಥುಲವೆಂದು ಪ್ರಸಿದ್ಧವಾಗಿರುವ ಆಧೇಯಕ್ಕಿಂತಲೂ, ಅದರ ಆಧಾರವು ಇನ್ನೂ ಅಧಿಕವೆಂದು ವರ್ಣಿಸಿದ್ದಾದರೆ, ಅದು ಎರಡನೆಯ ಅಧಿಕಾಲಂಕಾರ'.

**ಉದಾಹರಣೆ** : ಇದೂ ಸಹ ರಾಮನ ವರ್ಣನೆ. '(ಹೇ ರಾಮ) ವಾಗ್ಬ್ರಹ್ಮ **ಕಿಯತ್? (ಕುತಃ) ಯತ್ರ ತವ ಏತೇ ಗುಣಾಃ ವಿಶ್ರಾಮ್ಯಂತಿ'** - 'ಎಲೈ ರಾಮನೇ । ಈ ವಾಕ್ ಎಂಬ ಬ್ರಹ್ಮವು ಎಷ್ಟರದು? ಅಂದರೆ ಇದರ ಪರಿಮಾಣವು ಇಷ್ಟೇ ಎಂದು ನಿರ್ಧರಿಸಲು ಸಾಧ್ಯವಿಲ್ಲ. ಏಕೆಂದರೆ, ವಾಗ್ಬ್ರಹ್ಮದಲ್ಲಿ ಅಪರಿಚ್ಛಿನ್ನವಾದ ನಿನ್ನ ಅನಂತ ಕಲ್ಯಾಣಗುಣಗಳು ವಿಶ್ರಾಂತಿಯನ್ನು ಪಡೆಯುತ್ತಿವೆ' ಇಲ್ಲಿ ಗುಣಗಳು ಆಧೇಯ, ವಾಗ್ಬ್ರಹ್ಮ ಆಧಾರ. ಆಧೇಯವು ಅತ್ಯಂತ ಪೃಥುಲ; ಈ ಆಧೇಯವು 'ವಾಗ್ಬ್ರಹ್ಮದಲ್ಲಿ ಅಬಾಧಿತವಾಗಿದೆ' ಎಂದು ಹೇಳಿದ್ದರಿಂದ, ಈ ಆಧಾರವು ಇನ್ನೂ ಪೃಥುಲವಾದಂತಾಯ್ತು. ಆದ್ದರಿಂದ ಇದು ಎರಡನೆಯ ಅಧಿಕಾಲಂಕಾರ.

## ೪೨. ಅಲ್ಪಾಲಂಕಾರಃ

ಅಧಿಕಾಲಂಕಾರದಲ್ಲಿ ಆಧಾರಾಧೇಯಗಳ ಪೃಥುಲತ್ವಾದಿಗಳನ್ನು ವರ್ಣಿಸಲಾಯ್ತು. ಆದರೆ ಅಲ್ಪಾಲಂಕಾರದಲ್ಲಿ ಈ ಆಧಾರಾಧೇಯಗಳ ಸೂಕ್ಷ್ಮತ್ವವನ್ನು ಹೇಳಲಾಗುತ್ತದೆ. ಅಂದರೆ, ಈ ಆಧೇಯವೇ ಮೊದಲಾಗಿ ಅತ್ಯಂತ ಸೂಕ್ಷ್ಮ. ಇದಕ್ಕಿಂತಲೂ ಆಧಾರವು ಇನ್ನೂ ಸೂಕ್ಷ್ಮವೆಂದು ವರ್ಣಿಸುವುದು ಅಲ್ಪಾಲಂಕಾರವಾಗುತ್ತದೆ.

ಅಲ್ಪಂತು ಸೂಕ್ಷ್ಮಾದಾಧೇಯಾದ್ಯದಾಧಾರಸ್ಯ ಸೂಕ್ಷ್ಮತಾ ।
ಮಣಿಮಾಲೋರ್ಮಿಕಾ ತೇಽದ್ಯ ಕರೇ ಜಪವಟಾಯತೇ ॥ ೯೨ ॥

ಸೂಕ್ಷ್ಮಾತ್ (ಅಪಿ) ಆಧೇಯಾತ್ ಆಧಾರಸ್ಯ ಸೂಕ್ಷ್ಮತಾ (ಇತಿ) ಯತ್ ತು (ತತ್) ಅಲ್ಪಂ (ಇತ್ಯಲಂಕಾರಃ) 'ಅತ್ಯಲ್ಪವೆಂದು ಪ್ರಸಿದ್ಧವಾಗಿರುವ ಆಧೇಯಕ್ಕಿಂತಲೂ ಆಧಾರವು ಇನ್ನೂ ಸೂಕ್ಷ್ಮವೆಂದು ವರ್ಣಿಸಿದ್ದಾದರೆ, ಅದು ಅಲ್ಪಾಲಂಕಾರ'.

ಉದಾಹರಣೆ : ಓರ್ವ ವಿರಹಿಣಿಯನ್ನು ಕುರಿತು ಅವಳ ಸಖಿಯು ಹೀಗೆ ಹೇಳುತ್ತಿರುವಳು - '(ಹೇ ಸಖಿ) ತೇ ಮಣಿಮಾಲೋರ್ಮಿಕಾ ಅದ್ಯ ಕರೇ ಜಪವಟಾಯತೇ'. 'ಎಲೌ ಸಖಿಯೇ, ಮಣಿಮಯವಾದ ನಿನ್ನ ಉಂಗುರವು ನಿನ್ನ ಈ ವಿರಹಕಾಲದಲ್ಲಿ ನಿನ್ನ ಕೈಯಲ್ಲಿ ಜಪಮಾಲೆಯಂತೆ ಆಚರಿಸುತ್ತಿದೆ'. ಅಂಗುಲೀಯಕವೇ ಅತ್ಯಂತ ಸೂಕ್ಷ್ಮ; ಅದು ಈ ವಿರಹಾವಸ್ಥೆಯ ಸಂದರ್ಭದಲ್ಲಿ ನಾಯಿಕೆಯು ಅತ್ಯಂತಕೃಶಳಾಗಿರುವುದರಿಂದ, ಕೈಯಲ್ಲಿ ಜಪಮಾಲೆಯಂತಾಗಿದೆ. - ಅಂದರೆ ಸೂಕ್ಷ್ಮವಾದ ಉಂಗುರರೂಪ ಆಧೇಯಕ್ಕಿಂತಲೂ, ಆಧಾರರೂಪವಾದ ಕೈಯೇ ಅತ್ಯಂತವಾಗಿ ಇನ್ನೂ ಸೂಕ್ಷ್ಮವಾಗಿದೆ ಎಂದು ಆಧಾರದ ಸೂಕ್ಷ್ಮತೆಯನ್ನು ವರ್ಣಿಸಿರುವುದರಿಂದ ಇದು ಸೂಕ್ಷ್ಮಾಲಂಕಾರ.

## ೪೩ .ಅನ್ಯೋನ್ಯಾಲಂಕಾರಃ

ಪರಸ್ಪರ ವ್ಯಕ್ತಿಗಳಲ್ಲಿ ಪರಸ್ಪರ ಉಪಕಾರವಾಗುವಂತೆ ವರ್ಣಿಸಿದ್ದಾದರೆ ಅದು ಅನ್ಯೋನ್ಯಾಲಂಕಾರ.

ಅನ್ಯೋನ್ಯಂ ನಾಮ ಯತ್ರ ಸ್ಯಾದುಪಕಾರಃ ಪರಸ್ಪರಂ ।
ತ್ರಿಯಾಮಾ ಶಶಿನಾ ಭಾತಿ ಶಶೀ ಭಾತಿ ತ್ರಿಯಾಮಯಾ ॥ ೯೩ ॥

'ಯತ್ರ ಪರಸ್ಪರಂ ಉಪಕಾರಃ (ವರ್ಣ್ಯತೇ ಚೇತ್, ತತ್ರ) ಅನ್ಯೋನ್ಯಂ ನಾಮ (ಅಲಂಕಾರಃ) ಸ್ಯಾತ್' 'ಎರಡು ವಸ್ತುಗಳಲ್ಲಿ ಪರಸ್ಪರ ಉಪಕಾರವು ವರ್ಣಿತವಾದುದಾದರೆ, ಅದು ಅನ್ಯೋನ್ಯಾಲಂಕಾರ'.

ಉದಾಹರಣೆ : 'ಶಶಿನಾ ತ್ರಿಯಾಮಾ ಭಾತಿ, ತ್ರಿಯಾಮಯಾ ಶಶೀ ಭಾತಿ'. 'ಚಂದ್ರನಿಂದ ರಾತ್ರಿಯೂ, ರಾತ್ರಿಯಿಂದ ಚಂದ್ರನೂ ಪರಸ್ಪರ ಶೋಭಿಸುತ್ತಿವೆ' ರಾತ್ರಿ - ಚಂದ್ರರಲ್ಲಿ ಪರಸ್ಪರ ಶೋಭಾರೂಪ ಉಪಕಾರವು ವರ್ಣಿತವಾಗಿರುವುದರಿಂದ ಇದು ಅನ್ಯೋನ್ಯಾಲಂಕಾರ.

## ೪೪ . ವಿಶೇಷಾಲಂಕಾರಃ (ತದ್ಭೇದಾಃ)

ಒಂದನೇ ವಿಧ : ಆಧಾರಾಧೇಯಭಾವ ಸಕಲಶಾಸ್ತ್ರಸಮ್ಮತವಾದುದು. ಆಧಾರವನ್ನು ಆಶ್ರಯಿಸಿಯೇ ಆಧೇಯವಸ್ತುವು ಇರುವುದು ಸ್ವಾಭಾವಿಕ. ಆದರೆ, ಕವಿಯ ಪ್ರತಿಭೆಯಿಂದಾಗಿ ಆಧಾರವಿಲ್ಲದೆಯೂ ಆಧೇಯವು ಇರಬಲ್ಲುದು. ಇದೂ ಸಹ ಒಂದು ವಿಶಿಷ್ಟ ಚಮತ್ಕಾರ. ಇದೇ ವಿಶೇಷಾಲಂಕಾರ.

ವಿಶೇಷಃ ಖ್ಯಾತಮಾಧಾರಂ ವಿನಾಪ್ಯಾಧೇಯವರ್ಣನಮ್ ।
ಗತೇಽಪಿ ಸೂರ್ಯೇ ದೀಪಸ್ಥಾಸ್ತಮಶ್ಛಿಂದಂತಿ ತತ್ಕರಾಃ ॥ ೯೪ ॥

'ಖ್ಯಾತಂ ಆಧಾರಂ ವಿನಾ ಅಪಿ, ಆಧೇಯವರ್ಣನಂ ವಿಶೇಷಃ ಇತಿ ಅಲಂಕಾರಃ'. 'ಪ್ರಸಿದ್ಧವಾದ ಆಧಾರವೇ ಇಲ್ಲದಿದ್ದರೂ, ಆಧೇಯದ ಸ್ಥಿತಿಯ ವರ್ಣನೆಯು ವಿಶೇಷಾಲಂಕಾರವಾಗುತ್ತದೆ'.

**ಉದಾಹರಣೆ** : 'ಸೂರ್ಯೇ (ಅಸ್ತಂ)ಗತೇ (ಸತಿ) ಅಪಿ, ದೀಪಸ್ಥಾಃ ತತ್ಕಾರಾಃ ತಮಃ ಛಿಂದಂತಿ'. 'ಸೂರ್ಯನು ಮುಳುಗಿಹೋಗಿದ್ದರೂ ಸಹ ದೀಪಗಳಲ್ಲಿ ಇರುವ ಅವನ ಕಿರಣಗಳು ಅಂಧಕಾರವನ್ನು ನಾಶ ಮಾಡುತ್ತವೆ. ಸೂರ್ಯರೂಪ ಆಧಾರವು ಪ್ರಸಿದ್ಧವೇ ಆದುದು. ಈ ಸೂರ್ಯನ ಅಭಾವವಿದ್ದರೂ ಸಹ (ಅಸ್ತಂಗತನಾಗಿರುವುದರಿಂದ) ಆಧೇಯವಾದ ಇವನ ಕಿರಣಗಳು ದೀಪಗಳನ್ನಾಶ್ರಯಿಸಿವೆ-ಎಂದು 'ಆಧಾರವಿಲ್ಲದಿದ್ದರೂ ಆಧೇಯದ ಉಪಸ್ಥಿತಿಯು' ವರ್ಣಿತವಾಗಿರುವುದರಿಂದ ಇದು ಮೊದಲನೆಯ ವಿಧವಾದ ವಿಶೇಷಾಲಂಕಾರ.

**ಎರಡನೇ ವಿಧ** : (ಒಂದೇ ವಸ್ತುವು ಏಕಕಾಲದಲ್ಲಿ ಅನೇಕತ್ರ ಇರುವುದು)

ವಿಶೇಷಃ ಸೋऽಪಿ ಯದ್ಯೇಕಂ ವಸ್ತ್ವನೇಕತ್ರ ವರ್ಣ್ಯತೇ ।
ಅಂತರ್ಬಹಿಃ ಪುರಃ ಪಶ್ಚಾತ್ ಸರ್ವದಿಕ್ಷ್ವಪಿ ಸೈವ ಮೇ ॥ ೯೫ ॥

'ಏಕಂ (ಏವ) ವಸ್ತು ಯದಿ ಅನೇಕತ್ರ ವರ್ಣ್ಯತೇ ಸಃ ಅಪಿ ವಿಶೇಷಃ (ಇತಿ ಅಲಂಕಾರಃ)'. 'ಒಂದೇ ಒಂದು ವಸ್ತುವು (ಏಕಕಾಲದಲ್ಲಿ) ಅನೇಕ ಕಡೆ ಇರುವಂತೆ ವರ್ಣಿಸಿದ್ದಾದರೆ, ಅದು ಎರಡನೆಯ ವಿಶೇಷಾಲಂಕಾರ'.

**ಉದಾಹರಣೆ** : ಒಬ್ಬ ವಿರಹಿಯು ಹೇಳುವ ಮಾತಿದು. 'ಮೇ ಅಂತಃ ಬಹಿಃ ಪುರಃ ಪಶ್ಚಾತ್ (ಏವಂ) ಸರ್ವದಿಕ್ಷು ಅಪಿ ಸಾ (ಮಮ ಪ್ರಿಯಾ) ಏವ (ವರ್ತತೇ)'. ನನ್ನ ಹೃದಯದಲ್ಲಿ, ಹೊರಗಡೆ, ಎದುರಲ್ಲಿ, ಹಿಂಬದಿಯಲ್ಲಿ ಹಾಗೆಯೇ ಎಲ್ಲ ದಿಕ್ಕುಗಳಲ್ಲಿಯೂ ಆ ನನ್ನ ಪ್ರಿಯೆಯೇ ಇರುವಳು'. ಇಲ್ಲಿ ಒಬ್ಬಳೇ ಒಬ್ಬ ಕಾಂತೆಯು ನಾಯಕನ ಹೃದಯ, ಬಾಹ್ಯ, ಮುಂದೆ, ಹಿಂದೆ ಎಲ್ಲ ದಿಕ್ಕುಗಳಲ್ಲಿ ಇರುವಂತೆ ವರ್ಣಿತವಾಗಿರುವುದರಿಂದ ಇದು ಎರಡನೆಯ ವಿಶೇಷಾಲಂಕಾರ.

**ಮೂರನೆಯ ವಿಧ** : (ಅಶಕ್ಯವಸ್ತ್ವಂತರಕೃತಿವರ್ಣನೆ)

ಕಿಂಚಿದಾರಂಭತೋऽಶಕ್ಯವಸ್ತ್ವಂತರಕೃತಿಶ್ಚ ಸಃ ।
ತ್ವಾಂ ಪಶ್ಯತಾ ಮಯಾ ಲಬ್ಧಂ ಕಲ್ಪವೃಕ್ಷನಿರೀಕ್ಷಣಂ ॥ ೯೬ ॥

'ಕಿಂಚಿದಾರಂಭತಃ ಅಶಕ್ಯವಸ್ತ್ವಂತರಕೃತಿಃ ಚ ಸಃ (ವಿಶೇಷಃ ಅಲಂಕಾರಃ)'

**ಉದಾಹರಣೆ** : ಓರ್ವ ರಾಜನನ್ನು ಕುರಿತು ಓರ್ವ ಕವಿ ಹೇಳುವ ಮಾತು. '(ಹೇ ರಾಜನ್) ತ್ವಾಂ ಪಶ್ಯತಾ ಮಯಾ ಕಲ್ಪವೃಕ್ಷನಿರೀಕ್ಷಣಂ ಲಬ್ಧಂ'. 'ಎಲೈ ರಾಜನೇ! ನಾನು ನಿನ್ನನ್ನು ನೋಡುತ್ತಿರಲಾಗಿ ಸಾಕ್ಷಾತ್ ಕಲ್ಪವೃಕ್ಷವನ್ನೇ ನೋಡಿದಂತಾಯ್ತು - ಅಂದರೆ ನಿನ್ನ ದರ್ಶನ ಪಡೆಯಲು

ಬಯಸುತ್ತಿರಲಾಗಿ, ನೀನು ಬಹಳ ದಾನಶೀಲನಾಗಿರುವುದರಿಂದ, ನಿನ್ನ ದರ್ಶನದಿಂದಲೇ ದುರ್ಲಭವಾದ ಕಲ್ಪವೃಕ್ಷದ ದರ್ಶನವೂ ಆದಂತಾಯ್ತು ಎಂಬ ಈ ಉದಾಹರಣೆಯಲ್ಲಿ ರಾಜದರ್ಶನದ ಉದ್ದೇಶದಿಂದ ಪ್ರವೃತ್ತನಾದ ವ್ಯಕ್ತಿಗೆ ದೈವಯೋಗದಿಂದ ಅಸಾಧ್ಯವಾದ ಕಲ್ಪವೃಕ್ಷದರ್ಶನಪ್ರಾಪ್ತಿಯ ವರ್ಣನೆಯಿರುವುದರಿಂದ ಇದು ಮೂರನೆಯ ವಿಶೇಷಾಲಂಕಾರ.

## ೪೫. ವ್ಯಾಘಾತಾಲಂಕಾರಃ (ತದ್ಭೇದಾಃ)

ಒಂದು ಕಾರ್ಯದ ಸಾಧನವು ತದ್ವಿರುದ್ಧವಾದ ಕಾರ್ಯಕ್ಕೆ ಸಾಧನವಾಗುವುದಾದರೆ ಅದು ವ್ಯಾಘಾತಾಲಂಕಾರವಾಗುತ್ತದೆ. ಯಾವುದು ಅನುಕೂಲಕಾರಣವಾಗಿದೆಯೋ, ಅದೇ ಪ್ರತಿಕೂಲ ಕಾರ್ಯಕ್ಕೆ ಕಾರಣವಾಗುವುದು ಇದರ ತತ್ತ್ವ. ಇದು 1. ತಥಾಕಾರಿಣೆ ಅತಥಾಕಾರಿತಕ್ರಿಯಾ 2. ಸೌಕರ್ಯನಿಬದ್ಧಕಾರ್ಯವಿರೋಧಿಕ್ರಿಯಾ - ಎಂದು ಎರಡು ವಿಧ.

೧. ತಥಾಕಾರಿಣೆ ಅತಥಾಕಾರಿತಕ್ರಿಯಾ

> ಸ್ಯಾದ್ವ್ಯಾಘಾತೋಽನ್ಯಥಾಕಾರಿ ತಥಾಕಾರಿ ಕ್ರಿಯೇತ ಚೇತ್ |
> ಯೈರ್ಜಗತ್ ಪ್ರೀಯತೇ ಹಂತಿ ತೈರೇವ ಕುಸುಮಾಯುಧಃ || ೯೭ ||

**ತಥಾಕಾರಿ ಅನ್ಯಥಾಕಾರಿ ಕ್ರಿಯೇತ ಚೇತ್ (ಸಃ) ವ್ಯಾಘಾತಃ ಸ್ಯಾತ್**. 'ಆ ರೀತಿಯಾಗಲು ಇರುವ ಕಾರಣವು ಅದಕ್ಕೆ ವಿರುದ್ಧವಾಗಿ ಕಾರ್ಯಕಾರಿಯಾಗುವುದಾದರೆ, ಅದು ಮೊದಲನೆಯ ವ್ಯಾಘಾತಾಲಂಕಾರ. ಇದರಲ್ಲಿಯೂ ಸಪ - ತಥಾಭೂತ (ಆ ರೀತಿಯಾದ) ಕಾರ್ಯಸಾಧನವಾದ ವಸ್ತುವು ಅತಥಾಭೂತ (ಆ ರೀತಿಯಲ್ಲದ) ಕಾರ್ಯಕ್ಕೆ ಸಾಧನವಾಗುವುದು ಮತ್ತು ಯಾವ ಯಾವ ವಸ್ತುವನ್ನು ಓರ್ವ ವ್ಯಕ್ತಿಯು ಕಾರ್ಯಸಾಧನರೂಪವಾಗಿ ಅಪೇಕ್ಷಿಸುತ್ತಾನೆಯೋ, ಅದೇ ವಸ್ತುವೇ ಬೇರೆ ತದ್ವಿರೋಧಿ ವ್ಯಕ್ತಿಯಿಂದ, ತದ್ವಿರುದ್ಧಕಾರ್ಯಕ್ಕೆ ಸಾಧನವಾಗಿ ಉಪಯುಕ್ತವಾಗುವುದು - ಎಂಬ ಎರಡು ಪ್ರಕಾರಗಳಿವೆ. ಇವುಗಳಲ್ಲಿ ಮೊದಲನೆಯದಕ್ಕೆ.

**ಉದಾಹರಣೆ : ಯೈಃ (ಕುಸುಮೈಃ) ಜಗತ್ ಪ್ರೀಯತೇ, ತೈರೇವ (ಕುಸುಮೈಃ) ಕುಸುಮಾಯುಧಃ ಜಗತ್ ಹಂತಿ** 'ಕುಸುಮಾಯುಧನಾದ ಮನ್ಮಥನು ತನ್ನ ಯಾವ ಕುಸುಮಗಳಿಂದ ಜಗತ್ತನ್ನು ಸಂತೋಷಗೊಳಿಸುತ್ತಾನೆಯೋ, ಅದೇ ಕುಸುಮಗಳಿಂದಲೇ ಜಗತ್ತನ್ನು ಬಾಧಿಸುತ್ತಾನೆ. ಜಗತ್ತಿನ ಪ್ರೀತಿಗೆ ಸಾಧನಭೂತವಾದ ಕುಸುಮಗಳೇ ಮನ್ಮಥನಿಂದ ತದ್ವಿರುದ್ಧವಾದ ಜಗತ್‌ಪೀಡಾರೂಪಕಾರ್ಯದ ಸಾಧನವಾಗಿ ಮಾಡಲ್ಪಟ್ಟಿರುವುದರಿಂದ ಇದು ಮೊದಲನೆಯ ವ್ಯಾಘಾತಾಲಂಕಾರ.

ಈ ಮೊದಲನೆಯ ಪ್ರಕಾರಕ್ಕೆ ಮತ್ತೊಂದು ಉದಾಹರಣೆ - ಒಂದು ವಸ್ತುವು ವಿರುದ್ಧ ವ್ಯಕ್ತಿಯಿಂದ ವಿರುದ್ಧ ಕಾರ್ಯಕ್ಕೆ ಉಪಯುಕ್ತವಾಗುವುದು —

> ದೃಶಾದಗ್ಧಂ ಮನಸಿಜಂ ಜೀವಯಂತಿ ದೃಶೈವ ಯಾಃ |
> ವಿರೂಪಾಕ್ಷಸ್ಯ ಜಯಿನೀಸ್ತಾಃ ಸ್ತುವೇ ವಾಮಲೋಚನಾಃ || ೯೮ ||

**'ವಿರೂಪಾಕ್ಷಸ್ಯ ದೃಶಾ ದಗ್ಧಂ ಮನಸಿಜಂ ಯಾಃ ವಾಮಲೋಚನಾಃ ದೃಶಾ ಏವ ಜೀವಯಂತಿ, ತಾಃ ವಿರೂಪಾಕ್ಷಸ್ಯ ಜಯನೀಃ ವಾಮಲೋಚನಾಃ ಸ್ತುವೇ'.** 'ಯಾವ ವಿರೂಪಾಕ್ಷನಾದ ಶಿವನ ಫಾಲನೇತ್ರದಿಂದ ದಗ್ಧನಾದ ಮನ್ಮಥನನ್ನು ವಾಮಲೋಚನೆಯರು ತಮ್ಮ ನೇತ್ರಗಳಿಂದ ಬದುಕಿಸುವರೋ, ಅಂತಹ ಶಿವನನ್ನೂ ಜಯಿಸಿದವರಾದ ಮನೋಹರ ನಯನೆಯರಾದ ಸ್ತ್ರೀಯರನ್ನು ಸ್ತೋತ್ರಮಾಡುತ್ತೇನೆ'. ಹಿಂದೆ ಶಿವನು ತನ್ನ ಫಾಲನೇತ್ರದಿಂದ ಮನ್ಮಥನನ್ನು ದಹಿಸಿದನು. ಆದರೆ, ಈಗ ಶಿವನನ್ನೇ ಜಯಿಸಿದವರಾದ ವಾಮಲೋಚನೆಯರು ತಮ್ಮ ನೇತ್ರದಿಂದಲೇ ಮನ್ಮಥನನ್ನು ಬದುಕಿಸಿದವರಾದ್ದರಿಂದ, ಸ್ತ್ರೀಯರು ಶಿವನ ವಿರೋಧಿಗಳಾಗಿರುವರು. ಮದನದಹನಸಾಧನವಾಗಿ ಶಿವನಿಂದ ಮಾಡಲ್ಪಟ್ಟ ಯಾವ ನೇತ್ರವುಂಟೋ, ಶಿವವಿರೋಧಿಗಳಾದ ಸ್ತ್ರೀಯರ ಅಂತಹ ನೇತ್ರವೇ ಮದನನ ಉಜ್ಜೀವನಸಾಧನವಾಗಿ ವರ್ಣಿತವಾಗಿರುವುದರಿಂದ ವ್ಯಾಘಾತಾಲಂಕಾರ.

**೨. ಸೌಕರ್ಯನಿಬದ್ಧಕಾರ್ಯವಿರೋಧಿಕ್ರಿಯಾ**

> **ಸೌಕರ್ಯೇಣ ನಿಬದ್ಧಾಪಿ ಕ್ರಿಯಾಕಾರ್ಯವಿರೋಧಿನೀ।**
> **ದಯಾ ಚೇದ್ಬಾಲ ಇತಿ ಮಯ್ಯಪರಿತ್ಯಾಜ್ಯ ಏವ ತೇ ॥ ೯೯ ॥**

**'ಕಾರ್ಯವಿರೋಧಿನೀ ಕ್ರಿಯಾ ಸೌಕರ್ಯೇಣ ನಿಬದ್ಧಾ (ಚೇತ್) ಅಪಿ, (ಸಃ) (ದ್ವಿತೀಯಃ ವ್ಯಾಘಾತಃ)'** 'ಕಾರ್ಯವೊಂದಕ್ಕೆ ವಿರೋಧಿಯಾಗಿರುವ ಕ್ರಿಯೆಯು ಬೇರೊಬ್ಬ ವ್ಯಕ್ತಿಯಿಂದ ಸೌಕರ್ಯ ರೂಪವಾಗಿಯೇ ನಿಯುಕ್ತವಾದುದಾದರೆ ಅದು ಎರಡನೆಯ ವ್ಯಾಘಾತಾಲಂಕಾರ'. ಕಾರ್ಯವಿರೋಧಿ ಕ್ರಿಯೆಯ ವಿಷಯದಲ್ಲಿ ಯಾವ ಸೌಕರ್ಯವುಂಟೋ, ಆ ಸೌಕರ್ಯವು ಕಾರಣಕ್ಕೆ ಸುತರಾಂ ಅನುಗುಣವೇ ಆಗಿರುತ್ತದೆ ಎಂದು ತಾತ್ಪರ್ಯ.

**ಉದಾಹರಣೆ** : ಜೈತ್ರಯಾತ್ರೆಗಾಗಿ ಹೊರಟಿರುವ ರಾಜನೋರ್ವನು, ಯುವರಾಜನು ಇನ್ನೂ ಬಾಲಕನಾಗಿರುವನೆಂಬ ಕಾರಣದಿಂದ, ಅವನನ್ನು ರಾಜ್ಯದಲ್ಲಿಯೇ ನಿಯೋಜಿಸಿ ತಾನು ಜೈತ್ರ ಯಾತ್ರೆಗೆ ಹೊರಡುತ್ತಿರುವ ಸಂದರ್ಭದಲ್ಲಿ ಯುವರಾಜನು ಹೀಗೆ ಹೇಳುತ್ತಾನೆ - **'ಹೇ ರಾಜನ್। ಬಾಲಃ ಇತಿ ತೇ ಮಯಿ ದಯಾ ಚೇತ್ (ತರ್ಹಿ) (ಅಹಂ ತೇ) ಅಪರಿತ್ಯಾಜ್ಯಃ ಏವ'.** 'ಎಲೈ ರಾಜನೇ । ನಾನು ಬಾಲಕನೆಂದು ನನ್ನ ವಿಷಯದಲ್ಲಿ ನಿನಗೆ ದಯೆ ಇರುವುದಾದರೆ, ನಾನು ಆ ಬಾಲಕನೆಂಬ ಕಾರಣದಿಂದಲೇ ನನ್ನನ್ನು ನೀನು ಬಿಟ್ಟು ಹೋಗಬಾರದು, (ಬದಲಾಗಿ ಜತೆಯಲ್ಲಿಯೇ ಕರೆದೊಯ್ಯಬೇಕು. ಏಕೆಂದರೆ ಈವರೆವಿಗೆ ನಿನ್ನನ್ನು ಬಿಟ್ಟಿರದ ನನ್ನನ್ನು ಈಗ ಹೀಗೆ ಬಿಟ್ಟು ಹೋಗುವುದು ಸರಿಯಲ್ಲ)'. ಇಲ್ಲಿ ಬಾಲತ್ವ ಕಾರಣವು ಯುವರಾಜನನ್ನು ರಾಜ್ಯದಲ್ಲಿ ಇರುವಂತೆ ಮಾಡಲು ಕಾರಣವಾಗಿದೆಯಷ್ಟೆ. ಈ ಬಾಲತ್ವಕಾರಣವೇ ಯುವರಾಜನಿಂದ, ವಿರುದ್ಧವಾದ ಅಂದರೆ ಜತೆಯಲ್ಲಿ ಕರೆದೊಯ್ಯುವ ರೂಪವಾದ ಕಾರ್ಯಕ್ಕೆ ಕಾರಣವಾಗಿ ಸಮರ್ಥಿತವಾಗಿರುವುದರಿಂದ ಎರಡನೆಯ ವ್ಯಾಘಾತಾಲಂಕಾರ.

## ೪೬. ಕಾರಣಮಾಲಾಲಂಕಾರಃ

ಹಿಂದು ಹಿಂದಿನದು ಕಾರಣ, ಮುಂದು ಮುಂದಿನದು ಕಾರ್ಯವಾಗಬಹುದು; ಅಥವಾ ಹಿಂದು ಹಿಂದಿನದು ಕಾರ್ಯ, ಮುಂದು ಮುಂದಿನದು ಕಾರಣವಾಗಬಹುದು. ಈ ಎರಡೂ ರೀತಿಯಲ್ಲಿಯೂ ವಿಶಿಷ್ಟ ಚಮತ್ಕಾರವಿರುವುದರಿಂದ, ಮತ್ತು ಇಲ್ಲಿಯ ಕಾರಣಗಳು ಮಾಲೆಯ ರೂಪದಲ್ಲಿರುವುದರಿಂದ ಇದು ಕಾರಣಮಾಲಾ. ಈ ಅಲಂಕಾರವು ೧. ಉತ್ತರೋತ್ತರ ಕಾರಣಭೂತ-ಪೂರ್ವಪೂರ್ವಸಂದರ್ಭಃ ೨. ಪೂರ್ವಪೂರ್ವಕಾರಣಭೂತ - ಉತ್ತರೋತ್ತರ ಸಂದರ್ಭಃ ಎಂದು ಎರಡು ವಿಧವಾಗಿರುತ್ತದೆ.

### ೧. ಉತ್ತರೋತ್ತರಕಾರಣಭೂತ-ಪೂರ್ವಪೂರ್ವಸಂದರ್ಭಃ

ಗುಂಫಃ ಕಾರಣಮಾಲಾ ಸ್ಯಾದ್ಯಥಾ ಪ್ರಾಕ್‌ಪ್ರಾಂತಕಾರಣೈಃ |
ನಯೇನ ಶ್ರೀಃ ಶ್ರಿಯಾ ತ್ಯಾಗಸ್ತ್ಯಾಗೇನ ವಿಪುಲಂ ಯಶಃ || ೧೦೦ ||

'ಯಥಾ ಪ್ರಾಕ್‌ಪ್ರಾಂತಕಾರಣೈಃ ಗುಂಫಃ ಕಾರಣಮಾಲಾ ಸ್ಯಾತ್' (ಪ್ರಾಕ್‌ಪ್ರಾಂತೌ-ಪೂರ್ವೋತ್ತರದೇಶೌ, ಅನತಿಕ್ರಮ್ಯ ಯಥಾ ಸ್ಯಾತ್ತಥಾ - ಯಥಾ ಪ್ರಾಕ್‌ಪ್ರಾಂತಂ, ಯಾನಿ ಕಾರಣಾನಿ ತೈಃ) 'ಉತ್ತರೋತ್ತರ ಕಾರ್ಯವನ್ನು ಕುರಿತು ಪೂರ್ವಪೂರ್ವವು ಕಾರಣವಾಗುವುದು, ಅಥವಾ ಪೂರ್ವಪೂರ್ವ ಕಾರ್ಯವನ್ನು ಕುರಿತು ಉತ್ತರೋತ್ತರ ಕಾರಣವಾಗುವುದು. ಈ ರೀತಿಯ ವರ್ಣನೆ ಇದ್ದರೆ ಅದು ಕಾರಣಮಾಲಾಲಂಕಾರವಾಗುತ್ತದೆ.

ಉದಾಹರಣೆ : 'ನಯೇನ ಶ್ರೀಃ (ಭವತಿ) ಶ್ರಿಯಾ ತ್ಯಾಗಃ (ವಿದ್ಯತೇ) ತ್ಯಾಗೇನ ವಿಪುಲಂ ಯಶಃ (ವಿದ್ಯತೇ)'. 'ನೀತಿಯಿಂದ ಸಂಪತ್ತು ಸಂಭವಿಸುತ್ತದೆ. ಈ ಸಂಪತ್ತಿನಿಂದ ತ್ಯಾಗಬುದ್ಧಿಯು ಸಂಭವಿಸುತ್ತದೆ. ಈ ತ್ಯಾಗದಿಂದ ಅಪಾರವಾದ ಕೀರ್ತಿ ಉಂಟಾಗುತ್ತದೆ'. - ಈ ಉದಾಹರಣೆಯಲ್ಲಿ - ನಯಕಾರಣವಾದುದು ಶ್ರೀಪ್ರಾಪ್ತಿರೂಪಕಾರ್ಯ. ಶ್ರೀಪ್ರಾಪ್ತಿರೂಪ ಕಾರಣದಿಂದ ತ್ಯಾಗರೂಪ ಕಾರ್ಯ. ಈ ತ್ಯಾಗರೂಪ ಕಾರಣದಿಂದ ವಿಪುಲಯಶೋರೂಪಕಾರ್ಯಪ್ರಾಪ್ತಿ- ಹೀಗೆ ಪೂರ್ವಪೂರ್ವವು ಉತ್ತರೋತ್ತರ ಕಾರ್ಯಕ್ಕೆ ಕಾರಣರೂಪವಾಗಿ ವರ್ಣಿತವಾಗಿರುವುದರಿಂದ ಇದು ಮೊದಲನೆಯ ಕಾರಣಮಾಲಾಲಂಕಾರ.

### ೨. ಪೂರ್ವಪೂರ್ವಕಾರಣಭೂತ ಉತ್ತರೋತ್ತರ ಸಂದರ್ಭ

ಭವಂತಿ ನರಕಾಃ ಪಾಪಾತ್ ಪಾಪಂ ದಾರಿದ್ರ್ಯಸಂಭವಮ್ |
ದಾರಿದ್ರ್ಯಮಪ್ರದಾನೇನ ತಸ್ಮಾದ್ದಾನಪರೋ ಭವ || ೧೦೧ ||

'ನರಕಾಃ ಪಾಪಾತ್ ಭವಂತಿ, ಪಾಪಂ ದಾರಿದ್ರ್ಯಸಂಭವಮ್' ಅಪ್ರದಾನೇನ ದಾರಿದ್ರ್ಯಂ (ಭವತಿ); ತಸ್ಮಾತ್ ದಾನಪರಃ ಭವ; ಪಾಪದಿಂದ ನರಕಗಳು ಸಂಭವಿಸುತ್ತವೆ. ಈ ಪಾಪವಾದರೋ ದಾರಿದ್ರ್ಯದಿಂದ ಸಂಭವಿಸುತ್ತದೆ. ಈ ದಾರಿದ್ರ್ಯವಾದರೋ ದಾನಮಾಡದಿರುವಿಕೆಯಿಂದ ಉಂಟಾಗುತ್ತದೆ. ಆದ್ದರಿಂದ (ನೀನು) ದಾನಶೀಲನಾಗಿ ಅಗು. ಈ ಉದಾಹರಣೆಯಲ್ಲಿ ನರಕವು

ಕಾರ್ಯ, ಪಾಪವು ಕಾರಣ, ಪಾಪವು ಕಾರ್ಯವಾದರೆ ಇದಕ್ಕೆ ಕಾರಣ ದಾರಿದ್ರ್ಯ. ಈ ದಾರಿದ್ರ್ಯ ಕಾರ್ಯಕ್ಕೆ ಕಾರಣವೆಂದರೆ ದಾನಮಾಡದೇ ಇರುವಿಕೆ. ಹೀಗೆ ಪೂರ್ವ ಪೂರ್ವ ಕಾರ್ಯಕ್ಕೆ ಉತ್ತರೋತ್ತರವು ಕಾರಣವಾಗಿರುವಂತೆ ವರ್ಣಿತವಾಗಿರುವುದರಿಂದ ಇದು ಎರಡನೆಯ ಕಾರಣಮಾಲಾಲಂಕಾರ.

## ೪೭. ಏಕಾವಲ್ಯಲಂಕಾರಃ

ಪೂರ್ವಪದಾರ್ಥ ಮತ್ತು ಉತ್ತರಪದಾರ್ಥಗಳಲ್ಲಿ ಪರಸ್ಪರ ವಿಶೇಷಣ- ವಿಶೇಷ್ಯಭಾವವಿರಬೇಕು. ಇದನ್ನೇ ಗೃಹೀತಮುಕ್ತರೀತಿ ಎನ್ನುವುದು. ಇದು 1. ಉತ್ತರೋತ್ತರವನ್ನು ಕುರಿತು ಪೂರ್ವಪೂರ್ವವು ವಿಶೇಷಣವಾಗಿರುವುದು. 2. ಪೂರ್ವಪೂರ್ವವನ್ನು ಕುರಿತು ಉತ್ತರೋತ್ತರವು ವಿಶೇಷಣವಾಗಿರುವುದು - ಎಂದು ಎರಡು ವಿಧ. ಈ ರೀತಿಯ ವರ್ಣನೆ ಇದ್ದಲ್ಲಿ ಅದು ಏಕಾವಲ್ಯಂಕಾರವೆನಿಸುತ್ತದೆ.

೧. ಉತ್ತರೋತ್ತರಸ್ಯ ಪೂರ್ವಪೂರ್ವವಿಶೇಷಣತ್ವಂ

> ಗೃಹೀತಮುಕ್ತರೀತ್ಯಾರ್ಥಶ್ರೇಣಿರೇಕಾವಲೀ ಮತಾ |
> ನೇತ್ರೇ ಕರ್ಣಾಂತವಿಶ್ರಾಂತೇ ಕರ್ಣೌ ದೋಸ್ತಂಭದೋಲಿನೌ || ೧೦೨ ||
> ದೋಸ್ತಂಭೌ ಜಾನುಪರ್ಯಂತಪ್ರಲಂಬನ ಮನೋಹರೌ |
> ಜಾನುನೀ ರತ್ನಮುಕುರಾಕಾರೇ ತಸ್ಯ ಮಹೀಭುಜಃ || ೧೦೩ ||

'ಗೃಹೀತಮುಕ್ತರೀತ್ಯಾ ಅರ್ಥಶ್ರೇಣಿಃ ಏಕಾವಲೀ ಮತಾ'. 'ಉತ್ತರೋತ್ತರ ಅರ್ಥವು ಪೂರ್ವ ಪೂರ್ವ ಅರ್ಥಕ್ಕೆ ವಿಶೇಷಣವಾಗಿರುವುದು, ಅಥವಾ ಪೂರ್ವಪೂರ್ವ ಅರ್ಥವು ಉತ್ತರೋತ್ತರ ಅರ್ಥಕ್ಕೆ ವಿಶೇಷಣವಾಗಿರುವುದು ಗೃಹೀತಮುಕ್ತರೀತಿ ಎನಿಸುತ್ತದೆ. ಈ ರೀತಿಯಲ್ಲಿ ಅರ್ಥಪಂಕ್ತಿಯು ವರ್ಣಿತವಾದರೆ ಅದು ಏಕಾವಲ್ಯಲಂಕಾರವಾಗುತ್ತದೆ. ಇಲ್ಲಿ ಮೊದಲನೆಯ ಪ್ರಕಾರಕ್ಕೆ ಮಾತ್ರ ಉದಾಹರಣೆಯನ್ನು ಕೊಡಲಾಗಿದೆ. ಎರಡನೆಯದಕ್ಕೆ ಉದಾಹರಣೆಯನ್ನು ಊಹಿಸಿಕೊಳ್ಳಬೇಕು.

**ಉದಾಹರಣೆ** : ಒಬ್ಬ ರಾಜನ ದೇಹಸ್ಥಿತಿಯ ವರ್ಣನೆ' - 'ಆ ರಾಜನ ಎರಡೂ ನೇತ್ರಗಳು ಕಿವಿಯವರೆಗೆ ಹಬ್ಬಿ ವಿಶಾಲವಾಗಿವೆ. ಎರಡೂ ಕಿವಿಗಳೂ, ಸ್ತಂಭದಂತಿರುವ ಎರಡು ಭುಜದವರೆಗೆ ಇಳಿ ಬಿದ್ದಿವೆ. ಈ ಎರಡೂ ಭುಜಸ್ತಂಭಗಳು ಜಾನು(ಮಂಡಿ)ವಿನ ವರೆಗೆ ಹಬ್ಬಿ ಮನೋಹರವಾಗಿವೆ. ಈ ಎರಡೂ ಜಾನುಗಳು ಎರಡು ಮಣಿದರ್ಪಣದಂತಿವೆ. ಈ ಉದಾಹರಣೆಯಲ್ಲಿ ಪೂರ್ವ ಪೂರ್ವವು ವಿಶೇಷ್ಯ, ಉತ್ತರೋತ್ತರ ವಿಶೇಷಣವಾಗಿವೆ. ಅಂದರೆ, ನೇತ್ರಗಳು ವಿಶೇಷ್ಯ,ಕರ್ಣಗಳು ವಿಶೇಷಣ. ಕರ್ಣಗಳು ವಿಶೇಷ್ಯ,ದೋಸ್ತಂಭಗಳು ವಿಶೇಷಣ, ದೋಸ್ತಂಭಗಳು ವಿಶೇಷ್ಯ, ಜಾನುಗಳು ವಿಶೇಷಣ. ಜಾನುಗಳು ವಿಶೇಷ್ಯ, ರತ್ನಮುಕುರ ವಿಶೇಷಣ. ಹೀಗೆ ಉತ್ತರೋತ್ತರ ಅರ್ಥವು ಪೂರ್ವಪೂರ್ವ ಅರ್ಥಕ್ಕೆ ವಿಶೇಷಣವಾಗಿರುವಂತೆ ವರ್ಣಿಸಿರುವುದರಿಂದ ಇದು ಮೊದಲನೆಯ ಏಕಾವಲ್ಯಲಂಕಾರ.

## ೪೮. ಮಾಲಾದೀಪಕಾಲಂಕಾರಃ

ಗೃಹೀತಮುಕ್ತರೀತಿತ್ವವು ಏಕಾವಲಿಯ ಲಕ್ಷಣವಾದರೆ, ಧರ್ಮೈಕ್ಯವು ದೀಪಕಾಲಂಕಾರದ ಲಕ್ಷಣ. ಈ ಎರಡು ರೀತಿಯ ಚಮತ್ಕಾರಗಳನ್ನು ಮೇಳವಿಸಿ ಮಾಲಾದೀಪಕಾಲಂಕಾರವೆಂದು ಹೆಸರಿಸಲಾಗಿದೆ.

ದೀಪಕೈಕಾವಲೀಯೋಗಾನ್ಮಾಲಾದೀಪಕಮುಚ್ಯತೇ ।
ಸ್ಮರೇಣ ಹೃದಯೇ ತಸ್ಯಾಸ್ತೇನ ತ್ವಯಿ ಕೃತಾ ಸ್ಥಿತಿಃ ॥ ೧೦೪ ॥

'ದೀಪಕೈಕಾವಲೀಯೋಗಾತ್ ಮಾಲಾದೀಪಕಮ್ (ಇತಿ) ಉಚ್ಯತೇ' - 'ದೀಪಕಾಲಂಕಾರ ಮತ್ತು ಏಕಾವಲ್ಯಲಂಕಾರಗಳ ಸಂಯೋಗದಿಂದ ಮಾಲಾದೀಪಕಾಲಂಕಾರವಾಗುತ್ತದೆ'. ಅಂದರೆ ದೀಪಕಾಲಂಕಾರ, ಏಕಾವಲ್ಯಲಂಕಾರಗಳ ಲಕ್ಷಣಗಳು ಸಂಯುಕ್ತವಾಗಿರುವುದು ಮಾಲಾದೀಪಕ.

**ಉದಾಹರಣೆ :** ನಾಯಿಕೆಯಿಂದ ನಾಯಕನ ಬಳಿಗೆ ಕಳುಹಿಸಲ್ಪಟ್ಟಿರುವ ದೂತಿಯು ನಾಯಕನನ್ನು ಕುರಿತು ಹೇಳುತ್ತಿರುವುದು. 'ತಸ್ಯಾಃ ಹೃದಯೇ ಸ್ಮರೇಣ ಸ್ಥಿತಿಃ ಕೃತಾ, ತೇನ (ತಾದೃಶಪ್ರಿಯಾ ಹೃದಯೇನ) ತ್ವಯಿ ಸ್ಥಿತಿಃ ಕೃತಾ'. 'ಆ ನಿನ್ನ ಪ್ರಿಯತಮೆಯ ಹೃದಯದಲ್ಲಿ ಮನ್ಮಥನು ನೆಲೆಗೊಂಡಿರುವನು. ಅಂತಹ ಆಕೆಯ ಆ ಹೃದಯವು ನಿನ್ನಲ್ಲಿ (ನಿನ್ನ ಹೃದಯದಲ್ಲಿ) ನೆಲೆಗೊಂಡಿದೆ'. ವಿರಹತಪ್ತಳಾದ ನಾಯಿಕೆಯ ಹೃದಯದಲ್ಲಿ ಅತೀವ ಮನ್ಮಥಬಾಧೆಯುಂಟಾಗಿದೆ. ಹೀಗೆ ಮನ್ಮಥಪರವಶಳಾದ ಆಕೆಯು ನಿನ್ನಲ್ಲಿಯೇ ತನ್ನ ಮನಸ್ಸನ್ನು ಇರಿಸಿರುವಳು ಎಂದು ತಾತ್ಪರ್ಯ. ಇಲ್ಲಿನ ಪೂರ್ವೋತ್ತರ ವಾಕ್ಯಗಳಲ್ಲಿ 'ಸ್ಥಿತಿಃ' ಎಂಬ ಒಂದೇ ಧರ್ಮವು ಉಕ್ತವಾಗಿರುವುದರಿಂದ ದೀಪಕಾಲಂಕಾರವಾಯ್ತು. 'ಸ್ಮರೇಣ ಹೃದಯೇ, ಹೃದಯೇನ ತ್ವಯಿ ಸ್ಥಿತಿಃ' ಎಂದು ಗೃಹೀತಮುಕ್ತರೀತಿತ್ವವಿರುವುದರಿಂದ ಏಕಾವಲ್ಯಲಂಕಾರ. ಹೀಗೆ ಈ ಎರಡರ ಯೋಗವಿರುವುದರಿಂದ ಮಾಲಾದೀಪಕಾಲಂಕಾರ.

## ೪೯. ಸಾರಾಲಂಕಾರಃ

ಹಿಂದು ಹಿಂದಿನ ವಸ್ತುವಿಗಿಂತ ಮುಂದು ಮುಂದಿನ ವಸ್ತುವಿನಲ್ಲಿ ಉತ್ಕರ್ಷತ್ವದ ವರ್ಣನೆ ಸಾರಾಲಂಕಾರವಾಗುತ್ತದೆ.

ಉತ್ತರೋತ್ತರಮುತ್ಕರ್ಷಃ ಸಾರ ಇತ್ಯಭಿಧೀಯತೇ ।
ಮಧುರಂ ಮಧು ಪೀಯೂಷಂ ತಸ್ಮಾತ್ತಸ್ಮಾತ್ಕವೇರ್ವಚಃ ॥ ೧೦೫ ॥

'ಉತ್ತರೋತ್ತರಂ ಉತ್ಕರ್ಷಃ ಸಾರಃ ಇತಿ ಅಭಿಧೀಯತೇ'. 'ಪೂರ್ವಪೂರ್ವ ವಸ್ತುವಿಗಿಂತ ಉತ್ತರೋತ್ತರ ವಸ್ತುವಿನಲ್ಲಿ ಉತ್ಕರ್ಷದ ವರ್ಣನೆ ಸಾರಾಲಂಕಾರವೆನಿಸುತ್ತದೆ'.

**ಉದಾಹರಣೆ :** 'ಮಧು ಮಧುರಂ, ತಸ್ಮಾತ್ (ಮಧುನಃ) (ಅಪೇಕ್ಷಯಾ) ಪೀಯೂಷಂ ಮಧುರಂ, ತಸ್ಮಾತ್ (ಪೀಯೂಷಾತ್ ಅಪೇಕ್ಷಯಾ) ಕವೇಃ ವಚಃ ಮಧುರಂ'. 'ಜೇನು ಸ್ವಾಭಾವಿಕವಾಗಿಯೇ

ಮಧುರ (ಸಿಹಿ); ಈ ಮಧುವಿಗಿಂತ ಅಮೃತವು (ಪೀಯೂಷಂ) ಮಧುರ, ಈ ಅಮೃತಕ್ಕಿಂತಲೂ ಕವಿಯ ವಾಕ್ (ಕಾವ್ಯ) ಮಧುರ'. ಇಲ್ಲಿ ಪೂರ್ವಪೂರ್ವವಸ್ತುವಿನ ದೃಷ್ಟಿಯಿಂದ ಅದರ ಮುಂದು ಮುಂದಿನ ವಸ್ತು ಶ್ರೇಷ್ಠ. ಅಂದರೆ ಜೇನು ಸ್ವಾಭಾವಿಕವಾಗಿಯೇ ಸಿಹಿ, ಈ ಮಧುವಿಗಿಂತ ಅಮೃತವು ಮಧುರ. ಈ ಅಮೃತಕ್ಕಿಂತ ಕವಿಯ ವಾಕ್ ಮಧುರ - ಎಂದು ಶ್ರೇಷ್ಠತ್ವವನ್ನು ವರ್ಣಿಸಿರುವುದರಿಂದ ಇದು ಸಾರಾಲಂಕಾರ.

## ೫೦. ಯಥಾಸಂಖ್ಯಾಲಂಕಾರಃ

ಕಾರಕ ಮತ್ತು ಕ್ರಿಯಾಪದಗಳ ಸಮನ್ವಯದಲ್ಲಿ ಕ್ರಮವಾಗಿ ಮೊದಲನೆಯ ಪದವು ಮೊದಲನೆಯ ಕ್ರಿಯಾಪದದೊಂದಿಗೆ ಎರಡನೆಯದು ಎರಡನೆಯದರೊಂದಿಗೆ - ಇತ್ಯಾದಿ ರೀತಿಯಲ್ಲಿ ಅನ್ವಯ ಮಾಡಿಕೊಳ್ಳುವುದನ್ನು ಕ್ರಮಿಕಾನ್ವಯವೆಂದು ಹೇಳಲಾಗುತ್ತದೆ. ಈ ಕ್ರಮಿಕಾನ್ವಯವೇ ಚಮತ್ಕಾರವುಳ್ಳದ್ದಾಗಿ ಯಥಾಸಂಖ್ಯವೆನಿಸುತ್ತದೆ.

ಯಥಾ ಸಂಖ್ಯಂ ಕ್ರಮೇಣೈವ ಕ್ರಮಿಕಾಣಾಂ ಸಮನ್ವಯಃ ।
ಶತ್ರುಂ ಮಿತ್ರಂ ವಿಪತ್ತಿಂ ಚ ಜಯ ರಂಜಯ ಭಂಜಯ ॥ ೧೦೭ ॥

'ಕ್ರಮಿಕಾಣಾಂ ಕ್ರಮೇಣ ಏವ ಸಮನ್ವಯಃ ಯಥಾಸಂಖ್ಯಂ (ಇತಿ ಅಲಂಕಾರಃ)'. 'ಮೊದಲ ಪದವು ಮೊದಲ ಪದದೊಂದಿಗೆ, ಎರಡನೆಯ ಪದವು ಎರಡನೆಯ ಪದದೊಂದಿಗೆ ಸಮನ್ವಯ ಹೊಂದುವುದು ಯಥಾಸಂಖ್ಯಾಲಂಕಾರವಾಗುತ್ತದೆ.

**ಉದಾಹರಣೆ :** 'ಶತ್ರುಂ ಜಯ, ಮಿತ್ರಂ ರಂಜಯ, ವಿಪತ್ತಿಂ ಚ ಭಂಜಯ'. 'ಶತ್ರುವನ್ನು ಜಯಿಸು, ಮಿತ್ರನನ್ನು ಸಂತೋಷಗೊಳಿಸು ಮತ್ತು ಆಪತ್ತನ್ನು ದೂರಮಾಡಿಕೋ'. ಇಲ್ಲಿ ಕರ್ಮ ಕ್ರಿಯೆಗಳಿಗೆ ಕ್ರಮವಾಗಿ ಅನ್ವಯವಿರುವುದರಿಂದ ಇದು ಯಥಾಸಂಖ್ಯಾಲಂಕಾರ.

## ೫೧. ಪರ್ಯಾಯಾಲಂಕಾರಃ (ತದ್ಭೇದಾಃ)

ಒಂದು ವಸ್ತುವು ಕ್ರಮಕ್ರಮವಾಗಿ ಒಂದೊಂದು ವಸ್ತುವನ್ನು ಬಿಟ್ಟು ಮತ್ತೊಂದು ಮಗುದೊಂದು ವಸ್ತುವಿನಲ್ಲಿ ಆಶ್ರಯಪಡೆಯುವಿಕೆಯ ವರ್ಣನೆ ಪರ್ಯಾಯಾಲಂಕಾರ ವೆನಿಸುತ್ತದೆ. ಹಾಗೆಯೇ ಅನೇಕ ವಸ್ತುಗಳೂ ಸಹ ಏಕತ್ರ ಸಂಶ್ರಯಗೊಂಡರೂ, ಅದೂ ಸಹ ಪರ್ಯಾಯಾಲಂಕಾರ. ಹೀಗೆ ಈ ಅಲಂಕಾರವು ೧. ಏಕಸ್ಯ ಅನೇಕಾಶ್ರಯರೂಪಃ ೨. ಅನೇಕಸ್ಯ ಏಕಾಶ್ರಯರೂಪಃ ಎಂದು ಎರಡು ವಿಧವಾಗುತ್ತದೆ.

೧. ಏಕಸ್ಯ ಅನೇಕಾಶ್ರಯರೂಪಃ ಪರ್ಯಾಯಾಲಂಕಾರ :

ಪರ್ಯಾಯೋ ಯದಿ ಪರ್ಯಾಯೇಣೈಕಸ್ಯಾನೇಕಸಂಶ್ರಯಃ ।
ಪದ್ಮಂ ಮುಕ್ತ್ವಾ ಗತಾ ಚಂದ್ರಂ ಕಾಮಿನೀವದನೋಪಮಾ ॥ ೧೦೮ ॥

'ಏಕಸ್ಯ (ಏವ ವಸ್ತುನಃ) ಪರ್ಯಾಯೇಣ ಅನೇಕಾಶ್ರಯಃ ಯದಿ (ವರ್ಣ್ಯತೇ) (ತರ್ಹಿ) ಪರ್ಯಾಯಃ (ಇತಿ ಅಲಂಕಾರಃ ಭವತಿ)'. 'ಒಂದೇ ವಸ್ತುವು ಕ್ರಮಕ್ರಮವಾಗಿ ಅನೇಕ ಕಡೆ ಆಶ್ರಯ ಪಡೆದಿರುವಂತೆ ವರ್ಣಿತವಾದುದಾದರೆ, ಅದು ಮೊದಲನೆಯ ಪರ್ಯಾಯಾಲಂಕಾರವಾಗುತ್ತದೆ.

ಉದಾಹರಣೆ: 'ಕಾಮಿನೀವದನೋಪಮಾ ಪದ್ಮಂ ಮುಕ್ತ್ವಾ ಚಂದ್ರಂ ಗತಾ'; 'ಕಾಮಿನಿಯ ಮುಖ ಸಾದೃಶ್ಯವು ಮೊದಲು ಕಮಲದಲ್ಲಿದ್ದು, ಬಳಿಕ ಕಮಲವನ್ನು ಬಿಟ್ಟು ಚಂದ್ರನನ್ನು ಸೇರಿತು'. 'ಅಂದರೆ ಹಗಲಲ್ಲಿ ಪದ್ಮದಲ್ಲಿದ್ದು ರಾತ್ರಿಯಲ್ಲಿ ಚಂದ್ರನನ್ನು ಸೇರಿತು ಎಂದು ತಾತ್ಪರ್ಯ. ಇಲ್ಲಿ ಕಾಮಿನಿಯ ಮುಖಸಾದೃಶ್ಯವು ಪದ್ಮ-ಚಂದ್ರ ಹೀಗೆ ಅನೇಕ ವಸ್ತುಗಳಲ್ಲಿ ಆಶ್ರಯ ಪಡೆದಿರುವಂತೆ ಪರ್ಯಾಯ ರೀತಿಯಲ್ಲಿ ವರ್ಣಿತವಾಗಿರುವುದರಿಂದ ಇದು ಮೊದಲನೆಯ ಪರ್ಯಾಯಾಲಂಕಾರ.

೨. ಅನೇಕಸ್ಯ ಏಕಾಶ್ರಯರೂಪಃ ಪರ್ಯಾಯಾಲಂಕಾರಃ :

ಏಕಸ್ಮಿನ್ ಯದ್ಯನೇಕಂ ವಾ ಪರ್ಯಾಯಃ ಸೋಽಪಿ ಸಮ್ಮತಃ ।
ಅಧುನಾ ಪುಲಿನಂ ತತ್ರ ಯತ್ರ ಸ್ರೋತಃ ಪುರಾಽಜನಿ ॥ ೧೦೮ ॥

ವಾ = ಅಥವಾ, ಯದಿ, ಏಕಸ್ಮಿನ್ (ಆಧಾರೇ) ಅನೇಕಂ (ಆಧೇಯಂ ಭವತಿ) ಸಃ ಅಪಿ ಪರ್ಯಾಯಃ (ಇತಿ) ಸಮ್ಮತಃ'. 'ಒಂದೇ ಆಧಾರರೂಪ ವಸ್ತುವಿನಲ್ಲಿ ಆಧೇಯರೂಪ ಅನೇಕ ವಸ್ತುಗಳು ಕ್ರಮವಾಗಿ ಇರುವಂತೆ ವರ್ಣಿತವಾದರೂ, ಅದು ಎರಡನೆಯ ಪರ್ಯಾಯಾಲಂಕಾರವಾಗುತ್ತದೆ'.

ಉದಾಹರಣೆ : 'ಯತ್ರ (ನದ್ಯಾಂ) ಪುರಾ ಸ್ರೋತಃ ಅಜನಿ, ತತ್ರ ಅಧುನಾ ಪುಲಿನಂ (ವರ್ತತೇ)'. 'ಹಿಂದೆ ಯಾವ ಸ್ಥಳದಲ್ಲಿ ನೀರಿನ ಪ್ರವಾಹವಿತ್ತೋ, ಆ ನದೀಪ್ರದೇಶದಲ್ಲಿ ಈಗ ಮರಳು ಕಂಡು ಬರುತ್ತದೆ'. ಇಲ್ಲಿ ನದಿಯ ಸ್ಥಾನವಾದ ಏಕತ್ರಸ್ಥಳದಲ್ಲಿ, ಮೊದಲು ಪ್ರವಾಹವಿತ್ತು. ಈಗ ಮರಳು ಇರುತ್ತದೆ - ಎಂದು ಪ್ರವಾಹ ಪುಲಿನರೂಪ ಆಧೇಯಗಳನ್ನು ಪರ್ಯಾಯರೂಪವಾಗಿ, ಏಕತ್ರನದೀರೂಪ ಆಧಾರಸ್ಥಳದಲ್ಲಿ ವರ್ಣಿಸಿರುವುದರಿಂದ, ಇದು ಎರಡನೆಯ ಪರ್ಯಾಯಾಲಂಕಾರವಾಗುತ್ತದೆ.

## ೫೨. ಪರಿವೃತ್ತ್ಯಲಂಕಾರಃ (ತದ್ಭೇದಾಃ)

ವಸ್ತುಗಳ ಪರಸ್ಪರ ವಿನಿಮಯವು ಪರಿವೃತ್ತಿಯೆನಿಸುತ್ತದೆ. ಈ ರೀತಿಯ ವಿನಿಮಯವು ೧. ನ್ಯೂನವಸ್ತು - ಅಧಿಕವಸ್ತುಗಳೊಡನೆ ೨. ಅಧಿಕವಸ್ತು - ಸ್ವಲ್ಪವಸ್ತುಗಳೊಡನೆ ೩. ಪರಸ್ಪರ ಸಮಾನವಸ್ತುಗಳಲ್ಲಿ - ಹೀಗೆ ಮೂರು ರೀತಿಯಲ್ಲಿ ಆಗಬಹುದಾದ್ದರಿಂದ, ಈ ಅಲಂಕಾರವು ಕ್ರಮವಾಗಿ ೧. ಸ್ವಲ್ಪವ್ಯಯೇನ ಅಧಿಕಸ್ವೀಕರಣರೂಪಃ ೨. ಅಧಿಕವ್ಯಯೇನ ಸ್ವಲ್ಪಸ್ವೀಕರಣರೂಪಃ ೩. ಸಮೇನ ಸಮಸ್ವೀಕರಣ ರೂಪಃ ಎಂದು ಮೂರು ವಿಧವಾಗುತ್ತದೆ. ಇಲ್ಲಿ ಮೊದಲ ಭೇದವನ್ನು ಮಾತ್ರ ವಿವರಿಸಲಾಗಿದೆ.

೧. ಸ್ವಲ್ಪವ್ಯಯೇನ ಅಧಿಕಸ್ವೀಕರಣರೂಪಃ ಪರಿವೃತ್ತ್ಯಲಂಕಾರಃ

ಪರಿವೃತ್ತಿರ್ವಿನಿಮಯೋ ನ್ಯೂನಾಭ್ಯಧಿಕಯೋರ್ಮಿಥಃ ।
ಜಗ್ರಾಹೈಕಂ ಶರಂ ಮುಕ್ತ್ವಾ ಕಟಾಕ್ಷಾನ್ಸ ರಿಪುಶ್ರಿಯಾಮ್ ॥ ೧೦೯ ॥

'ನ್ಯೂನಾಭ್ಯಧಿಕಯೋಃ ಮಿಥಃ ವಿನಿಮಯಃ ಪರಿವೃತ್ತಿಃ (ಇತ್ಯಲಂಕಾರಃ)'; 'ಅಲ್ಪ ಮತ್ತು ಅಧಿಕವಸ್ತುಗಳೊಡನೆ ಪರಸ್ಪರ ವಿನಿಮಯದ ವರ್ಣನೆ ಪರಿವೃತ್ತ್ಯಲಂಕಾರವಾಗುತ್ತದೆ. ಅಲ್ಪದಿಂದ ಅಧಿಕಪ್ರಾಪ್ತಿ - ಮೊದಲ ವಿಧ.

**ಉದಾಹರಣೆ :** ಸಃ (ರಾಜಾ) ಏಕಂ (ಏವ) ಶರಂ ಮುಕ್ತ್ವಾ ರಿಪುಶ್ರಿಯಾಂ ಕಟಾಕ್ಷಾನ್ ಜಗ್ರಾಹ'. 'ಆ ರಾಜನು ಶತ್ರುಗಳ ಮೇಲೆ ಒಂದೇ ಒಂದು ಬಾಣವನ್ನು ಪ್ರಯೋಗಿಸಿ, (ಶತ್ರುಗಳನ್ನು ದಮನಗೊಳಿಸಿ) ಆ ಶತ್ರುರಾಜರ ಸಂಬಂಧವಾದ ಸಂಪಲ್ಲಕ್ಷ್ಮಿಗಳ ಕಟಾಕ್ಷಗಳನ್ನೇ ಸೆಳೆದು ಕೊಂಡನು'. ಇಲ್ಲಿ ಒಂದೇ ಒಂದು ಬಾಣರೂಪವಾದ ಅಲ್ಪವಸ್ತುವಿನಿಂದ ಅನೇಕವಾದ ಲಕ್ಷ್ಮೀಕಟಾಕ್ಷರೂಪ ವಸ್ತುಗಳನ್ನು ಪಡೆದಿರುವಂತೆ ವರ್ಣಿಸಿರುವುದರಿಂದ ಇದು ಮೊದಲನೆಯ ಪರಿವೃತ್ತ್ಯಲಂಕಾರವಾಗುತ್ತದೆ. ಉಳಿದೆರಡನ್ನು ಹೀಗೆಯೇ ಊಹಿಸಬೇಕು.

## ೫೩. ಪರಿಸಂಖ್ಯಾಲಂಕಾರಃ

ಒಂದು ವಸ್ತುವನ್ನು ಒಂದೆಡೆ ನಿಷೇಧಿಸಿ, ಬೇರೊಂದೆಡೆ ಅದನ್ನು ನಿಯಮನ ಮಾಡುವುದಾದರೆ ಅದೂ ಸಹ ಚಮತ್ಕಾರ ವಿಶೇಷವೇ ಆಗಿ ಪರಿಸಂಖ್ಯಾಲಂಕಾರವೆನಿಸುತ್ತದೆ.

ಪರಿಸಂಖ್ಯಾ ನಿಷಿದ್ಧೈಕಮೇಕಸ್ಮಿನ್ ವಸ್ತುಯಂತ್ರಣಮ್ ।
ಸ್ನೇಹಕ್ಷಯಃ ಪ್ರದೀಪೇಷು ನ ಸ್ವಾಂತೇಷು ನತಭ್ರುವಾಮ್ ॥ ೧೧೦ ॥

'ಏಕಂ ವಸ್ತು ನಿಷಿಧ್ಯ ಏಕಸ್ಮಿನ್ ಯಂತ್ರಣಂ (ಯತ್, ಸಾ) ಪರಿಸಂಖ್ಯಾ' 'ಒಂದು ವಸ್ತುವನ್ನು ಒಂದೆಡೆ ನಿಷೇಧಿಸಿ,ಅದನ್ನೇ ಬೇರೊಂದು ಕಡೆ ನಿಯತವಾಗಿ ವರ್ಣಿಸಿದರೆ ಅದು ಪರಿಸಂಖ್ಯಾಲಂಕಾರವಾಗುತ್ತದೆ.

**ಉದಾಹರಣೆ :** 'ಪ್ರದೀಪೇಷು ಸ್ನೇಹಕ್ಷಯಃ (ಅಭೂತ್, ಕಿಂತು) ನತಭ್ರುವಾಂ ಸ್ವಾಂತೇಷು (ಸ್ನೇಹಕ್ಷಯಃ) ನ (ಅಭೂತ್)'. 'ದೀಪಪಾತ್ರೆಗಳಲ್ಲಿ ಮಾತ್ರವೇ ಸ್ನೇಹಕ್ಷಯ (ತೈಲನಾಶ) ವಾಯಿತೇ ಹೊರತು ಸ್ತ್ರೀಯರ ಹೃದಯಗಳಲ್ಲಿ ಅಲ್ಲ'. ಅಂದರೆ ಸ್ತ್ರೀಯರ ಹೃದಯದಲ್ಲಿ ಸ್ನೇಹವೃದ್ಧಿಯೇ ಆಯಿತು ಎಂದು ಅರ್ಥ. ಒಂದೆಡೆ ಸ್ನೇಹಕ್ಷಯವನ್ನು ಹೇಳಿ ಮತ್ತೊಂದೆಡೆ ನಿಯಂತ್ರಣ ಮಾಡಿರುವುದರಿಂದ ಇದು ಪರಿಸಂಖ್ಯಾಲಂಕಾರ. ಸ್ನೇಹ ಶಬ್ದಕ್ಕೆ ಶ್ಲೇಷದಿಂದಾಗಿ ತೈಲ ಮತ್ತು ಪ್ರೇಮ ಎಂಬ ಅರ್ಥವನ್ನಿಟ್ಟುಕೊಂಡು, 'ಸ್ನೇಹಕ್ಷಯಃ ಏವ ಸ್ನೇಹಕ್ಷಯಃ' ಎಂದು ಅಭೇದಾಧ್ಯವಸಾನ ಮಾಡಿಕೊಳ್ಳಬೇಕು. ದೀಪಗಳಲ್ಲಿ ತೈಲನಾಶ ರಾತ್ರಿಯ ವೇಳೆ ಆಯಿತು. ಆದರೆ, ರಾತ್ರಿಯಲ್ಲೆಲ್ಲಾ ವಿರಹಿಣಿಯರ ಹೃದಯದಲ್ಲಿ ಅನುರಾಗ ಕ್ಷಯವಾಗದೆ, ಅಕ್ಷಯತ್ವವನ್ನೇ ಹೊಂದಿತೆಂದು ತಾತ್ಪರ್ಯ. ಅಂದರೆ ಸ್ನೇಹವನ್ನು ದೀಪಗಳಲ್ಲಿ ನಿಷೇಧಿಸಿ, ಸ್ತ್ರೀಯರ ಹೃದಯದಲ್ಲಿ ನಿಯಮನ ಮಾಡಿರುವುದರಿಂದ ಪರಿಸಂಖ್ಯಾ.

## ೫೪. ವಿಕಲ್ಪಾಲಂಕಾರಃ

ಸಮಾನ ಬಲವುಳ್ಳ ಎರಡು ವಿರುದ್ಧ ಕ್ರಿಯೆಗಳು ಏಕಕಾಲದಲ್ಲಿ ಆಗಲು ಸಾಧ್ಯವೇ ಇಲ್ಲ. ಅವುಗಳ ಪೈಕಿ ಯಾವುದಾದರೊಂದು ಸಾಧಿತವಾಗಬೇಕು. ಈ ರೀತಿಯ ವರ್ಣನೆ ವಿಕಲ್ಪಾಲಂಕಾರವೆನಿಸುತ್ತದೆ.

ವಿರೋಧೇ ತುಲ್ಯಬಲಯೋರ್ವಿಕಲ್ಪಾಲಂಕೃತಿರ್ಮತಾ ।
ಸದ್ಯಃ ಶಿರಾಂಸಿ ಚಾಪಾನ್ವಾ ನಮಯಂತು ಮಹೀಭುಜಃ ॥ ೧೧೧ ॥

**ತುಲ್ಯಬಲಯೋಃ ವಿರೋಧೇ (ಸತಿ) ವಿಕಲ್ಪಾಲಂಕೃತಿಃ ಮತಾ'.** 'ಸಮಾನ ಬಲವುಳ್ಳ ಎರಡು ಕ್ರಿಯೆಗಳಿಗೆ ವಿರೋಧವಿದ್ದಾಗ, ಅಂತಹ ವರ್ಣನೆ ವಿಕಲ್ಪಾಲಂಕಾರವೆನಿಸುತ್ತದೆ'. ಪರಸ್ಪರ ವಿರುದ್ಧವೂ, ಏಕಕಾಲದಲ್ಲಿ ಸಾಧಿಸಲಸಾಧ್ಯವೂ ಆಗಿರುವ ಕ್ರಿಯೆಗಳ ಪೈಕಿ ಯಾವುದಾದರೊಂದನ್ನು ನಿಶ್ಚಯಿಸಿಕೊಳ್ಳಬೇಕು ಎಂಬ ರೀತಿಯ ವರ್ಣನೆ ವಿಕಲ್ಪಾಲಂಕಾರ.

**ಉದಾಹರಣೆ** : 'ಮಹೀಭುಜಃ ಸದ್ಯಃ ಶಿರಾಂಸಿ ನಮಯಂತು, ವಾ = ಅಥವಾ, ಚಾಪಾನ್ ನಮಯಂತು' 'ರಾಜರು ಕೂಡಲೇ ತಮ್ಮ ಶಿರಸ್ಸುಗಳನ್ನಾದರೂ ಬಾಗಿಸಲಿ, ಅಥವಾ ಧನುಸ್ಸುಗಳನ್ನಾದರೂ ಬಾಗಿಸಲಿ'. ಅಂದರೆ ಸಂಧಿಯ ಅಪೇಕ್ಷೆ ಇದ್ದಲ್ಲಿ ಶಿರಗಳನ್ನು ಬಾಗಿಸಿ ಶರಣಾಗಲಿ, ಯುದ್ಧ ಮಾಡುವ ಅಪೇಕ್ಷೆ ಇದ್ದಲ್ಲಿ ತಮ್ಮ ಧನುಸ್ಸುಗಳನ್ನು ಸಿದ್ಧಪಡಿಸಿಕೊಂಡು ಯುದ್ಧಸನ್ನದ್ಧರಾಗಲಿ ಎಂದು ತಾತ್ಪರ್ಯ. ಸಂಧಿಕಾರ್ಯ, ಯುದ್ಧಕಾರ್ಯಗಳು ಪರಸ್ಪರ ವಿರುದ್ಧಗಳಾಗಿದ್ದು, ಏಕಕಾಲದಲ್ಲಿ ಅಸಾಧ್ಯಗಳು. ಈ ಎರಡರಲ್ಲಿ ಯಾವುದಾದರೊಂದನ್ನು ವಿಕಲ್ಪರೂಪವಾಗಿ ಆರಿಸಿಕೊಳ್ಳಬೇಕಾಗಿ ವರ್ಣಿತವಾಗಿರುವುದರಿಂದ ಇದು ವಿಕಲ್ಪಾಲಂಕಾರ.

## ೫೫. ಸಮುಚ್ಚಯಾಲಂಕಾರಃ (ತದ್ಭೇದಾಃ)

ಏಕಕಾಲಕ್ಕೆ ಅನೇಕ ಕಾರ್ಯಗಳು ಒದಗಿ ಬರುವುದೂ ಸಹ ಒಂದು ಚಮತ್ಕಾರ ವಿಶೇಷವೇ ಹೌದು. ಹೀಗೆ ಏಕಕಾಲದಲ್ಲಿ ಒದಗಿಬರುವ ಅನೇಕ ಕಾರ್ಯಗಳಲ್ಲಿ ಪರಸ್ಪರ ವಿರೋಧವಿರುವು ದಿಲ್ಲವೆಂಬುದು ಗಮನಾರ್ಹ ಅಂಶ. ಇಂತಹುದು ಸಮುಚ್ಚಯಾಲಂಕಾರವೆನಿಸುತ್ತದೆ. ಇದು ೧. ಅವಿರುದ್ಧ-ಅನೇಕಸಂದರ್ಭರೂಪಕಃ ೨. ಅಹಂಪೂರ್ವಿಕಾವತಾಂ ಏಕಾನ್ವಯರೂಪಃ - ಎಂದು ಎರಡು ವಿಧವಾಗಿರುತ್ತದೆ. ಮೊದಲ ವಿಧಕ್ಕೆ 'ಶತಪತ್ರ ಪತ್ರಶತಭೇದ ನ್ಯಾಯ'ವನ್ನೂ, ಎರಡನೆಯ ಭೇದಕ್ಕೆ- 'ಖಲೇ ಕಪೋತ ನ್ಯಾಯ' ವನ್ನು ಉದಾಹರಿಸಲಾಗುತ್ತದೆ. ಕಮಲದ ನೂರು ದಳಗಳನ್ನು ಏಕಕಾಲಕ್ಕೆ ಸೂಜಿಯಿಂದ ಚುಚ್ಚಿದರೆ, ಕಾಲಭೇದವು ಅತ್ಯಂತ ಸೂಕ್ಷ್ಮವೇ ಆಗಿರುವುದರಿಂದ ಏಕಕಾಲದಲ್ಲಿಯೇ ಆದಂತಾಗುತ್ತದೆ. ಇದು ಶತಪತ್ರ ಪತ್ರಶತಭೇದ ನ್ಯಾಯ.' ಕಣದಲ್ಲಿನ ಕಾಳುಗಳನ್ನು ತಿನ್ನಲು ಪಾರಿವಾಳಗಳು ಆಕಾಶಮಾರ್ಗದಿಂದ ತಾನು ಮುಂದು ತಾನು ಮುಂದು ಎಂಬಂತೆ ಇಳಿಯುವುದು ಎರಡನೆಯ ವಿಧಕ್ಕೆ ಉದಾಹರಣೆಯಾಗುತ್ತದೆ.

೧. ಅವಿರುದ್ಧ ಅನೇಕಸಂದರ್ಭರೂಪಃ ಸಮುಚ್ಚಯಾಲಂಕಾರಃ

ಬಹೂನಾಂ ಯುಗಪದ್ಭಾವಭಾಜಾಂ ಗುಂಫಃ ಸಮುಚ್ಚಯಃ ।
ನಶ್ಯಂತಿ ಪಾಶ್ಚಾತ್ ಪಶ್ಯಂತಿ ಭ್ರಮಂತಿ ಚ ತವಾಹಿತಾಃ ॥ ೧೧೨ ॥

'ಯುಗಪದ್ಭಾವಭಾಜಾಂ ಬಹೂನಾಂ ಗುಂಫಃ ಸಮುಚ್ಚಯಃ (ಇತ್ಯಲಂಕಾರಃ)'. 'ಏಕಕಾಲದಲ್ಲಿಯೇ ಸಂಭವಿಸಲು ಯೋಗ್ಯವಾದ ಅಂತೆಯೇ ಅವಿರುದ್ಧವಾದ ಅನೇಕ ಪದಾರ್ಥಗಳ ಗುಂಫನವು ಮೊದಲನೆಯ ಸಮುಚ್ಚಯಾಲಂಕಾರ.

**ಉದಾಹರಣೆ** : '(ಹೇ ರಾಜನ್) । ತವ ಅಹಿತಾಃ ನಶ್ಯಂತಿ, ಪಶ್ಚಾತ್ ಪಶ್ಯಂತಿ, ಭ್ರಮಂತಿ ಚ'. 'ಎಲೈ ರಾಜನೇ । ನಿನ್ನ ಶತ್ರುಗಳು ನಾಶಹೊಂದುತ್ತಾರೆ. ಬಳಿಕ ಓಡಿ ಹೋಗುತ್ತಾರೆ. ಮತ್ತೆ ಹಿಂತಿರುಗಿ ಭಯದಿಂದ ನೋಡುತ್ತಾರೆ. ಮತ್ತೂ ಹಾಗೆಯೇ ಎಲ್ಲೆಡೆ ಸುಮ್ಮನೆ ಅಲೆಯುತ್ತಾರೆ. ಇಲ್ಲಿ ನಾಶ, ಪಲಾಯನ, ಹಿಂತಿರುಗಿ ನೋಡುವಿಕೆ, ಭ್ರಮಣ ಈ ಕ್ರಿಯೆಗಳು ಅವಿರುದ್ಧವಾಗಿದ್ದು, ಏಕಕಾದಲ್ಲಿಯೇ ಸಂಭವಿಸಿರುವಂತೆ ವರ್ಣಿತವಾಗಿರುವುದರಿಂದ, ಇದು ಮೊದಲನೆಯ ಸಮುಚ್ಚಯಾಲಂಕಾರ.

೨. ಅಹಂಪೂರ್ವಿಕಾವತಾಂ ಏಕಾನ್ವಯರೂಪಃ ಸಮುಚ್ಚಯಾಲಂಕಾರಃ

ಅಹಂಪ್ರಾಥಮಿಕಾಭಾಜಾಮೇಕಕಾರ್ಯಾನ್ವಯೋಽಪಿ ಸಃ ।
ಕುಲಂ ರೂಪಂ ವಯೋ ವಿದ್ಯಾ ಧನಂ ಚ ಮದಯಂತ್ಯಮುಮ್ ॥ ೧೧೩ ॥

'ಅಹಂಪ್ರಾಥಮಿಕಾಭಾಜಾಂ (ಕಾರಣಾನಾಂ) ಏಕಕಾರ್ಯಾನ್ವಯಃ ಅಪಿ ಸಃ (ದ್ವಿತೀಯಃ ಸಮುಚ್ಚಯಃ)'. 'ನಾನು ಮೊದಲು ತಾನು ಮೊದಲು - ಎಂದು ಮುನ್ನುಗ್ಗುವ ಕಾರಣಗಳು ಏಕಕಾರ್ಯದಲ್ಲಿ ಅನ್ವಯವಾಗುವಂತೆ ವರ್ಣಿತವಾದರೆ ಅದೂ ಸಹ ಎರಡನೆಯ ಸಮುಚ್ಚಯಾಲಂಕಾರ.

**ಉದಾಹರಣೆ** : 'ಕುಲಂ, ರೂಪಂ, ವಯಃ, ವಿದ್ಯಾ, ಧನಂ ಚ ಅಮುಂ ಮದಯಂತಿ'. 'ಕುಲ, ರೂಪ, ವಯಸ್ಸು, ವಿದ್ಯೆ, ಧನ, ಈ ಎಲ್ಲವೂ ಇವನಿಗೆ ಮದವನ್ನುಂಟುಮಾಡುತ್ತಿವೆ. ಇಲ್ಲಿ ಮದರೂಪಕಾರ್ಯದಲ್ಲಿ ಉತ್ತಮವಂಶ, ಸೌಂದರ್ಯ, ಯೌವನ, ವೇದಶಾಸ್ತ್ರಾದಿ ಪಾಂಡಿತ್ಯ, ರತ್ನ ಕನಕಾದಿ ಧನಬಾಹುಲ್ಯ ಎಲ್ಲವೂ ಕಾರಣಗಳಾಗಿರುತ್ತವೆ. ಒಂದೊಂದೇ ಮದಕ್ಕೆ ಕಾರಣವಾದರೂ, ನಾನು ಮುಂದು ತಾನು ಮುಂದು ಎಂಬಂತೆ ಒಬ್ಬನಲ್ಲಿಯೇ ಈ ಎಲ್ಲವೂ ಸಂಗತವಾಗಿರುವುದ ರಿಂದ ಇದು ಎರಡನೆಯ ಸಮುಚ್ಚಯಾಲಂಕಾರ.

## ೫೬. ಕಾರಕದೀಪಕಾಲಂಕಾರಃ

ಒಂದೇ ಕರ್ತೃಕಾರಕದಲ್ಲಿ (ಒಬ್ಬನೇ ಕರ್ತೃವಿನಲ್ಲಿ) ಕ್ರಮಪ್ರಾಪ್ತವಾದ ಕ್ರಿಯೆಗಳ ಯೋಜನೆಯು ಕಾರಕದೀಪಕಾಲಂಕಾರವಾಗುತ್ತದೆ. ದೀಪಕದಲ್ಲಿ ಧರ್ಮೈಕ್ಯವಿದ್ದರೆ, ಇಲ್ಲಿ ಕಾರಕವೊಂದರಲ್ಲಿಯೇ ಅನೇಕ ಕ್ರಿಯೆಗಳ ಕ್ರಮಿಕವಾದ ಅನ್ವಯವಿರುತ್ತದೆ. ಏಕಕಾಲದಲ್ಲಿಯೇ ಅನೇಕ ಏಕತ್ರಸಮನ್ವಯ ಹೊಂದುವುದು ಸಮುಚ್ಚಯಾಲಂಕಾರವಾಗುತ್ತದೆ.

**ಕ್ರಮಿಕೈಕಗತಾನಾಂ ತು ಗುಂಫಃ ಕಾರಕದೀಪಕಮ್ ।**
**ಗಚ್ಛತ್ಯಾಗಚ್ಛತಿ ಪುನಃ ಪಾಂಥಃ ಪಶ್ಯತಿ ಪೃಚ್ಛತಿ ॥ ೧೧೪ ॥**

**ಕ್ರಮಿಕೈಕಗತಾನಾಂ (ಕ್ರಿಯಾಣಾಂ) ಗುಂಫಃ ತು ಕಾರಕದೀಪಕಮ್'.** 'ಕ್ರಮಪ್ರಾಪ್ತವಾಗಿ ಒಂದೇ ಕರ್ತೃಕಾರಕದಲ್ಲಿ ಅನೇಕ ಕ್ರಿಯೆಗಳು ಅನ್ವಯವಾಗುವಂತೆ ವರ್ಣನೆಯಾದುದಾದರೆ ಅದು ಕಾರಕದೀಪಕಾಲಂಕಾರ'.

**ಉದಾಹರಣೆ :** ವಿರಹಿಯಾಗಲಿರುವ ಪಥಿಕನ ಸ್ಥಿತಿಯ ವರ್ಣನೆ - 'ಪಾಂಥಃ ಗಚ್ಛತಿ, ಪುನಃ ಆಗಚ್ಛತಿ, ಪಶ್ಯತಿ (ತತಃ) ಪೃಚ್ಛತಿ'. 'ಪ್ರಯಾಣ ಹೊರಡಲುದ್ಯುಕ್ತನಾಗಿರುವ ಪಥಿಕನು ಪ್ರಿಯೆಯನ್ನು ಬಿಟ್ಟು ಬಹಳ ಪ್ರಯಾಸದಿಂದಲೇ ಹೊರಡುತ್ತಾನೆ.ಆದರೆ ಮತ್ತೆ ಹಿಂತಿರುಗುತ್ತಾನೆ, ಪ್ರಿಯೆಯ ಮುಖವನ್ನೇ ನೆಟ್ಟದೃಷ್ಟಿಯಿಂದ ನೋಡುತ್ತಾನೆ; ನಾನು ಹೊರಡುವುದು ನಿನಗೆ ಇಷ್ಟವೋ? ಅಥವಾ ಇಷ್ಟವಿಲ್ಲವೋ ? ಎಂದು ಪ್ರಶ್ನಿಸುತ್ತಾನೆ'. - ಹೀಗೆ ಪಥಿಕರೂಪ ಏಕಕರ್ತೃವಿನಲ್ಲಿ ಗಮನ-ಆಗಮನ - ದರ್ಶನ - ಪ್ರಶ್ನಕರಣರೂಪ ಅನೇಕ ಕ್ರಿಯೆಗಳು ಕ್ರಮವಾಗಿ ಅನ್ವಯವಾಗುವಂತೆ ಇಲ್ಲಿ ವರ್ಣಿತವಾಗಿರುವುದರಿಂದ ಇದು ಕಾರಕದೀಪಕಾಲಂಕಾರ.

## ೫೭. ಸಮಾಧ್ಯಲಂಕಾರಃ

ಯಾವುದೇ ಕಾರ್ಯಕ್ಕೆ ಕಾರಣವೊಂದು ಇರಲೇಬೇಕು. ಕೆಲವೊಮ್ಮೆ ತಮ್ಮ ಕಾರ್ಯಸಾಧನೆಗೆ ಬೇರೆ ಕಾರಣವೂ ಸಾಧಕವಾಗಬಹುದು. ಈ ರೀತಿಯ ವರ್ಣನೆ ಸಮಾಧ್ಯಲಂಕಾರವೆನಿಸುತ್ತದೆ.

**ಸಮಾಧಿಃ ಕಾರ್ಯಸೌಕರ್ಯಂ ಕಾರಣಾಂತರಸನ್ನಿಧೇಃ ।**
**ಉತ್ಕಂಠಿತಾ ಚ ಕುಲಟಾ ಜಗಾಮಾಸ್ತಂ ಚ ಭಾನುಮಾನ್ ॥ ೧೧೫ ॥**

**'ಕಾರಣಾಂತರಸನ್ನಿಧೇಃ ಕಾರ್ಯಸೌಕರ್ಯಂ (ಸ್ಯಾತ್ ಚೇತ್) ಸಮಾಧಿಃ (ಇತಿ ಅಲಂಕಾರಃ)'.** ವಸ್ತುತಃ ಮೂಲ ಕಾರಣವನ್ನು ಬಿಟ್ಟು ಬೇರೊಂದು ಕಾರಣವು ಆರಬ್ಧಕಾರ್ಯಕ್ಕೆ ಸೌಕರ್ಯವನ್ನು ಒದಗಿಸಿಕೊಟ್ಟದ್ದಾದರೆ, ಅದು ಸಮಾಧ್ಯಲಂಕಾರವೆನಿಸುತ್ತದೆ.

**ಉದಾಹರಣೆ :** 'ಕುಲಟಾ ಚ ಉತ್ಕಂಠಿತಾ, ಭಾನುಮಾನ್ ಚ ಅಸ್ತಂ ಜಗಾಮ' 'ಜಾರಿಣಿಯು ಪ್ರಿಯಾಭಿಸರಣ ವಿಷಯದಲ್ಲಿ ಬಹಳ ಉತ್ಸುಕಳಾಗಿದ್ದಳು; ಅಷ್ಟರಲ್ಲಿ ಸೂರ್ಯನು ಮುಳುಗಿದನು'. ಪ್ರಿಯಾಭಿಸರಣ (ಉಪಪತಿಯ ಮನೆಗೆ ಹೋಗುವ) ಕಾರ್ಯಕ್ಕೆ ಉತ್ಕಂಠತೆಯೊಂದೇ ಪರ್ಯಾಪ್ತ ಕಾರಣವಾಗಿರುತ್ತದೆ. ಆದರೆ, ಇಷ್ಟರಲ್ಲಿ 'ಕಾಕತಾಲೀಯ ನ್ಯಾಯ'ದಂತೆ ಅನಿರೀಕ್ಷಿತವಾಗಿ ಸೂರ್ಯ ಮುಳುಗಿ ಕತ್ತಲೆಯಾದದ್ದು, ಕುಲಟೆಯ ಅಭಿಸರಣ ಕಾರ್ಯಕ್ಕೆ ಇನ್ನೂ ಹೆಚ್ಚಿನ ಸೌಕರ್ಯವನ್ನೇ ಒದಗಿಸಿಕೊಟ್ಟಿತು - ಎಂದು ವರ್ಣನೆ ಇರುವುದರಿಂದ ಇದು ಸಮಾಧ್ಯಲಂಕಾರ. ಕಾಗೆಯು ಆಹಾರಕ್ಕಾಗಿ ತನ್ನ ಗೂಡಿನಿಂದ ಹೊರ ಹೊರಟಿತು. ಅದೇ ವೇಳೆಗೆ ಮಾಗಿದ ತಾಳಫಲವು ತೊಟ್ಟು ಕಳಚಿ ಕೆಳಗೆ ಬಿತ್ತು. ಆಹಾರಾಪೇಕ್ಷಿಯಾದ ಕಾಗೆಯ ಆಹಾರಾನ್ವೇಷಣೆಯ ಕಾರ್ಯಕ್ಕೆ ಈ ತಾಳೆಹಣ್ಣು ಸುಕರವಾದಂತೆ, ಪ್ರಕೃತ ಉದಾಹರಣೆಯಲ್ಲಿ ಸೂರ್ಯಾಸ್ತವು ಅಭಿಸರಣ ಕಾರ್ಯಕ್ಕೆ ಸೌಕರ್ಯವನ್ನು ಒದಗಿಸುತ್ತದೆ ಎಂದು ಭಾವ.

## ೫೮. ಪ್ರತ್ಯನೀಕಾಲಂಕಾರಃ

ಪ್ರಬಲವಾದ ಶತ್ರುವನ್ನು ಎದುರಿಸುವುದು ಕಷ್ಟವಾದ್ದರಿಂದ ಆ ಶತ್ರುವಿನ ಸಂಬಂಧಿಯ ವಿಷಯದಲ್ಲಿ ತನ್ನ ಪರಾಕ್ರಮವನ್ನು ತೋರಿದಂತೆ ಮಾಡುವ ವರ್ಣನೆ ಪ್ರತ್ಯನೀಕಾಲಂಕಾರ ವೆನಿಸುತ್ತದೆ.

**ಪ್ರತ್ಯನೀಕಂ ಬಲವತಃ ಶತ್ರೋಃ ಪಕ್ಷೇ ಪರಾಕ್ರಮಃ |**
**ಜೈತ್ರನೇತ್ರಾನುಗೌ ಕರ್ಣಾವುತ್ಪಲಾಭ್ಯಾಮಧಃ ಕೃತೌ || ೧೧೬ ||**

'ಬಲವತಃ ಶತ್ರೋಃ (ಸಂಬಂಧಿನಿ) ಪಕ್ಷೇ ಪರಾಕ್ರಮಃ ಪ್ರತ್ಯನೀಕಮ್' ಇತಿ ಅಲಂಕಾರಃ - ಪ್ರಬಲ ಶತ್ರುವಿನ ಸಂಬಂಧಿ ಮಿತ್ರಾದಿ ವಿಷಯದಲ್ಲಿ ಪರಾಕ್ರಮದ ವರ್ಣನೆ ಪ್ರತ್ಯನೀಕಾಲಂಕಾರ ವಾಗುತ್ತದೆ.

ಉದಾಹರಣೆ : 'ಉತ್ಪಲಾಭ್ಯಾಂ ಜೈತ್ರನೇತ್ರಾನುಗೌ ಕರ್ಣೌ ಅಧಃ ಕೃತೌ' 'ತಮ್ಮನ್ನು (ಇಂದೀವರಗಳನ್ನು) ಜಯಿಸಿರುವ ನೇತ್ರಗಳ ಅನುವರ್ತಿಗಳಾದ ಕರ್ಣಗಳನ್ನು ಇಂದೀವರಗಳು (ತಿರಸ್ಕರಿಸಿವೆ) ತುಳಿದಿವೆ. ಇಲ್ಲಿ ನೇತ್ರಗಳು ಇಂದೀವರಗಳನ್ನು ಜಯಿಸಿರುವುದರಿಂದ, ಇಂದೀವರಗಳಿಗೆ ನೇತ್ರಗಳು ಪ್ರಬಲಶತ್ರುವಾದಂತಾಯ್ತು. ಆದ್ದರಿಂದ ಈ ನೇತ್ರಗಳ ಮೇಲೆ ಇಂದೀವರಗಳು ತಮ್ಮ ಪರಾಕ್ರಮವನ್ನು ಪ್ರದರ್ಶಿಸಲು ಅಸಮರ್ಥಗಳಾಗಿ, ಆ ನೇತ್ರಗಳ ಅನುವರ್ತಿಗಳಾದ ಕರ್ಣಗಳ ಮೇಲೆ ಕುಳಿತು ಅವುಗಳನ್ನು ತುಳಿದವು - ಎಂದು ತಾತ್ಪರ್ಯ. ನಾಯಿಕೆಯ ನೇತ್ರಗಳು ಕರ್ಣಾಂತ ವಿಶ್ರಾಂತವಾಗಿದ್ದವಾದ್ದರಿಂದ ಕರ್ಣಗಳು ನಯನಾನುವರ್ತಿಗಳಾದಂತಾಯ್ತು. ಇಂತಹ ಕರ್ಣಗಳ ಮೇಲೆ ಉತ್ಪಲಗಳು ಅಲಂಕಾರಕ್ಕಾಗಿ ಧರಿಸಲ್ಪಟ್ಟಿದ್ದವು ಎಂಬ ಅಭಿಪ್ರಾಯವನ್ನು - ಶತ್ರುಪಕ್ಷೀಯ ಕರ್ಣಗಳನ್ನು ತಿರಸ್ಕರಿಸಿವೆ ಎಂದು ವರ್ಣಿಸಿರುವುದರಿಂದ ಇದು ಪ್ರತ್ಯನೀಕಾಲಂಕಾರ.

## ೫೯. ಕಾವ್ಯಾರ್ಥಾಪತ್ತ್ಯಲಂಕಾರಃ

ಅರ್ಥಸಾಮರ್ಥ್ಯದಿಂದಲೇ ಮತ್ತೊಂದು ಅರ್ಥವು ಸಿದ್ಧವಾಗುವುದು ಅರ್ಥಾಪತ್ತಿ ಎನಿಸುತ್ತದೆ. ಇದು ಚಮತ್ಕಾರವುಳ್ಳದ್ದಾದರೆ ಆಗ ಕಾವ್ಯಾರ್ಥಾಪತ್ತಿ - ಎಂಬ ಅಲಂಕಾರ ವಾಗುತ್ತದೆ. ಇದನ್ನು ಸೂಚಿಸಲು 'ಕಿಮುತ' ಇತ್ಯಾದಿ ಪದಗಳ ಪ್ರಯೋಗವಿರುತ್ತದೆ.

**ಕೈಮುತ್ಯೇನಾರ್ಥಸಂಸಿದ್ಧಿಃ ಕಾವ್ಯಾರ್ಥಾಪತ್ತಿರಿಷ್ಯತೇ |**
**ಸ ಜಿತಸ್ತ್ವನ್ಮುಖೇನೇಂದುಃ ಕಾ ವಾರ್ತಾ ಸರಸೀರುಹಾಮ್ || ೧೧೭ ||**

ಕೈಮುತ್ಯೇನ ಅರ್ಥಸಂಸಿದ್ಧಿಃ ಕಾವ್ಯಾರ್ಥಾಪತ್ತಿಃ (ಇತಿ) ಇಷ್ಯತೇ'. 'ಕಿಮುತ, ಕಿಮುತ ಕಥನೀಯಂ, ಕಾ ವಾ ವಾರ್ತಾ' ಇತ್ಯಾದಿ ಪದಗಳ ಮುಖಾಂತರ ಅರ್ಥಾಂತರದ ಸಿದ್ಧಿಯಾಗುವುದಾದರೆ ಅದು ಕಾವ್ಯಾರ್ಥಾಪತ್ತ್ಯಲಂಕಾರ. ಇದಕ್ಕೆ 'ಕೈಮುತಿಕನ್ಯಾಯ' ಅಥವಾ 'ದಂಡಾ ಪೂಪಿಕಾನ್ಯಾಯ'ವನ್ನು ಉದಾಹರಿಸಲಾಗುತ್ತದೆ ದಂಡದಲ್ಲಿ ಕೋಡುಬಳೆಗಳನ್ನು ಇಡಲಾಗಿತ್ತು. ಇಲಿಯು ದಂಡವನ್ನೇ ತಿಂದಿರುವಾಗ, ಕೋಡುಬಳೆಗಳನ್ನು ತಿಂದಿದೆ - ಎಂದು ಹೇಳಲೇಬೇಕಾಗಿಲ್ಲವಷ್ಟೆ! ಇದು ಅರ್ಥದ ಸಾಮರ್ಥ್ಯದಿಂದಲೇ ತೋರುತ್ತದೆ. ಇದೇ ಕಾವ್ಯಾರ್ಥಾಪತ್ತ್ಯಲಂಕಾರ

ಉದಾಹರಣೆ : 'ಹೇ ಸಖಿ ! ಸಃ ಇಂದುಃ ತ್ವನ್ಮುಖೇನ ಜಿತಃ, ಸರಸೀರುಹಾಂ (ಜಯವಿಷಯೇ) ಕಾ ವಾರ್ತಾ?'. 'ಎಲೌ ಸಖಿಯೇ ! ಜಯಿಸಲಸಾಧ್ಯನಾದ ಆ ಚಂದ್ರನು ನಿನ್ನ ಮುಖದಿಂದ (ಮುಖ ಕಾಂತಿಯಿಂದ) ಜಯಿಸಲ್ಪಟ್ಟಿರುವುದರಿಂದ, ಇವನ ವಿರೋಧಿಗಳಾಗಿರುವ (ಚಂದ್ರನು ಮೂಡಿದಾಗ ಬಾಡಿಹೋಗುವ) ಪದ್ಮಗಳು ಸಹ ಜಯಿಸಲ್ಪಟ್ಟಿವೆ' ಎಂಬ ವಿಷಯದಲ್ಲಿ ಹೇಳುವುದೇನಿದೆ? ಇಲ್ಲಿ ಚಂದ್ರನ ಜಯವು ಕಷ್ಟಸಾಧ್ಯ. ಆದರೆ ಕಮಲಗಳ ಜಯವು ಸುಲಭಸಾಧ್ಯ. ಕಷ್ಟಸಾಧ್ಯವಾದ ಚಂದ್ರನ ಜಯವೇ ಮುಖದಿಂದಾಗಿರುವುದರಿಂದ, ಈ ಮುಖವು ಕಮಲಗಳನ್ನೂ ಜಯಿಸಿದೆಯೆಂಬುದು 'ಕಾ ವಾರ್ತಾ' ಎಂಬ ಪದದಿಂದ ತೋರುವುದರಿಂದ ಇದು ಕಾವ್ಯಾರ್ಥಪತ್ತ್ಯಲಂಕಾರ.

## ೬೦. ಕಾವ್ಯಲಿಂಗಾಲಂಕಾರಃ

ಎರಡು ವಾಕ್ಯಗಳಲ್ಲಿ ಪರಸ್ಪರ ಸಮರ್ಥ್ಯ - ಸಮರ್ಥಕಭಾವವಿದ್ದಲ್ಲಿ, ಅದು ಕಾವ್ಯಲಿಂಗಾಲಂಕಾರವಾಗುತ್ತದೆ. ಇಂತಹ ವಾಕ್ಯಗಳಲ್ಲಿ ಸಾಮಾನ್ಯ - ವಿಶೇಷಭಾವವಿದ್ದರೆ ಅದು ಅರ್ಥಾಂತರನ್ಯಾಸಾಲಂಕಾರವಾಗುತ್ತದೆ. ಒಂದು ಅರ್ಥವು ಸಮರ್ಥನಯೋಗ್ಯವಾಗಿದ್ದು, ಅದನ್ನು ಸಮರ್ಥಿಸಲು ಒಂದು ಸಮರ್ಥಕ ವಾಕ್ಯವನ್ನು ಹೇಳುವುದು ಕಾವ್ಯಲಿಂಗಾಲಂಕಾರವಾಗುತ್ತದೆ.

ಸಮರ್ಥನೀಯಸ್ಯಾರ್ಥಸ್ಯ ಕಾವ್ಯಲಿಂಗಂ ಸಮರ್ಥನಮ್ ।
ಜಿತೋಽಸಿ ಮಂದ ಕಂದರ್ಪ ಮಚ್ಚಿತ್ತೇಽಸ್ತಿ ತ್ರಿಲೋಚನಃ ॥ ೧೧೮ ॥

'ಸಮರ್ಥನೀಯಸ್ಯ ಅರ್ಥಸ್ಯ ಸಮರ್ಥನಂ ಕಾವ್ಯಲಿಂಗಂ (ಇತ್ಯಲಂಕಾರಃ)'. 'ಸಮರ್ಥನೆ'ಯನ್ನು ಬಯಸಿರುವ ಒಂದು ಅರ್ಥಕ್ಕೆ ಸಮರ್ಥನರೂಪವಾದ ಹೇತುವನ್ನು ಹೇಳಿದ್ದಾದರೆ, ಅದು ಕಾವ್ಯಲಿಂಗಾಲಂಕಾರ'. ಸಮರ್ಥನೆಗಾಗಿ ಒಂದು ಪದಾರ್ಥವನ್ನಾದರೂ ಹೇಳಬಹುದು. ಅಥವಾ ಒಂದು ವಾಕ್ಯಾರ್ಥವನ್ನಾದರೂ ಹೇಳಬಹುದು.

ಉದಾಹರಣೆ : 'ಹೇ ಮಂದ ಕಂದರ್ಪ ! (ಮಯಾ) (ತ್ವಂ) ಜಿತಃ ಅಸಿ, (ಯತಃ) ಮಚ್ಚಿತ್ತೇ ತ್ರಿಲೋಚನಃ ಅಸ್ತಿ'. 'ಎಲೈ ಜಡನಾದ (ಮೂರ್ಖನಾದ) ಮನ್ಮಥನೇ ! ನನ್ನಿಂದ ನೀನು ಪರಾಜಿತನಾಗಿರುವೆ. ಏಕೆಂದರೆ ನನ್ನ ಮನಸ್ಸಿನಲ್ಲಿ ತ್ರಿಲೋಚನನಾದ ಶಿವನಿರುವನು.' - ಇಲ್ಲಿ ಕಂದರ್ಪಜಯವೆಂಬುದು ದುಸ್ಸಾಧ್ಯ. ಆದ್ದರಿಂದ, 'ಕಂದರ್ಪಜಯವು' ಇಲ್ಲಿ ಸಮರ್ಥನೀಯವಾಗಿದೆ. ಅಂದರೆ ಸಮರ್ಥನೆಯನ್ನು ಬಯಸುತ್ತಿದೆ. ಇದಕ್ಕೆ 'ತನ್ನ ಹಣೆಗಣ್ಣಿನಿಂದ ಮನ್ಮಥನನ್ನು ಭಸ್ಮಮಾಡಿರುವ ಶಿವನೇ ನನ್ನ ಮನಸ್ಸಿನಲ್ಲಿರುವುದರಿಂದ, ಮನ್ಮಥಜಯವು ಸುಲಭವಾಯಿತು' ಎಂಬ ಹೇತುರೂಪಸಮರ್ಥನೆಯನ್ನು ಹೇಳಿರುವುದರಿಂದ ಇದು ಕಾವ್ಯಲಿಂಗಾಲಂಕಾರ.

## ೬೧. ಅರ್ಥಾಂತರನ್ಯಾಸಃ

ಒಂದು ಸಾಮಾನ್ಯವಾಕ್ಯ, ಮತ್ತೊಂದು ವಿಶೇಷವಾಕ್ಯವಿದ್ದು, ಈ ಎರಡು ವಾಕ್ಯಗಳಲ್ಲಿ ಪರಸ್ಪರ ಸಮರ್ಥ್ಯ- ಸಮರ್ಥಕ ಭಾವವಿದ್ದಲ್ಲಿ ಅದು ಅರ್ಥಾಂತರನ್ಯಾಸಾಲಂಕಾರವಾಗುತ್ತದೆ.

ಸಾಮಾನ್ಯದಿಂದ ವಿಶೇಷಸಮರ್ಥನರೂಪ, ವಿಶೇಷದಿಂದ ಸಾಮಾನ್ಯಸಮರ್ಥನರೂಪ - ಎಂದು ಈ ಅಲಂಕಾರವು ಎರಡು ವಿಧವಾಗಿರುತ್ತದೆ. ವಿಶೇಷವು ಪ್ರಸ್ತುತವಾಗಿದ್ದರೆ ಸಾಮಾನ್ಯವು ಅಪ್ರಸ್ತುತವಾಗಿರುತ್ತದೆ. ಹಾಗೆಯೇ ಸಾಮಾನ್ಯವು ಪ್ರಸ್ತುತವಾಗಿದ್ದರೆ ವಿಶೇಷವು ಅಪ್ರಸ್ತುತವಾಗಿರುತ್ತದೆ.

ಒಂದನೇ ವಿಧ - ಸಾಮಾನ್ಯದಿಂದ ವಿಶೇಷಸಮರ್ಥನೆ —

ಉಕ್ತಿರರ್ಥಾಂತರನ್ಯಾಸಃ ಸ್ಯಾತ್ಸಾಮಾನ್ಯವಿಶೇಷಯೋಃ |
ಹನೂಮಾನಬ್ಧಿಮತರದ್ ದುಷ್ಕರಂ ಕಿಂ ಮಹಾತ್ಮನಾಮ್ || ೧೧೯ ||

'ಸಾಮಾನ್ಯವಿಶೇಷಯೋಃ ಉಕ್ತಿಃ ಅರ್ಥಾಂತರನ್ಯಾಸಃ ಸ್ಯಾತ್'. 'ಪರಸ್ಪರಸಮರ್ಥನ ಸಾಪೇಕ್ಷವಾದ ಸಾಮಾನ್ಯವಾಕ್ಯ ಮತ್ತು ವಿಶೇಷವಾಕ್ಯಗಳನ್ನು ಹೇಳಿದ್ದಾದರೆ ಅದು ಅರ್ಥಾಂತರನ್ಯಾಸಾಲಂಕಾರವಾಗುತ್ತದೆ'. ಸಾಮಾನ್ಯವಾಕ್ಯದಿಂದ ವಿಶೇಷವಾಕ್ಯವೂ ಸಮರ್ಥಿತವಾಗಬಹುದು. ಅಥವಾ ವಿಶೇಷವಾಕ್ಯದಿಂದ ಸಾಮಾನ್ಯವಾಕ್ಯವೂ ಸಮರ್ಥಿತವಾಗಬಹುದು.

ಉದಾಹರಣೆ : 'ಹನೂಮಾನ್ ಅಬ್ಧಿಂ ಅತರತ್; ಮಹಾತ್ಮನಾಂ ದುಷ್ಕರಂ ಕಿಂ (ಅಸ್ತಿ)?' ಹನುಮಂತನು ಸಮುದ್ರವನ್ನು ದಾಟಿದನು. (ಇದು ಸತ್ಯ. ಏಕೆಂದರೆ) ಮಹಾತ್ಮರಾದವರಿಗೆ ಯಾವುದೂ ದುಷ್ಕರವಲ್ಲ'. ಇಲ್ಲಿ 'ಹನುಮಂತನ ಸಮುದ್ರತರಣ' ವಿಶೇಷವಾಕ್ಯ. (ಇದು ಕೇವಲ ಒಬ್ಬ ವ್ಯಕ್ತಿಗೆ ಅನ್ವಯಿಸುವುದರಿಂದ), ಇದು ಸಮರ್ಥನೆಯನ್ನು ಬಯಸುತ್ತಿದೆ. 'ಮಹಾತ್ಮರಿಗೆ ಯಾವುದೂ ಕಷ್ಟವಲ್ಲ' ಎಂಬ ಸಾಮಾನ್ಯವಾಕ್ಯವು ಈ ವಿಶೇಷವಾಕ್ಯವನ್ನು ಸಮರ್ಥನೆ ಮಾಡುವುದರಿಂದ, ಇದು ಅರ್ಥಾಂತರನ್ಯಾಸಾಲಂಕಾರ.

ಎರಡನೇ ವಿಧ - ವಿಶೇಷದಿಂದ ಸಾಮಾನ್ಯಸಮರ್ಥನೆ —

ಗುಣವದ್ವಸ್ತುಸಂಸರ್ಗಾದ್ಯಾತಿ ಸ್ವಲ್ಪೋಽಪಿ ಗೌರವಮ್ |
ಪುಷ್ಪಮಾಲಾನುಷಂಗೇಣ ಸೂತ್ರಂ ಶಿರಸಿ ಧಾರ್ಯತೇ || ೧೨೦ ||

'ಸ್ವಲ್ಪಃ ಅಪಿ ಗುಣವದ್ವಸ್ತುಸಂಸರ್ಗಾತ್ ಗೌರವಂ ಯಾತಿ (ಏತತ್ತು ಯುಕ್ತಮೇವ, ಯತಃ) ಪುಷ್ಪಮಾಲಾನುಷಂಗೇಣ ಸೂತ್ರಂ ಶಿರಸಿ ಧಾರ್ಯತೇ' 'ನಿಕೃಷ್ಟವಸ್ತುವೂ ಸಹ ಗುಣವುಳ್ಳ ವಸ್ತುವಿನ ಸಂಪರ್ಕದಿಂದ ಗೌರವಕ್ಕೆ ಪಾತ್ರವಾಗುತ್ತದೆ. ಇದು ಯುಕ್ತವೇ ಹೌದು. ಹೇಗೆಂದರೆ, ಪುಷ್ಪಮಾಲಿಕೆಯ ಸಂಪರ್ಕದಿಂದ ಗುಣರಹಿತವಾದ ದಾರವೂ ಸಹ ಶಿರಸ್ಸಿನಲ್ಲಿ ಧರಿಸಲ್ಪಡುತ್ತದೆ'. ಇಲ್ಲಿ ಪೂರ್ವಾರ್ಧವು ಪ್ರಸ್ತುತ ಸಾಮಾನ್ಯವಾಕ್ಯವಾಗಿದ್ದು, ಇದು ಸಮರ್ಥನೆಯನ್ನು ಬಯಸುವುದರಿಂದ, ಇದರ ಸಮರ್ಥನೆಗಾಗಿ ಉತ್ತರಾರ್ಧವಾದ ಅಪ್ರಸ್ತುತ ವಿಶೇಷವಾಕ್ಯವನ್ನು ಹೇಳಿರುವುದರಿಂದ ಇದು ಎರಡನೆಯ ಅರ್ಥಾಂತರನ್ಯಾಸಾಲಂಕಾರ.

## ೬೨. ವಿಕಸ್ವರಾಲಂಕಾರಃ

ಸಾಮಾನ್ಯವಾಕ್ಯವೊಂದರ ಸಮರ್ಥನೆಗೆ ವಿಶೇಷವಾಕ್ಯವೊಂದನ್ನು ಹೇಳುವುದು, ಅಥವಾ ವಿಶೇಷವಾಕ್ಯದ ಸಮರ್ಥನೆಗೆ ಸಾಮಾನ್ಯವಾಕ್ಯವನ್ನು ಹೇಳುವುದು ಒಂದು ರೀತಿಯ

ಚಮತ್ಕಾರವಾದರೆ (ಅರ್ಥಾಂತರನ್ಯಾಸವಾದರೆ), ಒಂದು ವಿಶೇಷವಾಕ್ಯವನ್ನು ಸಮರ್ಥನೆ ಮಾಡುವ ಸಲುವಾಗಿ ಒಂದು ಸಾಮಾನ್ಯವಾಕ್ಯವನ್ನು ಹೇಳಿ, ಪುನಃ ಇದರ ಸಮರ್ಥನೆಗಾಗಿ ಒಂದು ಉಪಮಾನವನ್ನೋ, ಅಥವಾ ಮತ್ತೊಂದು ವಿಶೇಷವಾಕ್ಯವನ್ನೋ ಹೇಳುವುದು ವಿಕಸ್ವರಾಲಂಕಾರವಾಗುತ್ತದೆ. ಇಲ್ಲಿ ಉಪಮಾನರೀತ್ಯಾ ವಿಕಸ್ವರವನ್ನು ಮಾತ್ರ ಉದಾಹರಿಸಲಾಗಿದೆ.

**ಯಸ್ಮಿನ್ ವಿಶೇಷಸಾಮಾನ್ಯವಿಶೇಷಾಃ ಸ ವಿಕಸ್ವರಃ |**
**ಸ ನ ಜಿಗ್ಯೇ ಮಹಾಂತೋ ಹಿ ದುರ್ಧರ್ಷಾಃ ಸಾಗರಾ ಇವ || ೧೨೧ ||**

**'ಯಸ್ಮಿನ್ ವಿಶೇಷಸಾಮಾನ್ಯವಿಶೇಷಾಃ (ಸಮರ್ಥ್ಯ - ಸಮರ್ಥಕಭಾವೇನ ಉಪಮಾನರೀತ್ಯಾ ವಾ ವರ್ಣ್ಯಂತೇ) ಸಃ ವಿಕಸ್ವರಃ (ಇತ್ಯಲಂಕಾರಃ)'.** 'ಯಾವ ಕಾವ್ಯದಲ್ಲಿ ವಿಶೇಷವಾಕ್ಯ-ಸಾಮಾನ್ಯ ವಾಕ್ಯ- ವಿಶೇಷವಾಕ್ಯಗಳು ಸಮರ್ಥ್ಯ - ಸಮರ್ಥಕಭಾವದಿಂದ ಅಥವಾ ಉಪಮಾನರೀತಿಯಿಂದ ವರ್ಣಿತವಾಗಿರುತ್ತವೋ, ಅದು ವಿಕಸ್ವರಾಲಂಕಾರವಾಗುತ್ತದೆ'.

**ಉದಾಹರಣೆ : ಸಃ ನ ಜಿಗ್ಯೇ; (ವಿತತ್ತು ಸತ್ಯಂ, ಯತಃ) ಮಹಾಂತಃ ಸಾಗರಾಃ ಇವ ದುರ್ಧರ್ಷಾಃ ಹಿ'.** 'ಆ ಪ್ರಸಿದ್ಧನಾದ ರಾಜನು ಯಾರಿಂದಲೂ ಜಯಿಸಲ್ಪಟ್ಟಿಲ್ಲ. ಇದು ಯುಕ್ತವೇ ಹೌದು, ಹೇಗೆಂದರೆ ಮಹಾತ್ಮರಾದವರು ಸಾಗರಗಳಂತೆ ಜಯಿಸಲಸಾಧ್ಯರಷ್ಟೆ!' ಇಲ್ಲಿ ಸಃ ನ ಜಿಗ್ಯೇ ಎನ್ನುವುದು ವಿಶೇಷವಾಕ್ಯ. ಇದನ್ನು ಸಮರ್ಥಿಸಲು 'ಮಹಾಂತಃ ಹಿ ದುರ್ಧರ್ಷಾಃ' ಎಂಬ ಸಾಮಾನ್ಯವಾಕ್ಯವನ್ನು ಹೇಳಿದ್ದು, ಪುನಃ ಈ ವಾಕ್ಯವನ್ನು ಸಮರ್ಥನೆ ಮಾಡುವ ಸಲುವಾಗಿ 'ಸಾಗರಾಃ ಇವ' ಎಂಬ ಉಪಮಾನವಾಕ್ಯವನ್ನು ಹೇಳಿರುವುದರಿಂದ, ಇದು ವಿಕಸ್ವರಾಲಂಕಾರ.

## ೬೩. ಪ್ರೌಢೋಕ್ತ್ಯಲಂಕಾರಃ

ಒಂದು ವಸ್ತುವಿನಲ್ಲಿನ ಉತ್ಕೃಷ್ಟತೆಗೆ ಒಂದು ವಸ್ತುವು ಕಾರಣವಿಲ್ಲದಿದ್ದರೂ, ಅದರ ಉತ್ಕೃಷ್ಟತೆಗಾಗಿ ಅದನ್ನೇ ಹೇತುವನ್ನಾಗಿ ಕಲ್ಪನೆ ಮಾಡುವುದು ಪ್ರೌಢೋಕ್ತ್ಯಲಂಕಾರ.

**ಪ್ರೌಢೋಕ್ತಿರುತ್ಕರ್ಷಾಹೇತೌ ತದ್ಧೇತುತ್ವಪ್ರಕಲ್ಪನಮ್ |**
**ಕಚಾಃ ಕಲಿಂದಜಾತೀರತಮಾಲಸ್ತೋಮಮೇಚಕಾಃ || ೧೨೨ ||**

**'ಉತ್ಕರ್ಷಾಹೇತೌ ತದ್ಧೇತುತ್ವಪ್ರಕಲ್ಪನಂ ಪ್ರೌಢೋಕ್ತಿಃ'.** 'ಒಂದು ವಸ್ತುವಿನ ಉತ್ಕರ್ಷಕ್ಕೆ ಕಾರಣವಲ್ಲದೇ ಇದ್ದರೂ, ಆ ಉತ್ಕರ್ಷತೆಗೋಸ್ಕರ ಅದನ್ನೇ ಕಾರಣವನ್ನಾಗಿ ಕಲ್ಪಿಸಿ ವರ್ಣಿಸುವುದು ಪ್ರೌಢೋಕ್ತ್ಯಲಂಕಾರ'.

**ಉದಾಹರಣೆ : 'ಕಚಾಃ ಕಲಿಂದಜಾತೀರತಮಾಲಸ್ತೋಮಮೇಚಕಾಃ'** 'ಕಾಂತೆಯ ಕೇಶಪಾಶಗಳು ಯಮುನಾ ನದಿಯ ತೀರದಲ್ಲಿ ಬೆಳೆದಿರುವ ತಮಾಲವೃಕ್ಷಗಳು ಸ್ವಾಭಾವಿಕವಾಗಿಯೇ ನೈಲ್ಯವರ್ಣವುಳ್ಳವು. ಆದರೂ 'ಕಲಿಂದಜಾತೀರ' ಎಂಬ ವಿಶೇಷಣವನ್ನು ಹೇಳಿರುವುದರಿಂದ, ಯಮುನಾನದಿಯ ನೀರು ಕಪ್ಪು, ಇಂತಹ ನೀರನ್ನು ಪಡೆದು ಬೆಳೆದಿರುವ ತಮಾಲವೃಕ್ಷಗಳು ಇನ್ನೂ ಹೆಚ್ಚು ನೈಲ್ಯವುಳ್ಳವು - ಎಂಬ ವಿಶಿಷ್ಟಾರ್ಥವು ತೋರುತ್ತದೆ. ಈ ಉದಾಹರಣೆಯಲ್ಲಿ

ನೈಲ್ಯಾತಿಶಯತ್ವಕ್ಕೆ ಕಲಿಂದಜಾತೀರಸ್ಥತ್ವವು ಕಾರಣವಲ್ಲದೇ ಇದ್ದರೂ, ಅದನ್ನೇ ಇಲ್ಲಿ ಉತ್ಕರ್ಷತೆಗಾಗಿ ಹೇತುವನ್ನಾಗಿ ಕಲ್ಪಿಸಿರುವುದರಿಂದ ಇದು ಪ್ರೌಢೋಕ್ತ್ಯಲಂಕಾರ. ಕಾಂತೆಯ ಕೇಶಪಾಶಗಳು ಅಷ್ಟೊಂದು ಅತ್ಯಂತ ಕಪ್ಪು ಬಣ್ಣವುಳ್ಳವು ಎಂಬುದೇ ಉತ್ಕರ್ಷತೆ.

## ೬೪. ಸಂಭಾವನಾಲಂಕಾರಃ

ಒಂದು ವಿವಕ್ಷಿತಾರ್ಥದ (ವಿವರಿಸಲು ಸ್ವೀಕರಿಸುವ ವಸ್ತುವಿನ) (ಅಥವಾ ಅರ್ಥದ) ಸಿದ್ಧಿಗಾಗಿ 'ಹೀಗಾದಲ್ಲಿ ಇದು ಹೀಗಾಗಬಹುದು' - ಇತ್ಯಾದಿ ರೀತಿಯ ಊಹೆ ಮಾಡುವುದೂ ಸಹ ಒಂದು ಚಮತ್ಕಾರವಿಶೇಷವಾಗಿ ಸಂಭಾವನಾಲಂಕಾರವೆನಿಸುತ್ತದೆ. ಇದು ಸಂಭವನಾ ಜ್ಞಾನವಾಗಿರದೆ, ಕೇವಲ ಊಹೆ ಅಥವಾ ತರ್ಕವಷ್ಟೆ।

ಸಂಭಾವನಂ ಯದೀತ್ಥಂ ಸ್ಯಾದಿತ್ಯೂಹೋಽನ್ಯಸ್ಯ ಸಿದ್ಧಯೇ ।
ಯದಿ ಶೇಷೋ ಭವೇದ್ವಕ್ತಾ ಕಥಿತಾಃ ಸ್ಯುರ್ಗುಣಾಸ್ತವ ॥ ೧೨೩ ॥

'ಅನ್ಯಸ್ಯ ಸಿದ್ಧಯೇ ಯದಿ ಇತ್ಥಂ ಸ್ಯಾತ್ ಇತಿ ಊಹಃ (ಯತ್,ತತ್) ಸಂಭಾವನಂ (ಇತ್ಯಲಂಕಾರಃ)'. 'ಒಂದು ವಿವಕ್ಷಿತವಾದ ಅರ್ಥದ ಸಿದ್ಧಿಗಾಗಿ, ಒಂದು ವೇಳೆ ಹೀಗೆ ಇದ್ದಲ್ಲಿ ಹೀಗಾಗುತ್ತಿತ್ತು ಎಂಬ ಊಹೆಯ ಯಾವ ವರ್ಣನೆಯುಂಟೋ, ಅದು ಸಂಭಾವನಾಲಂಕಾರ'.

**ಉದಾಹರಣೆ : ಹೇ ರಾಜನ್ । ಯದಿ ಶೇಷಃ ವಕ್ತಾ ಭವೇತ್, (ತದಾ) ತವ ಗುಣಾಃ ಕಥಿತಾಃ ಸ್ಯುಃ** 'ಎಲೈ ರಾಜನೇ ! ಒಂದು ವೇಳೆ ಆದಿಶೇಷನೇ ನಿನ್ನ ಗುಣಗಳನ್ನು ವರ್ಣನೆ ಮಾಡುವವನಾದರೆ, ಆಗ ನಿನ್ನ ಎಲ್ಲ ಗುಣಗಳನ್ನೂ ಹೇಳಿದಂತಾಗುತ್ತದೆ. ಅಂದರೆ ನಿನ್ನ ಶೌರ್ಯ ಔದಾರ್ಯಾದಿ ಗುಣಗಳು ಅನಂತವೇ ಆಗಿರುವುದರಿಂದ, ಸಹಸ್ರಮುಖನಾದ ಆದಿಶೇಷನಿಂದ ಮಾತ್ರ ಅವುಗಳನ್ನು ಸಮಗ್ರವಾಗಿ ವರ್ಣನೆ ಮಾಡಲು ಸಾಧ್ಯ, ಏಕಮುಖನಾದ ನನ್ನಿಂದ ಸಾಧ್ಯವಿಲ್ಲ ಎಂದು ತಾತ್ಪರ್ಯ. ಇಲ್ಲಿ ರಾಜನ ಗುಣಗಳ ಅಪರಿಮಿತತ್ವವನ್ನು ಸಿದ್ಧಿಮಾಡುವ ಸಲುವಾಗಿ, 'ಒಂದು ವೇಳೆ ಶೇಷನೇ ವಕ್ತೃವಾದಲ್ಲಿ ನಿನ್ನ ಗುಣಗಳನ್ನು ನಿಶ್ಶೇಷ ಹೇಳಿದಂತಾಗುತ್ತಿತ್ತು'- ಎಂಬ ಊಹೆಯನ್ನು ಇಲ್ಲಿ ವರ್ಣಿಸಿರುವುದರಿಂದ ಇದು ಸಂಭಾವನಾಲಂಕಾರ.

## ೬೫. ಮಿಥ್ಯಾಧ್ಯವಸಿತ್ಯಲಂಕಾರಃ

ಒಂದು ಮಿಥ್ಯಾರ್ಥವನ್ನು ಸಿದ್ಧಿಮಾಡುವ ಸಲುವಾಗಿ ಮತ್ತೊಂದು ಮಿಥ್ಯಾರ್ಥದ ಕಲ್ಪನೆ ಒಂದು ವಿಶಿಷ್ಟವಾದ ಚಮತ್ಕಾರವೇ ಹೌದು. ಇದು ಮಿಥ್ಯಾಧ್ಯವಸಿತಿ ಎಂಬ ಅಲಂಕಾರ ವಾಗುತ್ತದೆ.

ಕಿಂಚನ್ಮಿಥ್ಯಾತ್ವಸಿದ್ಧ್ಯರ್ಥಂ ಮಿಥ್ಯಾರ್ಥಾಂತರಕಲ್ಪನಮ್ ।
ಮಿಥ್ಯಾಧ್ಯವಸಿತಿರ್ವೇಶ್ಯಾಂ ವಶಯೇತ್ ಖಸ್ರಜಂ ವಹನ್ ॥ ೧೨೪ ॥

'ಕಿಂಚನ್ಮಿಥ್ಯಾತ್ವಸಿದ್ಧ್ಯರ್ಥಂ ಮಿಥ್ಯಾರ್ಥಾಂತರಕಲ್ಪನಂ ಮಿಥ್ಯಾಧ್ಯವಸಿತಿಃ (ಇತ್ಯಲಂಕಾರಃ ಭವತಿ)'. ಒಂದು ಮಿಥ್ಯಾರ್ಥತ್ವದ ಸಿದ್ಧಿಗಾಗಿ ಮತ್ತೊಂದು ಮಿಥ್ಯಾರ್ಥವನ್ನು ಕಲ್ಪಿಸಿ ವರ್ಣಿಸುವುದು ಮಿಥ್ಯಾಧ್ಯವಸಿತ್ಯಲಂಕಾರ'.

ಉದಾಹರಣೆ : 'ಖಸ್ರಜಂ ವಹನ್ ವೇಶ್ಯಾಂ ವಶಯೇತ್'. 'ವೇಶ್ಯೆಯನ್ನು ವಶಪಡಿಸಿ ಕೊಳ್ಳಬಯಸುವವನು ಗಗನಕುಸುಮಮಾಲೆಯನ್ನು ಧರಿಸಿ ವಶಪಡಿಸಿಕೊಳ್ಳಬೇಕು'. ಗಗನ ಕುಸುಮವು ಹೇಗೆ ಅಸಂಭವವೋ, ಹಾಗೆಯೇ ವೇಶ್ಯಾವಶೀಕರಣವೂ ಸಹ ಅಸಂಭವ ಎಂದು ತಾತ್ಪರ್ಯ. ವೇಶ್ಯಾವಶೀಕರಣವೆಂಬ ಮಿಥ್ಯಾರ್ಥತ್ವದ ಸಿದ್ಧಿಗಾಗಿ, ಮತ್ತೊಂದು ಮಿಥ್ಯಾರ್ಥವಾದ ಗಗನಕುಸುಮಮಾಲೆಯನ್ನು ಧರಿಸಿ - ಎಂಬ ವಾಕ್ಯವನ್ನು ಕಲ್ಪನೆ ಮಾಡಿ ವರ್ಣಿಸಿರುವುದರಿಂದ ಇದು ಮಿಥ್ಯಾಧ್ಯವಸಿತ್ಯಲಂಕಾರ.

## ೬೬. ಲಲಿತಾಲಂಕಾರಃ

ಪ್ರಸ್ತುತ ಧರ್ಮಿಗೆ ಸಂಬಂಧಿಸಿದಂತೆ, ಈ ಧರ್ಮಿಗೆ ಸಂಬಂಧಿಸಿದ ವೃತ್ತಾಂತವನ್ನು ವರ್ಣಿಸದೆ, ಇದರ ಪ್ರತಿಬಿಂಬರೂಪವಾದ ಅಪ್ರಸ್ತುತವೃತ್ತಾಂತವನ್ನು ಪ್ರಸ್ತುತಧರ್ಮಿಯಲ್ಲಿ ಆರೋಪರೂಪವಾಗಿ ವರ್ಣಿಸಿದ್ದಾದರೆ ಅದು ಲಲಿತಾಲಂಕಾರ. ಪ್ರಕೃತಧರ್ಮಿಯು ಉಪಾತ್ತವಾಗಿರುತ್ತದೆ. ಆದರೆ, ಇದರ ಸಂಬಂಧವಾದ ವೃತ್ತಾಂತವಿರದೆ, ಈ ವೃತ್ತಾಂತಕ್ಕೆ ಪ್ರತಿಬಿಂಬ ರೂಪವಾದ ಅಪ್ರಸ್ತುತ ವೃತ್ತಾಂತದ ವರ್ಣನೆ ಇರುತ್ತದೆ.

ಪ್ರಸ್ತುತೇ ವರ್ಣ್ಯವಾಕ್ಯಾರ್ಥಪ್ರತಿಬಿಂಬಸ್ಯ ವರ್ಣನಮ್ |
ಲಲಿತಂ ನಿರ್ಗತೇ ನೀರೇ ಸೇತುಮೇಷಾ ಚಿಕೀರ್ಷತಿ || ೧೨೫ ||

'ಪ್ರಸ್ತುತೇ (ಧರ್ಮಿಣಿ) ವರ್ಣ್ಯವಾಕ್ಯಾರ್ಥಪ್ರತಿಬಿಂಬಸ್ಯ ವರ್ಣನಂ ಲಲಿತಮ್' - 'ಪ್ರಸ್ತುತ ಧರ್ಮಿಯಲ್ಲಿ, ಈ ಪ್ರಸ್ತುತಧರ್ಮಿಸಂಬಂಧವಾದ ವಾಕ್ಯಾರ್ಥವನ್ನು ವರ್ಣಿಸದೆ, ಇದರ ಪ್ರತಿಬಿಂಬರೂಪವಾದ ಅವರ್ಣ್ಯವಾಕ್ಯಾರ್ಥವನ್ನು ವರ್ಣಿಸಿದರೆ, ಅದು ಲಲಿತಾಲಂಕಾರ'.

ಉದಾಹರಣೆ : 'ಏಷಾ, ನೀರೇ ನಿರ್ಗತೇ ( ಸತಿ) ಸೇತುಂ ಚಿಕೀರ್ಷತಿ'. 'ಈ ನಾಯಿಕೆಯು, ನೀರೆಲ್ಲ ಹೋದ ಮೇಲೆ ಸೇತುವನ್ನು ಕಟ್ಟಬಯಸಿದ್ದಾಳೆ'. ಓರ್ವ ನಾಯಕನು ತನ್ನ ನಾಯಿಕೆಯ ಬಳಿ ಬಂದಾಗ, ಕೋಪದಿಂದ ಅವನನ್ನು ನಾಯಿಕೆಯು ಉಪೇಕ್ಷಿಸುವಳು. ಅವನು ಹೊರಟುಹೋಗಿ ಬೇರೊಬ್ಬ ನಾಯಿಕೆಯಲ್ಲಿ ಆಸಕ್ತನಾಗಿರಲು, ಪಶ್ಚಾತ್ತಾಪಪಟ್ಟ ನಾಯಿಕೆಯು ಮತ್ತೆ ಅವನನ್ನು ಕರೆತರಲು ಸಖಿಯನ್ನು ಕಳುಹಿಸುತ್ತಿರುವಳು. ಆ ಸಂದರ್ಭದಲ್ಲಿ ಸಖಿ ಹೇಳುವ ಮಾತಿದು. 'ನಾಯಕನು ಹೋದ ಮೇಲೆ ಅವನನ್ನು ಕರೆತರುವ ಪ್ರಯತ್ನ' ವು ಪ್ರಕೃತಧರ್ಮಿಯಾದ ನಾಯಿಕೆಗೆ ಸಂಬಂಧಿಸಿದ ವೃತ್ತಾಂತ. ಆದರೆ, ಈ ವೃತ್ತಾಂತವನ್ನು ವರ್ಣಿಸದೆ, ಇದರ ಪ್ರತಿಬಿಂಬ ರೂಪವಾದ ಮತ್ತು ಅಪ್ರಸ್ತುತವಾದ 'ಗತಜಲಸೇತುಬಂಧನರೂಪ' ವಾಕ್ಯಾರ್ಥವನ್ನು, ಪ್ರಕೃತಧರ್ಮಿಗೆ ಸಂಬಂಧಿಸಿದಂತೆ ಇಲ್ಲಿ ವರ್ಣಿಸಿರುವುದರಿಂದ ಇದು ಲಲಿತಾಲಂಕಾರ.

## ೬೭. ಪ್ರಹರ್ಷಣಾಲಂಕಾರಃ

ಕಾರ್ಯಸಿದ್ಧಿಯು ಸ್ವಾಭಾವಿಕವಾಗಿಯೇ ಹರ್ಷದಾಯಕ. ಇಂತಹ ಕಾರ್ಯಸಿದ್ಧಿಯು ಪರಿಶ್ರಮ ವಿಲ್ಲದೆಯೂ ಆಗಬಹುದು, ತಾನು ಬಯಸಿದ್ದಕ್ಕಿಂತ ಅಧಿಕವೂ ಆಗಿರಬಹುದು, ಅಥವಾ

ಕಾರ್ಯಸಿದ್ಧಿಗಾಗಿ ಉಪಾಯವನ್ನು ಮಾಡುತ್ತಿರುವಾಗ ಸಾಕ್ಷಾತ್ತಾಗಿ ಫಲವೇ ಕೈಗೂಡಬಹುದು. ಇದೆಲ್ಲವೂ ಪ್ರಹರ್ಷಣವೇ ಆಗುತ್ತದೆ. ಹೀಗೆ ಈ ಅಲಂಕಾರವು ೧. ಯತ್ನಂ ವಿನಾ ಈಪ್ಸಿತಾರ್ಥಸಿದ್ಧಿರೂಪಃ ೨. ವಾಂಛಿತಾರ್ಥಾತ್ ಅಧಿಕಾರ್ಥಸಿದ್ಧಿರೂಪಃ ಮತ್ತು ೩. ಉಪಾಯಾರ್ಥಯತ್ನಾತ್ ಫಲಸಿದ್ಧಿರೂಪಃ - ಎಂದು ಮೂರು ವಿಧವಾಗಿರುತ್ತದೆ. ಕ್ರಮವಾಗಿ ಇವುಗಳ ವಿವರಣೆ -

**೧. ಯತ್ನಂ ವಿನಾ ಈಪ್ಸಿತಾರ್ಥಸಿದ್ಧಿರೂಪಃ ಪ್ರಹರ್ಷಣಾಲಂಕಾರಃ —**

**ಉತ್ಕಂಠಿತಾರ್ಥಸಂಸಿದ್ಧಿರ್ವಿನಾ ಯತ್ನಂ ಪ್ರಹರ್ಷಣಮ್ ।**
**ತಾಮೇವ ಧ್ಯಾಯತೇ ತಸ್ಮೈ ನಿಸ್ಸೃಷ್ಟಾ ಸೈವ ದೂತಿಕಾ ॥ ೧೨೬ ॥**

'ಯತ್ನಂ ವಿನಾ ಉತ್ಕಂಠಿತಾರ್ಥಸಂಸಿದ್ಧಿಃ ಪ್ರಹರ್ಷಣಂ (ಇತ್ಯಲಂಕಾರಃ)' ಪ್ರಯತ್ನವೇ ಇಲ್ಲದೆ, ತನ್ನ ಈಪ್ಸಿತಾರ್ಥದ ಸಿದ್ಧಿಯಾದುದಾದರೆ ಅದು ಮೊದಲನೆಯ ಪ್ರಹರ್ಷಣಾಲಂಕಾರ'.

**ಉದಾಹರಣೆ :** 'ತಾಂ ಏವ ಧ್ಯಾಯತೇ ತಸ್ಮೈ ಸಾ ಏವ ದೂತಿಕಾ ನಿಸ್ಸೃಷ್ಟಾ' ಯಾವ ನಾಯಿಕೆಯನ್ನು ನಾಯಕನು ಧ್ಯಾನಿಸುತ್ತಿದ್ದನೋ ಅಂತಹ ಆ ನಾಯಕನ ಬಳಿಗೆ, ಅವನನ್ನು ಕರೆತರಲು ಅವನಿಗೆ ಅಭೀಷ್ಟಳಾದ ಆ ದೂತಿಯೇ (ನಾಯಿಕೆಯಿಂದ) ಕಳುಹಿಸಲ್ಪಟ್ಟಳು, ನಾಯಿಕೆಯ ಪ್ರಾಪ್ತಿ, ನಾಯಕನ ಅಭೀಪ್ಸೆ. ಅವನು ಯಾವುದೇ ಪ್ರಯತ್ನ ಮಾಡದೇ, ದೂತಿಯ ಆಗಮನದ ಮುಖಾಂತರ ಅವನ ಅಭೀಪ್ಸೆ ನೆರವೇರಿದ್ದರಿಂದ ಇದು ಮೊದಲನೆಯ ಪ್ರಹರ್ಷಣಾಲಂಕಾರ.

**೨. ವಾಂಛಿತಾರ್ಥಾತ್ ಅಧಿಕಾರ್ಥಸಿದ್ಧಿರೂಪಃ ಪ್ರಹರ್ಷಣಾಲಂಕಾರಃ —**

**ವಾಂಛಿತಾದಧಿಕಾರ್ಥಸ್ಯ ಸಂಸಿದ್ಧಿಶ್ಚ ಪ್ರಹರ್ಷಣಮ್ ।**
**ದೀಪಮುದ್ಯೋತಯೇದ್ಯಾವತ್ ತಾವದಭ್ಯುದಿತೋ ರವಿಃ ॥ ೧೨೭ ॥**

ವಾಂಛಿತಾತ್ ಅಧಿಕಾರ್ಥಸ್ಯ ಸಂಸಿದ್ಧಿಃ ಚ ಪ್ರಹರ್ಷಣಂ (ಇತ್ಯಲಂಕಾರಃ)' ತಾನು ಬಯಸಿದ್ದಕ್ಕಿಂತ ಇನ್ನೂ ಹೆಚ್ಚಿನ ಫಲಪ್ರಾಪ್ತಿಯಾದಂತೆ ವರ್ಣಿತವಾದರೆ ಅದು ಎರಡನೆಯ ಪ್ರಹರ್ಷಣಾಲಂಕಾರ.

**ಉದಾಹರಣೆ :** 'ಯಾವತ್ ದೀಪಂ ಉದ್ಯೋತಯೇತ್, ತಾವತ್ (ಏವ) ರವಿಃ ಅಭ್ಯುದಿತಃ' - 'ಎಷ್ಟರಲ್ಲಿ ಬೆಳಕಿಗಾಗಿ ದೀಪವನ್ನು ಬೆಳಗಿಸಲಾರಂಭಿಸಲಾಯಿತೋ, ಆ ಕೂಡಲೇ ಸೂರ್ಯನೇ ಉದಯಿಸಿದನು' ಇಲ್ಲಿ ಪದಾರ್ಥಪ್ರಕಾಶನಕ್ಕಾಗಿ ದೀಪವನ್ನು ಹಚ್ಚುವ ಪ್ರಯತ್ನವಾಗುತ್ತಿರುವಾಗಲೇ, ತಾನು ಬಯಸಿದ್ದಕ್ಕಿಂತ ಹೆಚ್ಚಿನ ಫಲವೇ ಆದ ಸೂರ್ಯೋದಯವಾದಂತೆ ವರ್ಣನೆ ಇರುವುದರಿಂದ ಇದು ಎರಡನೆಯ ಪ್ರಹರ್ಷಣಾಲಂಕಾರ.

**೩. ಉಪಾಯಾರ್ಥಯತ್ನಾತ್ ಫಲಸಿದ್ಧಿರೂಪಃ ಪ್ರಹರ್ಷಣಾಲಂಕಾರಃ —**

**ಯತ್ನಾದುಪಾಯಸಿದ್ಧ್ಯರ್ಥಾತ್ ಸಾಕ್ಷಾಲ್ಲಾಭಃ ಫಲಸ್ಯ ಚ ।**
**ನಿಧ್ಯಂಜನೌಷಧೀಮೂಲಂ ಖನತಾ ಸಾಧಿತೋ ನಿಧಿಃ ॥ ೧೨೮ ॥**

'ಉಪಾಯಸಿದ್ಧ್ಯರ್ಥಾತ್ ಯತ್ನಾತ್ ಸಾಕ್ಷಾತ್ ಫಲಸ್ಯ ಲಾಭಃ ಚ (ಪ್ರಹರ್ಷಣಂ)' 'ಒಂದು ಕಾರ್ಯಸಿದ್ಧಿಗಾಗಿ ಬೇಕಾದ ಉಪಾಯವನ್ನು ಪಡೆಯಲು ಪ್ರಯತ್ನಿಸುತ್ತಿರುವಾಗ, ಸಾಕ್ಷಾತ್ತಾಗಿ ತನ್ನ ಅಭೀಷ್ಟಫಲವೇ ದೊರಕುವುದು ಮೂರನೆಯ ಪ್ರಹರ್ಷಣಾಲಂಕಾರ'.

ಉದಾಹರಣೆ : 'ನಿಧ್ಯಂಜನೌಷಧೀಮೂಲಂ ಖನತಾ (ಪುರುಷೇಣ) ನಿಧಿಃ ಸಾಧಿತಃ'. ನಿಧಿಯನ್ನು ಕಂಡುಹಿಡಿಯಲು ಬೇಕಾದ ಅಂಜನದ ಔಷಧಿಯ ಬೇರನ್ನು ಅಗೆಯುತ್ತಿರುವವನಿಗೆ ಅಲ್ಲಿ ನಿಧಿಯೇ ದೊರೆಯಿತು'. ಹೂತಿಟ್ಟಿರುವ ನಿಧಿಯನ್ನು ಕಂಡುಹಿಡಿಯಲು ಅಂಜನವು ಬೇಕಷ್ಟೆ। ಈ ಅಂಜನವನ್ನು ಒಂದು ವಿಶಿಷ್ಟ ಔಷಧಿಯ ಬೇರಿನಿಂದ ಸಿದ್ಧಪಡಿಸಲಾಗುತ್ತದೆ. ಇಂತಹ ಉಪಾಯಭೂತ ಬೇರನ್ನು ಪಡೆಯಲು ನೆಲವನ್ನು ಅಗೆಯುತ್ತಿರುವಾಗ ಅಲ್ಲಿಯೇ ಉದ್ದಿಷ್ಟನಿಧಿಯೇ ದೊರೆಯಿತೆಂದು ವರ್ಣಿತವಾಗಿರುವುದರಿಂದ ಇದು ಮೂರನೆಯ ಪ್ರಹರ್ಷಣಾಲಂಕಾರವಾಗುತ್ತದೆ.

## ೬೮. ವಿಷಾದನಾಲಂಕಾರಃ

ಇದು ಪ್ರಹರ್ಷಣಾಲಂಕಾರಕ್ಕೆ ವಿರುದ್ಧವಾದ ಅಲಂಕಾರ. ಒಂದು ಫಲವನ್ನು ಬಯಸಿ ಪ್ರಯತ್ನ ಮಾಡುತ್ತಿರುವಾಗ, ಅದಕ್ಕೆ ವಿರುದ್ಧವಾದ ಫಲದ ಪ್ರಾಪ್ತಿಯಾಗುವುದು ವಿಷಾದನಾಲಂಕಾರ.

ಇಷ್ಯಮಾಣವಿರುದ್ಧಾರ್ಥಸಂಪ್ರಾಪ್ತಿಸ್ತು ವಿಷಾದನಮ್ ।
ದೀಪಮುದ್ಯೋತಯೇದ್ಯಾವನ್ನಿರ್ವಾಣಸ್ತಾವದೇವ ಸಃ ॥ ೧೨೯ ॥

'ಇಷ್ಯಮಾಣವಿರುದ್ಧಾರ್ಥಸಂಪ್ರಾಪ್ತಿಃ, ತು ವಿಷಾದನಂ (ಇತ್ಯಲಂಕಾರಃ)' 'ತಾನು ಬಯಸಿದ ಫಲಕ್ಕೆ ವಿರುದ್ಧವಾದ ಫಲದ ಪ್ರಾಪ್ತಿಯಾಗುವುದಾದರೆ ಅದು ವಿಷಾದನಾಲಂಕಾರ.

ಉದಾಹರಣೆ : 'ಯಾವತ್ ದೀಪಂ ಉದ್ಯೋತಯೇತ್ ತಾವತ್ ಏವ ಸಃ ನಿರ್ವಾಣಃ' 'ಎಷ್ಟರಲ್ಲಿ ದೀಪವನ್ನು ಬೆಳಗಿಸಲು (ಬೆಳಕನ್ನು ಹೆಚ್ಚು ಮಾಡಲು) ಪ್ರಯತ್ನಿಸಲಾಯಿತೋ, ಅಷ್ಟರಲ್ಲಿಯೇ, ಆ ದೀಪವೇ ಆರಿಹೋಯಿತು.' ಇಲ್ಲಿ ಬಯಸಿದ ಪ್ರಯತ್ನ ದೀಪದ ಉದ್ಯೋತನ. ಆದರೆ ದೀಪನಿರ್ವಾಣರೂಪ ವಿರುದ್ಧಫಲವು ಪ್ರಾಪ್ತವಾದಂತೆ ವರ್ಣಿತವಾಗಿರುವುದರಿಂದ ಇದು ವಿಷಾದನಾಲಂಕಾರ.

## ೬೯. ಉಲ್ಲಾಸಾಲಂಕಾರಃ ( ತದ್ಭೇದಾಃ )

ಒಬ್ಬರ ಗುಣ ಅಥವಾ ದೋಷಗಳು ಬೇರೊಬ್ಬರ ಗುಣದೋಷಗಳಿಗೆ ಕಾರಣವಾಗುವುದಾದರೆ ಅದು ಉಲ್ಲಾಸಾಲಂಕಾರ. ಒಬ್ಬರ ಗುಣದಿಂದ ಬೇರೊಬ್ಬರಲ್ಲಿ ಗುಣವಾಗಲೀ, ದೋಷವಾಗಲೀ ಉಂಟಾಗುವುದು ಉಲ್ಲಾಸ. ಅಂದರೆ ಈ ಅಲಂಕಾರವು ೧. ಅನ್ಯಗುಣೇನ ತದನ್ಯಗುಣೋತ್ಪತ್ತಿವರ್ಣನರೂಪಃ ೨. ಅನ್ಯದೋಷೇಣ ತದನ್ಯದೋಷೋತ್ಪತ್ತಿವರ್ಣನರೂಪಃ ೩. ಅನ್ಯಗುಣೇನ ತದನ್ಯಸ್ಯ ದೋಷೋತ್ಪತ್ತಿವರ್ಣನರೂಪಃ ೪. ಅನ್ಯದೋಷೇಣ ತದನ್ಯಸ್ಯ ಗುಣೋತ್ಪತ್ತಿವರ್ಣನರೂಪಃ ಎಂದು ನಾಲ್ಕು ವಿಧವಾಗುತ್ತದೆ.

ಏಕಸ್ಯ ಗುಣದೋಷಾಭ್ಯಾಮುಲ್ಲಾಸೋऽನ್ಯಸ್ಯ ತೌ ಯದಿ ।
ಅಪಿ ಮಾಂ ಪಾವಯೇತ್ ಸಾಧ್ವೀ ಸ್ನಾತ್ವೇತೀಚ್ಛತಿ ಜಾಹ್ನವೀ ॥ ೧೩೦ ॥

'ಏಕಸ್ಯ ಗುಣದೋಷಾಭ್ಯಾಂ ಅನ್ಯಸ್ಯ ತೌ ಯದಿ (ಸ್ಯಾತಾಂ ಚೇತ್ ಸಃ) ಉಲ್ಲಾಸಃ (ಇತ್ಯಲಂಕಾರ)'. 'ಒಬ್ಬರ ಗುಣ-ದೋಷಗಳ ಕಾರಣದಿಂದ ಬೇರೊಬ್ಬರಲ್ಲಿ ಗುಣ-ದೋಷಗಳು ಉಂಟಾಗುವುದಾದರೆ ಅದು ಉಲ್ಲಾಸಾಲಂಕಾರ'. ಕ್ರಮವಾಗಿ ೧. ಗುಣದಿಂದ ಗುಣ ೨. ದೋಷದಿಂದ ದೋಷ ೩. ಗುಣದಿಂದ ದೋಷ ೪. ದೋಷದಿಂದ ಗುಣ ಈ ರೀತಿಯ ಉತ್ಪತ್ತಿಕ್ರಮವೆಂದು ನಾಲ್ಕು ವಿಧ. ಕ್ರಮವಾಗಿ ಇವುಗಳ ಉದಾಹರಣೆ -

೧. ಅನ್ಯಗುಣೇನ ತದನ್ಯಸ್ಯ ಗುಣೋತ್ಪತ್ತಿವರ್ಣನರೂಪಃ —

'(ಇಯಂ) ಸಾಧ್ವೀ ಸ್ನಾತ್ವಾ ಮಾಂ ಪಾವಯೇತ್ ಇತಿ ಜಾಹ್ನವೀ ಅಪಿ ಇಚ್ಛತಿ ?' 'ಈ ಪತಿವ್ರತೆಯು ನನ್ನಲ್ಲಿ ಸ್ನಾನಮಾಡಿ, ನನ್ನನ್ನು ಪವಿತ್ರಗೊಳಿಸುವಳೇನು ? ಎಂದು ಗಂಗೆಯು ಬಯಸುತ್ತಿರಬಹುದೇ? ಎಂಬ ಈ ಉದಾಹರಣೆಯಲ್ಲಿ ಗಂಗೆಯು ಸ್ವಭಾವತಃ ಪವಿತ್ರಳೇ ಆಗಿದ್ದರೂ, ಸಾಧ್ವಿಯು ತನ್ನ ಮಹಿಮೆಯ ಗುಣದಿಂದ ಇನ್ನೂ ಹೆಚ್ಚು ಪವಿತ್ರಳಾಗಿರುವುದರಿಂದ, ಈ ಸಾಧ್ವಿಯು ಗಂಗೆಯಲ್ಲಿ ಸ್ನಾನಮಾಡಿ ಗಂಗೆಯನ್ನು ಇನ್ನೂ ಹೆಚ್ಚು ಪಾವನಗೊಳಿಸುವಳೆಂದು, ಸಾಧ್ವಿಯ ಮಹಿಮೆಯ ಗುಣದ ಕಾರಣ ಗಂಗೆಯಲ್ಲಿ ಮಹಿಮೆಯ ಗುಣೋತ್ಪತ್ತಿಯನ್ನು ವರ್ಣಿಸಿರುವುದರಿಂದ ಇದು ಮೊದಲನೆಯ ಉಲ್ಲಾಸಾಲಂಕಾರ.

೨. ಅನ್ಯದೋಷೇಣ ತದನ್ಯಸ್ಯ ದೋಷೋತ್ಪತ್ತಿವರ್ಣನರೂಪಃ —

ಕಾಠಿನ್ಯಂ ಕುಚಯೋಃ ಸ್ರಷ್ಟುಂ ವಾಂಛಂತ್ಯಃ ಪಾದಪದ್ಮಯೋಃ ।
ನಿಂದಂತಿ ವಿಶ್ವಧಾತಾರಂ ತ್ವದ್ಧಾಟೀಷ್ವರಿಯೋಷಿತಃ ॥ ೧೩೧ ॥

ರಾಜನ ಪರಾಕ್ರಮಾತಿಶಯದ ವರ್ಣನೆ - 'ಹೇ ರಾಜನ್ । ತ್ವದ್ಧಾಟೀಷು ಅರಿಯೋಷಿತಃ ಕುಚಯೋಃ ಸ್ರಷ್ಟುಂ ಕಾಠಿನ್ಯಂ ಪಾದಪದ್ಮಯೋಃ ವಾಂಛಂತ್ಯಃ (ಸತ್ಯಃ) ವಿಶ್ವಧಾತಾರಂ ನಿಂದಂತಿ.' 'ಎಲೈ ರಾಜನೇ ! ನಿನ್ನ ವನಪ್ರದೇಶಗಳಲ್ಲಿ ಶತ್ರುಸ್ತ್ರೀಯರುಗಳು, ಕಾಲುನಡಿಗೆಯ ಮುಖಾಂತರ ಪಲಾಯನಮಾಡುತ್ತಾ, ತಮ್ಮ ಕುಚಗಳಲ್ಲಿನ ಕಾಠಿಣ್ಯವನ್ನು ಬ್ರಹ್ಮನು ತಮ್ಮ ಪಾದಪದ್ಮಗಳಲ್ಲಿ ಸೃಷ್ಟಿಸಬೇಕಾಗಿತ್ತೆಂದು ಬಯಸತಕ್ಕವರಾಗಿ, ಜಗತ್ಸೃಷ್ಟಿಕರ್ತನಾದ ಬ್ರಹ್ಮನನ್ನು ನಿಂದಿಸುತ್ತಿರುವರು; ವನಪ್ರದೇಶದಲ್ಲಿ ಧಾವಿಸುತ್ತಿರುವ ಸ್ತ್ರೀಯರು, ಧಾವನಕ್ಕೆ ವಿರೋಧಿಯಾಗಿರುವ ತಮ್ಮ ಪಾದಗಳ ಮಾರ್ದವದೋಷದಿಂದ, ಆ ಪಾದಗಳಲ್ಲಿ ಕಾಠಿಣ್ಯವನ್ನು ಸೃಷ್ಟಿಸದೆ ತಮ್ಮ ಕುಚಗಳಲ್ಲಿ ಕಾಠಿಣ್ಯವನ್ನು ಸೃಷ್ಟಿಸಿದ ಬ್ರಹ್ಮನ ನಿಂದಾರೂಪದೋಷವು ಇಲ್ಲಿ ವರ್ಣಿತವಾಗಿರುವುದರಿಂದ ಇದು ಎರಡನೆಯ ಉಲ್ಲಾಸಾಲಂಕಾರ.

೩. ಅನ್ಯಗುಣೇನ ತದನ್ಯಸ್ಯ ದೋಷೋತ್ಪತ್ತಿವರ್ಣನರೂಪಃ —

ತದಭಾಗ್ಯಂ ಧನಸ್ಯೈವ ಯನ್ನಾಶ್ರಯತಿ ಸಜ್ಜನಮ್ ।

**ತತ್ ಧನಸ್ಯೈವ ಅಭಾಗ್ಯಂ, ಯತ್ ಸಜ್ಜನಂ ನ ಆಶ್ರಯತಿ**'. 'ಯಾವ ಕಾರಣದಿಂದ ಧನವು ಸಜ್ಜನರನ್ನು ಆಶ್ರಯಿಸುವುದಿಲ್ಲವೋ ಅದು ಆ ಧನದ ದೌರ್ಭಾಗ್ಯವೇ ಸರಿ'. ಇಲ್ಲಿ ಸಜ್ಜನರ ಗುಣದಿಂದ, ಅವರನ್ನು ಆಶ್ರಯಿಸದಿರುವ ಧನದ ದೋಷವೆಂದು, ಅನ್ಯಗುಣದಿಂದ ತದನ್ಯದೋಷದ ಉತ್ಪತ್ತಿಯನ್ನು ವರ್ಣಿಸಿರುವುದರಿಂದ ಇದು ಮೂರನೆಯ ಉಲ್ಲಾಸಾಲಂಕಾರ.

**೪. ಅನ್ಯದೋಷೇಣ ತದನ್ಯಸ್ಯ ಗುಣೋತ್ಪತ್ತಿವರ್ಣನರೂಪಃ —**

**ಲಾಭೋऽಯಮೇವ ಭೂಪಾಲ-ಸೇವಕಾನಾಂ ನ ಚೇದ್ವಧಃ ||೧೩೨||**

'**ಭೂಪಾಲಸೇವಕಾನಾಂ ವಧಃ ನ ಚೇತ್ ಯದಿ ಅಯಮೇವ ಲಾಭಃ**'. 'ರಾಜನ ಸೇವಕರ ವಧೆಯಾಗದಿರುವಿಕೆಯೇ ಒಂದು ಲಾಭವಷ್ಟೆ'. । ಇಲ್ಲಿ ರಾಜನ ಕ್ರೌರ್ಯದ ದೋಷದಿಂದ, ಸೇವಕರ ವಿಷಯದಲ್ಲಿ ವಧೆಯ ರೂಪವಾದ ದೋಷವಾಗದೇ, ಪ್ರಾಣಸಹಿತ ಹಿಂತಿರುಗುವಿಕೆ ಎಂಬ ಗುಣೋತ್ಪತ್ತಿರೂಪವಾಗಿ ವರ್ಣಿತವಾಗಿರುವುದರಿಂದ ಇದು ನಾಲ್ಕನೆಯ ಉಲ್ಲಾಸಾಲಂಕಾರ.

## ೭೦. ಅವಜ್ಞಾಲಂಕಾರಃ (ತದ್ಭೇದಾಃ)

ಒಬ್ಬನ ಗುಣದೋಷಗಳು ಮತ್ತೊಬ್ಬನ ಗುಣದೋಷಗಳಿಗೆ ಕಾರಣವಾಗುವುದು ಉಲ್ಲಾಸಾಲಂಕಾರವಾದರೆ, ಇದಕ್ಕೆ ವಿರುದ್ಧವಾಗಿ, ಗುಣದೋಷಗಳಿಂದ ಇತರರಲ್ಲಿ ಗುಣದೋಷಗಳಾಗದೇ ಇರುವುದು ಇದಕ್ಕೆ ಪ್ರತಿದ್ವಂದ್ವಿಯಾದ ಅವಜ್ಞಾಲಂಕಾರವಾಗುತ್ತದೆ. ಇದು ೧) ಅನ್ಯಗುಣೇನ ಅನ್ಯಗುಣಾಭಾವಃ ೨) ಅನ್ಯದೋಷೇಣ ಅನ್ಯದೋಷಾಭಾವಃ - ಎಂದು ಎರಡು ವಿಧವಾಗುತ್ತದೆ.

**ತಾಭ್ಯಾಂ ತೌ ಯದಿ ನ ಸ್ಯಾತಾಮವಜ್ಞಾಲಂಕೃತಿರ್ಮತಾ |**
**ಸ್ವಲ್ಪಮೇವಾಂಬು ಲಭತೇ ಪ್ರಸ್ಥಃ ಪ್ರಾಪ್ಯಾಪಿ ಸಾಗರಮ್ ||೧೩೩||**

'**ತಾಭ್ಯಾಂ** = ಗುಣದೋಷಾಭ್ಯಂ, **ತೌ** = ಗುಣದೋಷೌ ಯದಿ ನ ಸ್ಯಾತಾಂ (ತದಾ) **ಅವಜ್ಞಾಲಂಕೃತಿಃ** (ಇತಿ) ಮತಾ'. 'ಇತರರ ಗುಣದೋಷಗಳಿಂದ ಇತರರಲ್ಲಿ ಗುಣ ದೋಷಗಳು ಆಗಲಿಲ್ಲ- ಅಭಾವ - ಎಂದು ವರ್ಣಿಸಿದ್ದಾದರೆ ಅವಜ್ಞಾಲಂಕಾರ 'ವಾಗುತ್ತದೆ. ಇದು ಈ ಮೇಲ್ಕಂಡಂತೆ ೧) ಅನ್ಯಗುಣೇನ ಅನ್ಯಗುಣಾಭಾವಃ ೨) ಅನ್ಯದೋಷೇಣ ಅನ್ಯದೋಷಾಭಾವಃ - ಎಂದು ಎರಡು ವಿಧ.

**೧. ಅನ್ಯಗುಣೇನ ಅನ್ಯಗುಣಾಭಾವಃ - ಇದಕ್ಕೆ ಉದಾಹರಣೆ :**

'**ಪ್ರಸ್ಥಃ ಸಾಗರಂ ಪ್ರಾಪ್ಯ ಅಪಿ, ಸ್ವಲ್ಪಂ ಏವ ಅಂಬು ಲಭತೇ**'. 'ಬಳ್ಳವು ಸಮುದ್ರದಲ್ಲಿಯೇ ಆದರೂ, ಸ್ವಲ್ಪವೇ ನೀರನ್ನು ಪಡೆಯುತ್ತದೆ'. ಸಮುದ್ರವು ಬಹುಜಲ ಪೂರ್ಣವಾಗಿದ್ದೇ ಆಗಿದ್ದರೂ ಪ್ರಸ್ಥವು (ಬಳ್ಳವು) ಅಲ್ಪಜಲವನ್ನೇ ಹೊಂದುವುದೇ ಹೊರತು ಹೆಚ್ಚು ಜಲವನ್ನಲ್ಲ - ಎಂದು ತಾತ್ಪರ್ಯ. ಈ ಉದಾಹರಣೆಯಲ್ಲಿ ಸಾಗರದ ಸಮೃದ್ಧಿಯ ಗುಣವು ಪ್ರಸ್ಥಕ್ಕೆ ಒದಗಲಿಲ್ಲ.

ವೃದ್ಧಿಯ ಅಲಾಭ ಎಂದು ವರ್ಣಿಸಿರುವುದರಿಂದ ಇದು ಮೊದಲನೆಯ ಅವಜ್ಞಾಲಂಕಾರ.

೨. ಅನ್ಯದೋಷೇಣ ಅನ್ಯದೋಷಾಭಾವಃ - ಇದಕ್ಕೆ ಉದಾಹರಣೆ

ಮೀಲಂತಿ ಯದಿ ಪದ್ಮಾನಿ ಕಾ ಹಾನಿರಮೃತದ್ಯುತೇಃ |

'ಪದ್ಮಾನಿ ಯದಿ ಮೀಲಂತಿ ಚೇತ್ ತದಾ ಅಮೃತದ್ಯುತ್ಯೇಃ ಕಾ ಹಾನಿಃ? 'ಸಕಲಜನ ಆನಂದಕರನಾದ ಚಂದ್ರನು ಮೂಡಿದ್ದೇ ಆದರೆ, ಸಕಲಜನರಿಗೆ ಆನಂದವೇ (ಮುಖ ವಿಕಾಸವೇ) ಆಗುತ್ತದೆ. ಆದರೆ, ಕಮಲಗಳು ಮಾತ್ರ ಮುಕುಲಭಾವವನ್ನು ಹೊಂದುವುದರಿಂದ ಚಂದ್ರನಿಗೆ ಯಾವ ನಷ್ಟವೂ ಇಲ್ಲ'. ಇಲ್ಲಿ ಕಮಲಗಳ ಮುಕುಲೀಭಾವದೋಷದಿಂದ ಚಂದ್ರನಲ್ಲಿ ತದಭಾವವರ್ಣನೆ ಇರುವುದರಿಂದ ಇದು ಎರಡನೆಯ ಅವಜ್ಞಾಲಂಕಾರ.

## ೭೧. ಅನುಜ್ಞಾಲಂಕಾರಃ

ಗುಣಗಳ ಮುಖಾಂತರ ಒಂದು ವೇಳೆ ದೋಷಗಳನ್ನೇ ಬಯಸುವುದಾದರೆ ಅದು ಅನುಜ್ಞಾಲಂಕಾರವಾಗುತ್ತದೆ. ದೋಷಗಳಲ್ಲಿ ಗುಣಗಳನ್ನೇ ಅರಸಿದರೂ, ಆ ಗುಣಗಳ ಮುಖಾಂತರ ದೋಷಗಳನ್ನೇ ಬಯಸುವುದು ಒಂದು ವಿಶಿಷ್ಟ ಚಮತ್ಕಾರವಷ್ಟೆ! ಇದೇ ಅನುಜ್ಞಾಲಂಕಾರ.

ದೋಷಸ್ಯಾಭ್ಯರ್ಥನಾನುಜ್ಞಾ ತತ್ರೈವ ಗುಣದರ್ಶನಾತ್ || ೧೩೪ ||
ವಿಪದಃ ಸಂತು ನಃ ಶಶ್ವದ್ಯಾಸು ಸಂಕೀರ್ತ್ಯತೇ ಹರಿಃ |

'ತತ್ರೈವ ಗುಣದರ್ಶನಾತ್ ದೋಷಸ್ಯ ಅಭ್ಯರ್ಥನಾ ಅನುಜ್ಞಾ (ಇತ್ಯಲಂಕಾರಃ)'. 'ಆ ದೋಷ ಸ್ಥಲದಲ್ಲಿಯೇ ಗುಣವನ್ನು ಕಾಣುವ ನಿಮಿತ್ತವಾಗಿಯೇ ಮತ್ತೆ ದೋಷವನ್ನೇ ಬೇಡುವುದು (ದೋಷವೇ ಸಂಭವಿಸಲೆಂದು ಬೇಡುವುದು) ಅನುಜ್ಞಾಲಂಕಾರ'.

ಉದಾಹರಣೆ : 'ನಃ (ತಾಃ) ವಿಪದಃ ಶಶ್ವತ್ ಸಂತು, ಯಾಸು ಹರಿಃ ಸಂಕೀರ್ತ್ಯತೇ'. 'ಯಾವ ಆಪತ್ತುಗಳ ಸಂದರ್ಭದಲ್ಲಿ ವಿಷ್ಣುವು ಸ್ತುತಿಸಲ್ಪಡುತ್ತಾನೋ, ಅಂತಹ ವಿಪತ್ತುಗಳೇ ನಮಗೆ ಯಾವಾಗಲೂ ಸಂಭವಿಸಲಿ'. ಇಲ್ಲಿ ವಿಪತ್ತೆಂಬುದು ದೋಷ. ಆದರೆ, ವಿಪತ್‌ಸಂದರ್ಭದಲ್ಲಿ ಹರಿಸಂಕೀರ್ತನೆ ಎಂಬ ಗುಣವಿರುತ್ತದೆ. ಈ ಗುಣದ ನಿಮಿತ್ತವಾಗಿಯೇ ಒಂದು ವೇಳೆ ಅನಿಷ್ಟವೇ (ಇಷ್ಟವಿಲ್ಲದ್ದು) ಆಗಿದ್ದರೂ ವಿಪತ್ಪರಂಪರೆಯನ್ನು ಬೇಡಿಕೊಳ್ಳುವಂತೆ ಇಲ್ಲಿ ವರ್ಣನೆ ಇರುವುದರಿಂದ ಇದು ಅನುಜ್ಞಾಲಂಕಾರ.

## ೭೨. ಲೇಶಾಲಂಕಾರಃ

ದೋಷವನ್ನು ಗುಣವಾಗಿ ಕಲ್ಪಿಸುವುದು, ಗುಣವನ್ನು ದೋಷವಾಗಿ ಕಲ್ಪಿಸುವುದು ಲೇಶಾಲಂಕಾರ. ಅನುಕೂಲಕರವಾಗಿರುವುದರಿಂದ ದೋಷವೂ ಗುಣತ್ವ ಹೊಂದುವುದು, ಪ್ರತಿಕೂಲವಾಗಿರುವುದರಿಂದ ಗುಣವೂ ದೋಷತ್ವ ಹೊಂದುವುದು ಎಂಬುದು ಇದರ ತಾತ್ಪರ್ಯ. ಇದೂ ಸಹ ಒಂದು ಚಮತ್ಕಾರ ವಿಶೇಷವಷ್ಟೆ!

ಲೇಶಃ ಸ್ಯಾದ್ದೋಷಗುಣಯೋರ್ಗುಣದೋಷತ್ವಕಲ್ಪನಮ್ || ೧೩೫ ||
ಅಖಿಲೇಷು ವಿಹಂಗೇಷು, ಹಂತ ಸ್ವಚ್ಛಂದಚಾರಿಷು |
ಶುಕ ಪಂಜರಬಂಧಸ್ತೇ ಮಧುರಾಣಾಂ ಗಿರಾಂ ಫಲಮ್ || ೧೩೬ ||

'ದೋಷಗುಣಯೋಃ (ಕ್ರಮೇಣ) ಗುಣದೋಷತ್ವಕಲ್ಪನಂ ಲೇಶಃ ಸ್ಯಾತ್'. 'ದೋಷ-ಗುಣಗಳು ಕ್ರಮವಾಗಿ ಗುಣ-ದೋಷಗಳಾಗಿ ಕಲ್ಪಿತವಾದಂತೆ ವರ್ಣಿತವಾದರೆ, ಅದು ಲೇಶಾಲಂಕಾರ'.

ಉದಾಹರಣೆ : ಓರ್ವ ವಿದ್ವಾಂಸನ ಪುತ್ರನು ರಾಜನಿಂದ ಬಹುಮಾನ ಪಡೆಯುವ ಸಲುವಾಗಿ ರಾಜಧಾನಿಗೆ ಹೋಗಿ, ಅಲ್ಲಿಯೇ ಬಹಳ ಕಾಲ ವಾಸಿಸುತ್ತಿರಲು, ಅವನ ದರ್ಶನವನ್ನು ಬಯಸಿದ ತಂದೆಯು ಅಪ್ರಸ್ತುತಪ್ರಶಂಸಾರೂಪವಾಗಿ ಹೀಗೆ ಹೇಳುತ್ತಿರುವ ಮಾತಿದು. 'ಹೇ ಶುಕ! ಅಖಿಲೇಷು ವಿಹಂಗೇಷು ಸ್ವಚ್ಛಂದಚಾರಿಷು (ಸತ್ಸು), ಹಂತ! ತೇ ಪಂಜರಬಂಧಃ (ತೇ) ಮಧುರಾಣಾಂ ಗಿರಾಂ ಫಲಮ್' ('ಹೇ ಪುತ್ರ! ತ್ವದನ್ಯೇಷು ಅಪಂಡಿತಜನೇಷು ಸರ್ವೇಷು ಸ್ವಗೃಹೇಷು ಸುಖಂ ತಿಷ್ಠತ್ಸು ತವ ಅಯಂ ರಾಜಧಾನ್ಯಾಂ ಚಿರಕಾಲವಾಸಃ ತ್ವದೀಯ ಪಾಂಡಿತ್ಯಮೂಲಕಃ, ಇತಿ ತ್ವತ್ಪಾಂಡಿತ್ಯಮೇವ ಪ್ರತಿಕೂಲಮಭೂತ್'.) 'ಎಲೈ ಗಿಳಿಯೇ! ನಿನ್ನನ್ನು ಬಿಟ್ಟು ಉಳಿದ ಎಲ್ಲ ಮೂಕಪಕ್ಷಿಗಳೂ ಸ್ವಚ್ಛಂದವಾಗಿ ಸಂಚರಿಸುತ್ತಿರಲು, ನಿನಗೆ ಈ ರೀತಿಯ ಪಂಜರಬಂಧವು ನಿನ್ನ ಮಧುರವಾದ ಮಾತುಗಳ ಫಲವೇ ಆಗಿರುತ್ತದೆ'. (ಇದು ಅಪ್ರಸ್ತುತ).

('ಇದರ ಪ್ರಸ್ತುತವೃತ್ತಾಂತವೆಂದರೆ) 'ಎಲೈ ಪುತ್ರನೇ! ನಿನ್ನನ್ನು ಹೊರತಾಗಿ ಉಳಿದ ಆ ಪಂಡಿತರು ತಮ್ಮ ತಮ್ಮ ಮನೆಗಳಲ್ಲಿ ಸುಖವಾಗಿರುವರು. ಆದರೆ, ನಿನಗೆ ರಾಜಧಾನಿಯಲ್ಲಿ ಈ ರೀತಿಯ ಚಿರಕಾಲವಾಸವು ನಿನ್ನ ಪಾಂಡಿತ್ಯದ ಕಾರಣವಾದುದು. ಹೀಗೆ ನಿನ್ನ ಪಾಂಡಿತ್ಯವು ನಿನಗೆ ಪ್ರತಿಕೂಲವೇ ಆಗಿದೆ.' ಈ ಪದ್ಯದ ಪೂರ್ವಾರ್ಧ ಮತ್ತು ಉತ್ತರಾರ್ಧಗಳು ಎರಡೂ ರೀತಿಗೆ ಕ್ರಮವಾಗಿ ಉದಾಹರಣೆಯಾಗಿರುತ್ತವೆ. ಹೇಗೆಂದರೆ - ಪೂರ್ವಾರ್ಧದಲ್ಲಿ - ಎಲ್ಲ ಪಕ್ಷಿಗಳಲ್ಲಿನ ಅವಾಗ್ಮಿತ್ವ ದೋಷವು ಸ್ವಚ್ಛಂದಚಾರಿತ್ವರೂಪಗುಣವಾಗಿ ಕಲ್ಪಿತವಾಗಿಯೂ, ಉತ್ತರಾರ್ಧದಲ್ಲಿ ಶುಕದ ವಾಗ್ಮಿತ್ವರೂಪಗುಣವು ಪಂಜರಬಂಧನಕ್ಕೆ ಕಾರಣವಾಗಿ ದೋಷವಾಗಿ ಕಲ್ಪಿತವಾಗಿಯೂ ವರ್ಣಿತವಾಗಿರುವುದರಿಂದ, ಇಲ್ಲಿ ಎರಡೂ ವಿಧದ ಲೇಶಾಲಂಕಾರ.

## ೭೩. ಮುದ್ರಾಲಂಕಾರಃ

ಸೂಚ್ಯಾರ್ಥಸೂಚಕವಾದ ಪದಗಳ ಮುಖಾಂತರ ಪ್ರಕೃತಾರ್ಥವು ಸೂಚಿತವಾಗುವಂತೆ ವರ್ಣಿತವಾದಲ್ಲಿ ಅದು ಮುದ್ರಾಲಂಕಾರ. ಬಹುಮಟ್ಟಿಗೆ ನಾಟಕಗಳ ನಾಂದೀಪದ್ಯದಲ್ಲಿ ಈ ಮುದ್ರಾಲಂಕಾರವಿರುವುದನ್ನು ಮನಗಾಣಬಹುದು.

ಸೂಚ್ಯಾರ್ಥಸೂಚನಂ ಮುದ್ರಾ ಪ್ರಕೃತಾರ್ಥಪರೈಃ ಪದೈಃ |
ನಿತಂಬಗುರ್ವೀ ತರುಣೀ ದೃಗ್ಯುಗ್ಮವಿಪುಲಾ ಚ ಸಾ || ೧೩೭ ||

'ಪ್ರಕೃತಾರ್ಥಪರೈಃ ಪದೈಃ ಸೂಚ್ಯಾರ್ಥಸೂಚನಂ ಮುದ್ರಾ (ಇತ್ಯಲಂಕಾರಃ)'. 'ಪ್ರಕೃತಾರ್ಥವನ್ನು ಪ್ರತಿಪಾದನೆ ಮಾಡಿಕೊಡುವ ಪದಗಳ ಮುಖಾಂತರ ಪ್ರಕೃತಾರ್ಥದ ಸೂಚನೆಯಾಗುವಂತೆ ವರ್ಣಿಸಿದರೆ ಅದು ಮುದ್ರಾಲಂಕಾರ.

ಉದಾಹರಣೆ : 'ಸಾ ತರುಣೀ ನಿತಂಬಗುರ್ವೀ (ತಥಾ) ದೃಗ್ಯುಗ್ಮ ವಿಪುಲಾ ಚ'. ಆ ನಾಯಿಕೆಯು ಸ್ಥೂಲವಾದ ನಿತಂಬವುಳ್ಳವಳು ಮತ್ತು (ದೃಗ್ಯುಗ್ಮ) ಎರಡೂ ನೇತ್ರಗಳ ವೈಶಾಲ್ಯವುಳ್ಳವಳು (ಆಗಿರುವಳು)'. ಇಲ್ಲಿ ನಾಯಿಕೆಯ ನೇತ್ರಯುಗಲದ ವೈಶಾಲ್ಯವನ್ನು ಪ್ರತಿಪಾದಿಸುವ ಪದದಿಂದ 'ಯುಗ್ಮ ವಿಪುಲಾ' ಎಂಬ ವೃತ್ತದ ಹೆಸರು ಸೂಚಿತವಾಗಿರುವುದರಿಂದ ಇದು ಮುದ್ರಾಲಂಕಾರ.

ಯುಗ್ಮ ವಿಪುಲಾ - ಎಂಬ ವೃತ್ತವು ಅನುಷ್ಟುಪ್ ಪ್ರಕರಣದಲ್ಲಿ ಇರುವ ಒಂದು ವೃತ್ತ. ಇದರ ಲಕ್ಷಣ - 'ಯಸ್ಯಾಂ ಲಃ ಸಪ್ತಮೋ ಯುಗ್ಮೇ ಸಾ ಯುಗ್ಮ ವಿಪುಲಾ ಮತಾ' - '೨-೪ನೇ ಪಾದಗಳಲ್ಲಿ ಏಳನೆಯ ಅಕ್ಷರವು ಲಘುವಾಗಿರಬೇಕು. ಪ್ರಕೃತ ಉದಾಹರಣೆಯಲ್ಲಿ ಎರಡನೇ ಪಾದದ ಏಳನೆಯ ಅಕ್ಷರವಾದ 'ಚ' ಕಾರವು ಲಘುವಾಗಿರುವುದರಿಂದ ಲಕ್ಷಣ ಸಂಗತಿಯಾಗುತ್ತದೆ.

## ೭೪. ರತ್ನಾವಲ್ಯಲಂಕಾರಃ

ಲೋಕಪ್ರಸಿದ್ಧವಾದ ಉಪಮಾನವ್ಯಕ್ತಿಗಳ ಕ್ರಮದಂತೆ ಒಂದೆಡೆ ನಿವೇಶ ಅಥವಾ ಆರೋಪ ಮಾಡುವುದು ರತ್ನಾವಲ್ಯಲಂಕಾರವಾಗುತ್ತದೆ. ಬಹುಮಟ್ಟಿಗೆ ಪ್ರಕೃತದಲ್ಲಿ ಅಪ್ರಕೃತಗಳ ಕ್ರಮಿಕತಾದಾತ್ಮ್ಯವನ್ನು ಹೇಳುವುದೇ ಈ ಅಲಂಕಾರದ ಮುಖ್ಯ ಗುರಿಯೆನ್ನಬಹುದು.

ಕ್ರಮಿಕಾ ಪ್ರಕೃತಾರ್ಥಾನಾಂ ನ್ಯಾಸಂ ರತ್ನಾವಲಿಂ ವಿದುಃ |
ಚತುರಾಸ್ಯಃ ಪತಿರ್ಲಕ್ಷ್ಮ್ಯಾಃ ಸರ್ವಜ್ಞಸ್ತ್ವಂ ಮಹೀಪತೇ || ೧೩೮ ||

'ಕ್ರಮಿಕಾ ಪ್ರಕೃತಾರ್ಥಾನಾಂ ನ್ಯಾಸಂ ರತ್ನಾವಲಿಂ (ಅಲಂಕಾರಂ) ವಿದುಃ'. 'ಲೋಕಪ್ರಸಿದ್ಧ ಕ್ರಮವನ್ನುಳ್ಳ ಅಪ್ರಕೃತಾರ್ಥಗಳ ನ್ಯಾಸವನ್ನು (ಪ್ರಕೃತದಲ್ಲಿ ಆರೋಪಿಸುವಿಕೆಯನ್ನು)ರತ್ನಾವಲಿ ಎಂಬ ಅಲಂಕಾರ ವೆಂದು ತಿಳಿಯಲಾಗುತ್ತದೆ.'

ಉದಾಹರಣೆ : 'ಹೇ ಮಹೀಪತೇ ! ತ್ವಂ ಚತುರಾಸ್ಯಃ ಲಕ್ಷ್ಮ್ಯಾಃ ಪತಿಃ, ಸರ್ವಜ್ಞಃ, (ಚ ಅಸಿ)' 'ಎಲೈ ರಾಜನೇ ! ನೀನು ಚತುರಾಸ್ಯನು (ಬ್ರಹ್ಮನು ಮತ್ತು ಸುಂದರಮುಖವುಳ್ಳವನು) ಲಕ್ಷ್ಮೀಪತಿ (ವಿಷ್ಣುವು ಮತ್ತು ರಾಜ್ಯಲಕ್ಷ್ಮಿಗೆ ಒಡೆಯ), ಸರ್ವಜ್ಞ (ಈಶ್ವರ, ಎಲ್ಲವನ್ನೂ ಬಲ್ಲವನು) ಆಗಿರುವೆ'. ಇಲ್ಲಿ ಬ್ರಹ್ಮ- ವಿಷ್ಣು- ಮಹೇಶ್ವರ ತ್ರಿಮೂರ್ತಿಗಳ ಕ್ರಮಿಕತ್ವ ಲೋಕಪ್ರಸಿದ್ಧವಷ್ಟೆ! ಈ ತ್ರಿಮೂರ್ತಿಗಳು ಅಪ್ರಕೃತಗಳು (ಉಪಮಾನಗಳು). ಇವರ ತಾದಾತ್ಮ್ಯವನ್ನು (ಅಭೇದವನ್ನು) ಪ್ರಕೃತ ರಾಜನಲ್ಲಿ ವರ್ಣಿಸಿರುವುದರಿಂದ ಇದು ರತ್ನಾವಲ್ಯಲಂಕಾರ.

## ೭೫. ತದ್ಗುಣಾಲಂಕಾರಃ

ಒಂದು ವಸ್ತುವು ತನ್ನ ಗುಣವನ್ನು ಬಿಟ್ಟು ಬೇರೆ ಗುಣವನ್ನು ಸ್ವೀಕರಿಸುವುದಾಗಿ ವರ್ಣಿಸಿದರೆ ಅದು ತದ್ಗುಣಾಲಂಕಾರವಾಗುತ್ತದೆ.

ತದ್ಗುಣಃ ಸ್ವಗುಣತ್ಯಾಗಾದನ್ಯದೀಯಗುಣಗ್ರಹಃ |
ಪದ್ಮರಾಗಾಯತೇ ನಾಸಾಮೌಕ್ತಿಕಂ ತೇಽಧರತ್ವಿಷಾ || ೧೩೯ ||

'ಸ್ವಗುಣತ್ಯಾಗಾತ್ ಅನ್ಯದೀಯಗುಣಗ್ರಹಃ ತದ್ಗುಣಃ (ಇತ್ಯಲಂಕಾರಃ)'. 'ತನ್ನ ಗುಣವನ್ನು ಬಿಟ್ಟು ಒಂದು ವಸ್ತುವು ಬೇರೆಯ ವಸ್ತುವಿನ ಗುಣವನ್ನು ಸ್ವೀಕರಿಸುವಿಕೆ ತದ್ಗುಣಾಲಂಕಾರ'.

**ಉದಾಹರಣೆ : 'ತೇ ನಾಸಾಮೌಕ್ತಿಕಂ ಅಧರತ್ವಿಷಾ ಪದ್ಮರಾಗಾಯತೇ'.** 'ನಿನ್ನ ಮೂಗುತಿಯಲ್ಲಿನ ಮುತ್ತು ಅಧರದ ಕೆಂಪು ಕಾಂತಿಯಿಂದಾಗಿ ಪದ್ಮರಾಗಮಣಿಯಂತೆ ಶೋಭಿಸುತ್ತದೆ'. ಇಲ್ಲಿ ನಾಯಿಕೆಯ ನಾಸಾಮೌಕ್ತಿಕವು ತನ್ನ ಧವಲವರ್ಣತ್ವವನ್ನು ಬಿಟ್ಟು ಅನ್ಯವಸ್ತುವಾದ ಅಧರದ ರಕ್ತವರ್ಣತ್ವವನ್ನು ಸ್ವೀಕರಿಸಿದಂತೆ ವರ್ಣಿಸಿರುವುದರಿಂದ ಇದು ತದ್ಗುಣಾಲಂಕಾರ.

## ೭೬. ಪೂರ್ವರೂಪಾಲಂಕಾರಃ (ತದ್ಭೇದಾಃ)

ಒಂದು ವಸ್ತುವು ತನ್ನ ಗುಣವನ್ನು ಬಿಟ್ಟು ಬೇರೆ ವಸ್ತುವಿನ ಗುಣವನ್ನು ಸ್ವೀಕರಿಸಿ, ಬಳಿಕ ಬೇರೆ ನಿಮಿತ್ತವಾಗಿ ಮತ್ತೆ ತನ್ನ ಪೂರ್ವರೂಪವನ್ನೇ ಹೊಂದುವುದೂ ಸಹ ಒಂದು ವಿಶಿಷ್ಟವಾದ ಚಮತ್ಕಾರವೇ ಆಗುತ್ತದೆ. ಇದು ಪೂರ್ವರೂಪಾಲಂಕಾರ. ಇದು ೧. **ಪುನಃ ಸ್ವಗುಣಪ್ರಾಪ್ತಿರೂಪಃ ಪೂರ್ವರೂಪಾಲಂಕಾರಃ** ೨. **ವಿಕಾರೇ ಸತಿ ಪೂರ್ವಾವಸ್ಥಾನುವೃತ್ತಿರೂಪಃ ಪೂರ್ವರೂಪಾಲಂಕಾರಃ** ಎಂದು ಎರಡು ವಿಧವಾಗುತ್ತದೆ. ಕ್ರಮವಾಗಿ ಇವುಗಳ ಲಕ್ಷಣ- ಲಕ್ಷ್ಯ ಹೀಗಿದೆ.

**ಒಂದನೇ ಭೇದ –**

> **ಪುನಃ ಸ್ವಗುಣಸಂಪ್ರಾಪ್ತಿಃ ಪೂರ್ವರೂಪಮುದಾಹೃತಮ್ ।**
> **ಹರಕಂಠಾಂಶುಲಿಪ್ತೋಽಪಿ ಶೇಷಸ್ತ್ವದ್ಯಶಸಾ ಸಿತಃ ॥ ೧೪೦ ॥**

'**ಪುನಃ ಸ್ವಗುಣಸಂಪ್ರಾಪ್ತಿಃ ಪೂರ್ವರೂಪಂ (ಇತಿ) ಉದಾಹೃತಮ್**'. ತನ್ನ ಗುಣವನ್ನು ಕಳೆದುಕೊಂಡು ಬೇರೊಂದು ವಸ್ತುವಿನ ಗುಣವನ್ನು ಪಡೆದಿದ್ದರೂ, ಪುನಃ ಬೇರೊಂದು ಕಾರಣದಿಂದಾಗಿ ತನ್ನ ನೈಜಗುಣವನ್ನೇ ಪಡೆದಂತೆ ವರ್ಣಿಸುವುದು ಮೊದಲನೆಯ ಪೂರ್ವರೂಪಾಲಂಕಾರವಾಗುತ್ತದೆ.

**ಉದಾಹರಣೆ :** 'ಓರ್ವ ರಾಜನ ಕೀರ್ತಿಯ ವರ್ಣನೆ ಇದು. '**(ಹೇ ರಾಜನ್!) ಶೇಷಃ ಹರಕಂಠಾಂಶುಲಿಪ್ತಃ (ಸನ್) ಅಪಿ, ತ್ವದ್ಯಶಸಾ ಸಿತಃ (ಅಭೂತ್)**'. 'ಎಲೈ ರಾಜನೇ ! ಆದಿಶೇಷನು ಶಿವನ ಕಂಠದ ನೈಲ್ಯದಿಂದ ಲಿಪ್ತನಾಗಿ ನೀಲವರ್ಣವನ್ನು ಹೊಂದಿದ್ದರೂ, ನಿನ್ನ ಕೀರ್ತಿಯ ಸಂಪರ್ಕದಿಂದ ಮತ್ತೆ ತನ್ನ ಶುಭ್ರತ್ವವನ್ನೇ ಹೊಂದಿದನು'. ಇಲ್ಲಿ, ಆದಿಶೇಷನು ತನ್ನ ಶುಭ್ರತೆಯನ್ನು ಕಳೆದುಕೊಂಡು ಶಿವನ ಕಂಠದ ನೈಲ್ಯಕಾಂತಿಯನ್ನು ಹೊಂದಿದ್ದನು. ಈಗ ಪುನಃ ಈ ರಾಜನ ಕೀರ್ತಿಯ ಸಂಪರ್ಕದಿಂದ ಮತ್ತೆ ತನ್ನ ಪೂರ್ವದ ಶುಭ್ರತೆಯನ್ನೇ ಪಡೆದನೆಂದು ವರ್ಣಿಸಿರುವುದರಿಂದ ಇದು ಮೊದಲನೆಯ ಪೂರ್ವರೂಪಾಲಂಕಾರ. ಕೀರ್ತಿಯು ಬೆಳ್ಳಗಿದೆಯೆಂದು ವರ್ಣಿಸುವುದು ಕವಿಸಮಯ.

**ಎರಡನೆಯ ಭೇದ –**

> **ಪೂರ್ವಾವಸ್ಥಾನುವೃತ್ತಿಶ್ಚ ವಿಕೃತೇ ಸತಿ ವಸ್ತುನಿ ।**
> **ದೀಪೇ ನಿರ್ವಾಪಿತೇಽಪ್ಯಾಸೀತ್ ಕಾಂಚೀರತ್ನೈರ್ಮಹನ್ಮಹಃ ॥ ೧೪೧ ॥**

'ವಸ್ತುನಿ ವಿಕೃತೇ ಸತಿ, ಪೂರ್ವಾವಸ್ಥಾನುವೃತ್ತಿಃ ಚ ಪೂರ್ವರೂಪಂ (ಭವತಿ)'. 'ಒಂದು ವಸ್ತುವು ತನ್ನ ನೈಜರೂಪವನ್ನು ಕಳೆದುಕೊಂಡು ವಿಕಾರಹೊಂದಿದ್ದರೂ ಪೂರ್ವಾವಸ್ಥೆಯ ಅನುವೃತ್ತಿಯು ವರ್ಣಿತವಾದರೂ, ಅದು ಎರಡನೆಯ ಪೂರ್ವರೂಪಾಲಂಕಾರ.

**ಉದಾಹರಣೆ** : 'ದೀಪೇ ನಿರ್ವಾಪಿತೇ ಸತಿ ಅಪಿ, ಕಾಂಚೀರತ್ನೈಃ ಮಹತ್ ಮಹಃ ಆಸೀತ್'. 'ದೀಪವು ಆರಿಸಲ್ಪಟ್ಟರೂ ಸಹ ನಾಯಿಕೆಯ ಕಾಂಚಿಯಲ್ಲಿದ್ದ ರತ್ನಗಳ ಕಾಂತಿಯಿಂದ ಇನ್ನೂ ಹೆಚ್ಚಿನ ಕಾಂತಿಯೇ ಉಂಟಾಯಿತು'. ಮುಗ್ಧೆಯಾದ ನಾಯಿಕೆಯು ರಾತ್ರಿಯಲ್ಲಿ ಲಜ್ಜೆಯಿಂದ ದೀಪವನ್ನೇನೋ ಆರಿಸಿದಳು. ಆದರೆ ಅವಳ ಕಾಂಚಿ (ಒಡ್ಡಿಯಾಣ) ಎಂಬ ಆಭರಣವಿಶೇಷ (ಡಾಬು ಇತ್ಯಾದಿ) ದಲ್ಲಿದ್ದ ರತ್ನಗಳ ಕಾಂತಿಯಿಂದಾಗಿ, ದೀಪದ ಬೆಳಕಿಗಿಂತಲೂ ಇನ್ನೂ ಹೆಚ್ಚಿನ ಕಾಂತಿಯೇ ಅಲ್ಲಿ ಉಂಟಾಯಿತು ಎಂದು ತಾತ್ಪರ್ಯ. ಕತ್ತಲೆಗಾಗಿ ದೀಪವನ್ನು ಆರಿಸುವ ರೂಪವಾದ ವಿಕಾರವುಂಟಾಗಿದ್ದರೂ, ಕಾರಣಾಂತರವಾದ ರತ್ನಗಳ ಕಾಂತಿಗಳಿಂದಾಗಿ, ಪೂರ್ವಾವಸ್ಥೆ ಅಂದರೆ ಮತ್ತೆ ಬೆಳಕಿನ ಸ್ಥಿತಿಯೇ ಉಂಟಾಯಿತೆಂದು ವರ್ಣಿಸಿರುವುದರಿಂದ ಇದು ಎರಡನೆಯ ಪೂರ್ವರೂಪಾಲಂಕಾರ.

## ೭೭. ಅತದ್ಗುಣಾಲಂಕಾರಃ

ಎರಡು ವಸ್ತುಗಳು ಪರಸ್ಪರ ಸಂಪರ್ಕವನ್ನು ಹೊಂದಿದ್ದರೂ, ಒಂದರ ಗುಣವನ್ನು ಮತ್ತೊಂದು ಪಡೆಯದೇ ಇದ್ದಲ್ಲಿ ಅದು ಅತದ್ಗುಣಾಲಂಕಾರವಾಗುತ್ತದೆ. ತದ್ಗುಣಾಲಂಕಾರಕ್ಕೆ ಇದು ಪ್ರತಿದ್ವಂದ್ವಿಯಾದ ಅಲಂಕಾರ.

> **ಸಂಗತಾನ್ಯಗುಣಾನಂಗೀಕಾರಮಾಹುರತದ್ಗುಣಮ್ ।**
> **ಚಿರಂ ರಾಗಿಣಿ ಮಚ್ಚಿತ್ತೇ ನಿಹಿತಾಪಿ ನ ರಜ್ಯಸಿ ॥ ೧೪೨ ॥**

'**ಸಂಗತ - ಅನ್ಯ - ಗುಣ - ಅನಂಗೀಕಾರಂ, ಅತದ್ಗುಣಂ ಆಹುಃ**'. 'ಒಂದು ವಸ್ತುವಿನಲ್ಲಿ ಸಾಂಗತ್ಯ (ಸಂಯೋಗ)ವನ್ನು ಹೊಂದಿರುವ ವಸ್ತುವು ಅದರ ಗುಣವನ್ನು ಹೊಂದಿರುವುದಿಲ್ಲವೆಂದು ವರ್ಣಿಸಿದ್ದಾದರೆ ಅದು ಅತದ್ಗುಣಾಲಂಕಾರ'.

**ಉದಾಹರಣೆ** : ನಾಯಿಕೆಯ ವಿಷಯದಲ್ಲಿ ಅಪಾರವಾಗಿ ಆಸಕ್ತನಾಗಿದ್ದರೂ ಅಂತಹ ನಾಯಕನನ್ನು ಉಪೇಕ್ಷಿಸುತ್ತಿರುವ ನಾಯಿಕೆಯನ್ನು ಕುರಿತು ನಾಯಕನು ಹೇಳುವ ಮಾತು - '(ಹೇ ನಾಯಿಕೇ!) ರಾಗಿಣಿ ಮಚ್ಚಿತ್ತೇ ಚಿರಂ ನಿಹಿತಾ (ಸತೀ) ಅಪಿ, (ತ್ವಂ) ನ ರಜ್ಯಸಿ'. ಎಲೌ ನಾಯಿಕೆಯೇ ! ಕೆಂಬಣ್ಣವನ್ನುಳ್ಳ (ಅನುರಾಗವನ್ನುಳ್ಳ) ನನ್ನ ಮನಸ್ಸಿನಲ್ಲಿ ನಿನ್ನನ್ನು ಬಹಳ ಕಾಲದಿಂದಲೂ ಇಟ್ಟುಕೊಂಡಿದ್ದರೂ, ನೀನು ಮಾತ್ರ ಆರುಣ್ಯವನ್ನು ಹೊಂದಲಿಲ್ಲ (ನನ್ನ ವಿಷಯದಲ್ಲಿ ಅನುರಾಗವನ್ನು ಹೊಂದುತ್ತಿಲ್ಲ)'. ಇಲ್ಲಿ ರಕ್ತವರ್ಣವುಳ್ಳ ನಾಯಕನ ಮನಸ್ಸಿನಲ್ಲಿ ನಾಯಿಕೆಯು ಇದ್ದರೂ, ನಾಯಕನ ಮನಸ್ಸಿನಲ್ಲಿರುವ ರಾಗದ ಸಂಕ್ರಮಣವು ಆಗಲಿಲ್ಲವೆಂದು ವರ್ಣಿಸಿರುವುದರಿಂದ ಇದು ಅತದ್ಗುಣಾಲಂಕಾರ. ತಾನು ಹೆಚ್ಚು ಪ್ರೀತಿಸುತ್ತಿದ್ದರೂ, ನೀನು ಮಾತ್ರ ನನ್ನ ಬಗ್ಗೆ ಪ್ರೀತಿಯನ್ನೇ ತೋರುತ್ತಿಲ್ಲ - ಎಂಬುದು ತಾತ್ಪರ್ಯ.

## ೭೮. ಅನುಗುಣಾಲಂಕಾರಃ

ಪರವಸ್ತುವಿನ ಗುಣದ ಸಾನ್ನಿಧ್ಯದಿಂದ ಒಂದು ವಸ್ತುವು ತನ್ನ ಗುಣದಲ್ಲಿ ಇನ್ನೂ ಹೆಚ್ಚಿನ ಉತ್ಕರ್ಷವನ್ನು ಹೊಂದುವುದಾದರೆ, ಅದು ಅನುಗುಣಾಲಂಕಾರವಾಗುತ್ತದೆ.

> ಪ್ರಾಕ್‌ಸಿದ್ಧಸ್ವಗುಣೋತ್ಕರ್ಷೋಽನುಗುಣಃ ಪರಸನ್ನಿಧೇಃ ।
> ನೀಲೋತ್ಪಲಾನಿ ದಧತೇ ಕಟಾಕ್ಷೈರತಿನೀಲತಾಮ್ ॥ ೧೪೩ ॥

'ಪರಸನ್ನಿಧೇಃ ಪ್ರಾಕ್ ಸಿದ್ಧ-ಸ್ವಗುಣ - ಉತ್ಕರ್ಷಃ ಅನುಗುಣಃ (ಇತ್ಯಲಂಕಾರಃ)'. 'ಗುಣವುಳ್ಳ ಬೇರೊಂದು ವಸ್ತುವಿನ ಸಾನ್ನಿಧ್ಯದಿಂದ, ಒಂದು ವಸ್ತುವಿನಲ್ಲಿ ಈ ಮುನ್ನವೇ ಪ್ರಸಿದ್ಧವಾಗಿರುವ ಗುಣವಿದ್ದು, ಆ ಗುಣಕ್ಕೆ ಆ ಉತ್ಕರ್ಷತೆ ವರ್ಣಿತವಾದರೆ ಅದು ಅನುಗುಣಾಲಂಕಾರ'.

**ಉದಾಹರಣೆ** : 'ನೀಲೋತ್ಪಲಾನಿ ಕಟಾಕ್ಷೈಃ ಅತಿ ನೀಲತಾಂ ದಧತೇ'. 'ಈ ನಾಯಿಕೆಯ ಕಟಾಕ್ಷಗಳಿಂದ ನೀಲನೈದಿಲೆಗಳು ಇನ್ನೂ ಹೆಚ್ಚು ನೀಲತ್ವವನ್ನು ಹೊಂದಿರುತ್ತವೆ'. ಇಲ್ಲಿ ಸಹಜವಾಗಿಯೇ ಕಪ್ಪಗಿರುವ ನೈದಿಲೆಗಳು ನಾಯಿಕೆಯ ಕಟಾಕ್ಷಗಳ ಸಂಪರ್ಕದಿಂದ ಇನ್ನೂ ಹೆಚ್ಚಿನ ನೀಲತ್ವವನ್ನು ಪಡೆದಿವೆಯೆಂದು ಉತ್ಪ್ರೇಕ್ಷತೆಯನ್ನು ವರ್ಣಿಸಿರುವುದರಿಂದ ಇದು ಅನುಗುಣಾಲಂಕಾರ. ನೀಲೋತ್ಪಲಸದೃಶಗಳಾದ ನೇತ್ರಗಳಿಂದ ನೀಲಿಯ ಕಾಂತಿ ಹೊರಬಂದು ಕರ್ಣಾಭರಣವಾದ ನೈದಿಲೆಗಳ ಮೇಲೆ ಬಿದ್ದು, ಅವು ಇನ್ನೂ ನೀಲಿಮತೆ ಹೊಂದುವಂತೆ ಮಾಡಿವೆ - ಎಂದು ತಾತ್ಪರ್ಯ.

## ೭೯. ಮೀಲಿತಾಲಂಕಾರಃ (ತದ್ಭೇದಾಃ)

ಎರಡು ಸದೃಶಗುಣವುಳ್ಳ ವಸ್ತುಗಳು ಒಂದೆಡೆ ಸೇರಿದ್ದಾಗ, ಅವುಗಳನ್ನು ಗುರುತು ಹಿಡಿಯುವುದೇ ಆಗುವುದಿಲ್ಲವೆಂಬ ವರ್ಣನೆ ಇದ್ದರೆ ಅದು ಮೀಲಿತಾಲಂಕಾರ.

> ಮೀಲಿತಂ ಯದಿ ಸಾದೃಶ್ಯಾದ್ಭೇದ ಏವ ನ ದೃಶ್ಯತೇ ।
> ರಸೋ ನಾಲಕ್ಷಿ ಲಾಕ್ಷಾಯಾಶ್ಚರಣೇ ಸಹಜಾರುಣೇ ॥ ೧೪೪ ॥

'ಸಾದೃಶ್ಯಾತ್ ಭೇದಃ ಏವ ಯದಿ ನ ದೃಶ್ಯತೇ (ತದಾ) ಮೀಲಿತಂ (ಇತಿ ಅಲಂಕಾರಃ ಭವತಿ)'. 'ಪರಸ್ಪರ ಸಾದೃಶ್ಯದಿಂದಾಗಿ, ವಸ್ತುಗಳಲ್ಲಿ ಭೇದವೇ ಗೋಚರವಾಗದಿದ್ದಲ್ಲಿ ಅದು ಮೀಲಿತಾಲಂಕಾರ'.

**ಉದಾಹರಣೆ** : 'ಸಹಜಾರುಣೇ ಚರಣೇ, ಲಾಕ್ಷಾಯಾಃ ರಸಃ ನ ಅಲಕ್ಷಿ'. 'ಸ್ವಾಭಾವಿಕವಾಗಿಯೇ ಕೆಂಬಣ್ಣವುಳ್ಳ ನಾಯಿಕೆಯ ಪಾದದಲ್ಲಿ ಬಳಿದಿದ್ದ ಲಾಕ್ಷಾರಸವು ಗೋಚರವಾಗಲೇ ಇಲ್ಲ'. ಇಲ್ಲಿ ಚರಣಗಳ ಸ್ವಭಾವಲೌಹಿತ್ಯ ಮತ್ತು ಲಾಕ್ಷಾರಸದ ಲೌಹಿತ್ಯಗಳಲ್ಲಿ ಆರುಣ್ಯ (ಕೆಂಬಣ್ಣ) ವೆಂಬ ಸಾದೃಶ್ಯವಿದ್ದುದರಿಂದ, ಪಾದದಲ್ಲಿ ಲೇಪನಗೊಂಡ ಲಾಕ್ಷಾರಸವು ಗೋಚರವೇ ಆಗಲಿಲ್ಲವೆಂದು ವರ್ಣಿಸಿರುವುದರಿಂದ ಇದು ಮೀಲಿತಾಲಂಕಾರ. ಇದಕ್ಕೆ ಮತ್ತೊಂದು ಉದಾಹರಣೆ -

ಮಲ್ಲಿಕಾಮಾಲ್ಯಧಾರಿಣ್ಯಃ ಸರ್ವಾಂಗೀಣಾರ್ದ್ರಚಂದನಾಃ ।
ಕ್ಷೌಮವತ್ಯೋ ನ ಲಕ್ಷ್ಯಂತೇ ಜ್ಯೋತ್ಸ್ನಾಯಾಮಭಿಸಾರಿಕಾಃ ॥ ೧೪೫ ॥

ಮಲ್ಲಿಗೆಯ ಹಾರಗಳನ್ನು ಧರಿಸಿರುವ, ತಮ್ಮ ಶರೀರದಲ್ಲಿ ಸಂಪೂರ್ಣವಾಗಿ ಆರ್ದ್ರ ಚಂದನವನ್ನು (ಹಸಿಯಾದ ಶ್ರೀಗಂಧವನ್ನು) ಲೇಪಿಸಿಕೊಂಡಿರುವ ಮತ್ತು ಶುಭ್ರವರ್ಣದ ರೇಷ್ಮೆಯ ವಸ್ತ್ರಗಳನ್ನು ಧರಿಸಿರುವ ಅಭಿಸಾರಿಕಾಸ್ತ್ರೀಯರು ಬೆಳದಿಂಗಳಿನಲ್ಲಿ ಗೋಚರವಾಗುತ್ತಿಲ್ಲ'. ಈ ಉದಾಹರಣೆಯಲ್ಲಿ - ಅಭಿಸಾರಿಕಾಸ್ತ್ರೀಯರು ಬಿಳಿಬಣ್ಣದ ಮಲ್ಲಿಗೆ ಹಾರಗಳನ್ನು ಧರಿಸಿದ್ದರು, ಶುಭ್ರವಾದ ಚಂದನವನ್ನು ತಮ್ಮ ಶರೀರಕ್ಕೆಲ್ಲಾ ಲೇಪಿಸಿಕೊಂಡಿದ್ದರು ಮತ್ತು ಶುಭ್ರ ರೇಷ್ಮೆ ವಸ್ತ್ರಗಳನ್ನು ಧರಿಸಿದ್ದರು - ಹೀಗೆ ಕೇವಲ ಶುಭ್ರವರ್ಣ ವಿಶಿಷ್ಟರಾದ ಅವರು, ಪರಿಶುಭ್ರವಾದ ಬೆಳದಿಂಗಳಿನಲ್ಲಿ ಗೋಚರವಾಗಲಿಲ್ಲ - ಎಂದು ವರ್ಣಿಸಿರುವುದರಿಂದ (ಪರಿಶುಭ್ರತೆಯ ಸಾದೃಶ್ಯದಿಂದಾಗಿ ಭೇದವೇ ತೋರದಿರುವುದರಿಂದ) ಇಲ್ಲಿ ಮೀಲಿತಾಲಂಕಾರ.

## ೮೦. ಸಾಮಾನ್ಯಾಲಂಕಾರಃ

ಒಂದೇ ರೀತಿಯ ಸಾದೃಶ್ಯದಿಂದ ಭೇದವು ತೋರದೇ ಇದ್ದಲ್ಲಿ ಅದು ಮೀಲಿತಾಲಂಕಾರ ವಾಗುತ್ತದೆ. ಆದರೆ, ಪರಸ್ಪರ ಎರಡು ವಸ್ತುಗಳಲ್ಲಿ ಇರುವ ಸಾದೃಶ್ಯದಿಂದಾಗಿ ಭೇದಕಧರ್ಮವು ತಿಳಿಯದೇ ಇದ್ದಲ್ಲಿ ಅದು ಸಾಮಾನ್ಯಾಲಂಕಾರವೆಂದು ತಿಳಿಯಬೇಕು. ಇಲ್ಲಿ ಬಹುಮಟ್ಟಿಗೆ ಉಪಮಾನ - ಉಪಮೇಯ ವಸ್ತುಗಳಲ್ಲಿ ಭೇದ ತೋರದಿರುವಿಕೆ ಎಂದು ಪರಿಭಾವಿಸಬೇಕು. ಈ ಉಪಮಾನ - ಉಪಮೇಯಗಳಲ್ಲಿನ ಸಾದೃಶ್ಯದಿಂದಾಗಿ ಯಾವುದು ಉಪಮಾನ, ಯಾವುದು ಉಪಮೇಯ - ಎಂದು ತಿಳಿಯಲಾಗುವುದಿಲ್ಲ ಎಂಬುದು ತತ್ತ್ವ.

ಸಾಮಾನ್ಯಂ ಯದಿ ಸಾದೃಶ್ಯಾದ್ವಿಶೇಷೋ ನೋಪಲಕ್ಷ್ಯತೇ ।
ಪದ್ಮಾಕರಂ ಪ್ರವಿಷ್ಟಾನಾಂ ಮುಖಂ ನಾಲಕ್ಷಿ ಸುಭ್ರುವಾಮ್ ॥ ೧೪೬ ॥

'ಸಾದೃಶ್ಯಾತ್ (ಉಪಮಾನೋಪಮೇಯಯೋಃ) ವಿಶೇಷಃ ಯದಿ ನ ಉಪಲಕ್ಷ್ಯತೇ, (ತರ್ಹಿ) ಸಾಮಾನ್ಯಂ (ಇತ್ಯಲಂಕಾರಃ)'. ಉಪಮಾನ ಉಪಮೇಯಗಳಲ್ಲಿನ ಪರಸ್ಪರ ಸಾದೃಶ್ಯದಿಂದಾಗಿ, ಎರಡರಲ್ಲಿ ವೈಶಿಷ್ಟ್ಯವೇ ಅಂದರೆ ವ್ಯಾವರ್ತಕಧರ್ಮವೇ ತೋರದಿದ್ದಲ್ಲಿ ಅದು ಸಾಮಾನ್ಯಾಲಂಕಾರವಾಗುತ್ತದೆ.

ಉದಾಹರಣೆ : 'ಪದ್ಮಾಕರಂ ಪ್ರವಿಷ್ಟಾನಾಂ ಸುಭ್ರುವಾಂ ಮುಖಂ ನ ಅಲಕ್ಷಿ' - 'ಪದ್ಮಗಳಿಂದ ತುಂಬಿರುವ ಸರೋವರವನ್ನು ಪ್ರವೇಶಿಸಿದ ಸುಂದರಿಯರ ಮುಖಗಳು ಗೋಚರವಾಗಲೇ ಇಲ್ಲ'. ಇಲ್ಲಿ ಸ್ತ್ರೀಯರ ಮುಖಗಳಿಗೂ (ಉಪಮೇಯ), ಪದ್ಮಗಳಿಗೂ (ಉಪಮಾನ) ಕಾಂತಿ ರೂಪ ಸಾಧಾರಣ್ಯವಿದ್ದು, ಮುಖಗಳು ವಿಶಿಷ್ಟವಾಗಿ ಗೋಚರವಾಗಲೇ ಇಲ್ಲ - ಎಂದು ಯಾವುದೇ ವ್ಯಾವರ್ತಕಧರ್ಮ (ಬೇರ್ಪಡಿಸುವ ಧರ್ಮ) ಮುಖ - ಕಮಲಗಳಿಗೆ ಇರುವುದಿಲ್ಲವಾಗಿ ಇದು ಸಾಮಾನ್ಯಾಲಂಕಾರ.

## ೮೧, ೮೨. ಉನ್ಮೀಲಿತಾಲಂಕಾರಃ, ವಿಶೇಷಕಾಲಂಕಾರಃ

ಮೀಲಿತ - ಸಾಮಾನ್ಯಾಲಂಕಾರಗಳ ಪ್ರತಿದ್ವಂದ್ವಿ ಕ್ರಮವಾಗಿ ಉನ್ಮೀಲಿತ ಮತ್ತು ವಿಶೇಷಕಾಲಂಕಾರಗಳು. ಮೀಲಿತವಸ್ತುಗಳಲ್ಲಿ ಕಾರಣಾಂತರದಿಂದ ಭೇದವು ತೋರುವುದು ಉನ್ಮೀಲಿತಾಲಂಕಾರವಾದರೆ, ವಿಶೇಷತೆ ತೋರುವುದು ವಿಶೇಷಕಾಲಂಕಾರವಾಗುತ್ತದೆ.

ಭೇದ ವೈಶೇಷ್ಯಯೋಃ ಸ್ಫೂರ್ತಾವುನ್ಮೀಲಿತವಿಶೇಷಕೌ ।
ಹಿಮಾದ್ರಿಂ ತ್ವದ್ಯಶೋಮಗ್ನಂ ಸುರಾಃ ಶೀತೇನ ಜಾನತೇ ॥ ೧೪೭ ॥

'ಭೇದವೈಶೇಷ್ಯಯೋಃ ಸ್ಫೂರ್ತೌ ಉನ್ಮೀಲಿತವಿಶೇಷಕೌ (ಇತ್ಯಲಂಕಾರೌ ಭವತಃ)'. 'ಎರಡು ವಸ್ತುಗಳಲ್ಲಿ ಪರಸ್ಪರ ಭೇದವು ಕಾರಣಾಂತರದಿಂದ ತೋರಿದ್ದಾದರೆ ಅದು ಉನ್ಮೀಲಿತಾಲಂಕಾರ ವಾಗುತ್ತದೆ ಮತ್ತು ವಿಶೇಷತೆಯು ತೋರಿದ್ದಾದರೆ ಅದು ವಿಶೇಷಕಾಲಂಕಾರವಾಗುತ್ತದೆ'. (ಹೀಗೆ ಈ ಎರಡೂ ಅಲಂಕಾರಗಳ ಲಕ್ಷಣವನ್ನು ಈ ಪೂರ್ವಾರ್ಧದಲ್ಲಿ ಹೇಳಲಾಗಿದೆ. ಉದಾಹರಣೆ ಯನ್ನು ಪ್ರತ್ಯೇಕ ಹೇಳಲಾಗುತ್ತಿದೆ).

**ಉನ್ಮೀಲಿತಕ್ಕೆ ಉದಾಹರಣೆ** : 'ಹೇ ರಾಜನ್ ! ತ್ವದ್ಯಶೋಮಗ್ನಂ ಹಿಮಾದ್ರಿಂ ಸುರಾಃ ಶೀತೇನ ಜಾನತೇ'. - 'ಎಲೈ ರಾಜನೇ! ನಿನ್ನ ಶುಭ್ರಕೀರ್ತಿಯಿಂದ ಮುಚ್ಚಿಹೋಗಿರುವ ಹಿಮಾಲಯವನ್ನು ದೇವತೆಗಳು ಶೀತಗುಣದಿಂದಾಗಿ ಗುರ್ತಿಸುತ್ತಾರೆ'. ಇಲ್ಲಿ ಶುಭ್ರತೆ ಕೀರ್ತಿ - ಹಿಮಾದ್ರಿಗಳೆರಡರಲ್ಲಿದ್ದರೂ, ಶೀತಲತೆಯಿಂದಾಗಿ ಈ ಎರಡರಲ್ಲಿ ಭೇದವು ತೋರುತ್ತದೆ ಎಂದು ವರ್ಣಿತವಾಗಿರುವುದರಿಂದ, ಇದು ಉನ್ಮೀಲಿತಾಲಂಕಾರ.

**ವಿಶೇಷಕಕ್ಕೆ ಉದಾಹರಣೆ —**

ಲಕ್ಷಿತಾನ್ಯುದಿತೇ ಚಂದ್ರೇ ಪದ್ಮಾನಿ ಚ ಮುಖಾನಿ ಚ ।

'ಚಂದ್ರೇ ಉದಿತೇ (ಸತಿ) ಪದ್ಮಾನಿ ಚ ಮುಖಾನಿ ಚ ಲಕ್ಷಿತಾನಿ'. 'ಚಂದ್ರನು ಉದಯಿಸಲಾಗಿ ಪದ್ಮಗಳೂ, ಮುಖಗಳೂ ಸ್ಪಷ್ಟವಾಗಿ ಗೋಚರವಾದವು' - ಇಲ್ಲಿ ಸಾದೃಶ್ಯದಿಂದ ಪದ್ಮ - ಮುಖಗಳಲ್ಲಿ ವೈಶಿಷ್ಟ್ಯವನ್ನು ಕಂಡು ಹಿಡಿಯಲಾಗುತ್ತಿರಲಿಲ್ಲ. ಆದರೆ, ಚಂದ್ರೋದಯದ ಕಾರಣ, ಪದ್ಮಗಳು ಬಾಡಿಹೋಗಿ, ಮುಖಗಳು ಸ್ಪಷ್ಟವಾಗಿ ಗೋಚರಿಸಿದವು - ಎಂದು ವಿಶೇಷತೆಯನ್ನು ವರ್ಣಿಸಿರುವುದರಿಂದ ಇದು ವಿಶೇಷಕಾಲಂಕಾರ.

## ೮೩. ಗೂಢೋತ್ತರಾಲಂಕಾರಃ (ತದ್ಭೇದಾಃ)

ಪ್ರಶ್ನೆಗೆ ತಕ್ಕ ಉತ್ತರ ಸ್ವಾಭಾವಿಕ. ಆದರೆ ಇಂತಹ ಉತ್ತರ ಗೂಢಾರ್ಥವನ್ನುಳ್ಳದ್ದಾಗಿದ್ದರೆ ಅದು ಗೂಢೋತ್ತರಾಲಂಕಾರವಾಗುತ್ತದೆ. ಹಾಗೆಯೆ, ಪ್ರಶ್ನೆಯೇ ಉತ್ತರರೂಪವಾಗಿದ್ದಲ್ಲಿ ಅದೂ ಸಹ ವಿಶಿಷ್ಟಚಮತ್ಕಾರವುಳ್ಳದ್ದಾಗಿ ಚಿತ್ರೋತ್ತರಾಲಂಕಾರವಾಗುತ್ತದೆ.

### ಗೂಢೋತ್ತರಾಲಂಕಾರ:

ಕಿಂಚಿದಾಕೂತಮಹಿತಂ ಸ್ಯಾದ್ಗೂಢೋತ್ತರಮುತ್ತರಮ್ ॥ ೧೪೮॥
ಯತ್ರಾಸೌ ವೇತಸಃ ಪಾಂಥ ತತ್ರೇಯಂ ಸುತಾರಾ ಸರಿತ್ ।

'ಕಿಂಚಿತ್ ಆಕೂತಮಹಿತಂ (ಯತ್) ಉತ್ತರಂ, (ತತ್) ಗೂಢೋತ್ತರಂ ಸ್ಯಾತ್'. 'ಕೇಳುಗನು ಬೇರೆ ಆಶಯದಿಂದ ಪ್ರಶ್ನೆ ಕೇಳಿದಾಗ, ಉತ್ತರಿಸುವ ವ್ಯಕ್ತಿಯು ತನ್ನ ಆಶಯವನ್ನು ಗರ್ಭೀಕರಿಸಿ ಉತ್ತರಿಸುವುದು ಗೂಢೋತ್ತರಾಲಂಕಾರ'.

ಉದಾಹರಣೆ : 'ಈ ನದಿಯನ್ನು ಸುಲಭವಾಗಿ ದಾಟುವ ಮಾರ್ಗವಾವುದು ? ಎಂದು ಒಬ್ಬ ಪಥಿಕನು ಪ್ರಶ್ನಿಸಲಾಗಿ, ಅವನ ಸಂಗವನ್ನು ಬಯಸಿದ ಸ್ತ್ರೀಯೋರ್ವಳು ಹೀಗೆ ತನ್ನ ಅಭಿಪ್ರಾಯ ಗರ್ಭಿತ ರೀತಿಯಲ್ಲಿ ಉತ್ತರಿಸುವಳು'. 'ಹೇ ಪಾಂಥ । ಅಸೌ ವೇತಸಃ ಯತ್ರ (ವರ್ತತೇ) ತತ್ರ ಇಯಂ ಸರಿತ್ ಸುತರಾ (ವರ್ತತೇ)'. 'ಎಲೌ ಪಥಿಕನೇ । ಈ ಪೊದೆ ಇರುವ ಸ್ಥಳದಲ್ಲಿ ಈ ನದಿಯನ್ನು ಸುಲಭವಾಗಿ ದಾಟಬಹುದು'. ಅಂದರೆ ಈ ಸ್ಥಳದಲ್ಲಿ ಜನ ಸಮ್ಮರ್ದವಿಲ್ಲ. ಅಂತಹ ಪೊದೆಯ ಸ್ಥಳದಲ್ಲಿ ಯಥೇಚ್ಛವಿಹಾರವು ಆಗುತ್ತದೆ - ಎಂಬ ಅರ್ಥಗರ್ಭಿತತ್ವವು ಉತ್ತರದಲ್ಲಿ ಅಡಗಿರುವುದರಿಂದ ಇದು ಗೂಢೋತ್ತರಾಲಂಕಾರ.

### ಚಿತ್ರೋತ್ತರಾಲಂಕಾರ:

ಪ್ರಶ್ನೋತ್ತರಾಂತರಾಭಿನ್ನಮುತ್ತರಂ ಚಿತ್ರಮುತ್ತರಮ್ ॥ ೧೪೯ ॥

'ಪ್ರಶ್ನೋತ್ತರಾಂತರಾಭಿನ್ನಂ ಉತ್ತರಂ (ಯತ್) (ತತ್) ಚಿತ್ರಂ ಉತ್ತರಂ (ಇತ್ಯಲಂಕಾರಃ)'. ೧. ಪ್ರಶ್ನೆಗೆ ಅಭಿನ್ನವಾದ ಉತ್ತರ (ಪ್ರಶ್ನಾಭಿನ್ನಂ ಉತ್ತರಂ) ಮತ್ತು ೨. ಉತ್ತರಾಂತರಾ ಭಿನ್ನವಾದ ಉತ್ತರ (ಉತ್ತರಾಂತರಾಭಿನ್ನಂ ಉತ್ತರಂ) ಹೀಗೆ ಎರಡೂ ರೀತಿಯಲ್ಲಿ ಇದರ ಚಮತ್ಕಾರವುಂಟು. ಅಂದರೆ ಮೊದಲನೆಯದಾಗಿ ಪ್ರಶ್ನೆಗೆ ಅಭಿನ್ನವಾದ ಉತ್ತರ ಪ್ರಶ್ನೋತ್ತರ ಅರ್ಥಾತ್ ಪ್ರಶ್ನೆಯೇ ಉತ್ತರರೂಪವಾಗಿರುವುದು ಮೊದಲ ಚಮತ್ಕಾರ. ಎರಡನೆಯದಾಗಿ ಎರಡು ಅರ್ಥಗಳನ್ನು ಏಕಕಾಲಕ್ಕೆ ಕೊಡಬಹುದಾದ ಎರಡು ಪ್ರಶ್ನೆಗಳನ್ನು ಒಬ್ಬನು ಕೇಳಲಾಗಿ, ಆ ಎರಡೂ ಪ್ರಶ್ನೆಗಳಿಗೆ ನೈಪುಣ್ಯದಿಂದ ಒಂದೇ ಉತ್ತರವನ್ನು (ಉತ್ತರಾಂತರಾಭಿನ್ನಂ ಉತ್ತರಂ) ಕೊಡುವುದೂ ಸಹ ಚಿತ್ರೋತ್ತರಾಲಂಕಾರ.

'ಪ್ರಶ್ನಾಭಿನ್ನಂ ಉತ್ತರಂ' ಎಂಬುದಕ್ಕೆ ಉದಾಹರಣೆ : 'ಕೇ ದಾರಪೋಷಣರತಾಃ ?' 'ಯಾರು ಪತ್ನಿಯನ್ನು ಸಾಕುವಲ್ಲಿ ಆಸಕ್ತರು ?' ಇದು ಪ್ರಶ್ನೆ. ಇದಕ್ಕೆ ಉತ್ತರ 'ಕೇದಾರಪೋಷಣರತಾಃ' (ಅಭಂಗ) 'ಕೇದಾರ ಜಮೀನು, ಕ್ಷೇತ್ರ) ಯಾವನು ಕ್ಷೇತ್ರವನ್ನು ಪೋಷಣೆ ಅಂದರೆ ವರ್ಧನೆ ಮಾಡುವಲ್ಲಿ ಸಮರ್ಥನೋ, ಅವನೇ ದಾರಪೋಷಣಾರತ' - ಹೀಗೆ ಪ್ರಶ್ನೆಯೇ ಇಲ್ಲಿ ಉತ್ತರವಾಗಿರುವುದರಿಂದ ಮೊದಲನೆಯ ಚಿತ್ರೋತ್ತರಾಲಂಕಾರ.

'ಉತ್ತರಾಂತರಾಭಿನ್ನಂ ಉತ್ತರಂ - ಎಂಬುದಕ್ಕೆ ಉದಾಹರಣೆ : 'ಕೇ ಖೇಟಾಃ ? ಕಿಂ ಚಲಂ?

ಎಂಬುದು ಪ್ರಶ್ನೆ. 'ಖೇ - ಆಕಾಶೇ ಅಟಂತಿ ಇತಿ ಖೇಟಾಃ,ಕೇ ಖೇಟಾಃ - ಆಕಾಶದಲ್ಲಿ ಸಂಚರಿಸತಕ್ಕವು ಯಾವುವು'.? ಹಾಗೆಯೇ ಎರಡನೆಯ ಪ್ರಶ್ನೆ 'ಚಲಂ ಕಿಂ = ಚಂಚಲವಾದುದು ಯಾವುದು'.? ಈ ಎರಡೂ ಪ್ರಶ್ನೆಗಳಿಗೆ ಒಂದೇ ಉತ್ತರ 'ವಯಃ' ಮೊದಲ ಪ್ರಶ್ನೆಗೆ ಉತ್ತರ - 'ವಯಃ = ಪಕ್ಷಿಗಳು'. ಎರಡನೆಯ ಪ್ರಶ್ನೆಗೆ ಉತ್ತರ 'ವಯಃ = ವಯಸ್ಸು' 'ವಿಃ ವೀ ವಯಃ ? ಇದು ಪಕ್ಷಿಯ ಪರವಾಗಿ ಶಬ್ದರೂಪ; ವಯಸ್ಸಿನ ಪರವಾಗಿ 'ವಯಸ್' ಶಬ್ದ, ಸಕಾರಾಂತನಪುಂಸಕಲಿಂಗ, ವಯಃ ವಯಸೀ ವಯಾಂಸಿ' ಇತ್ಯಾದಿ ಶಬ್ದರೂಪ. ಆದ್ದರಿಂದ ಇದು ಎರಡನೆಯ ಚಿತ್ರೋತ್ತರಾಲಂಕಾರ. ಪೂರ್ಣ ಉದಾಹರಣೆ -

ಕೇದಾರಪೋಷಣರತಾಃ ಕೇ ಖೇಟಾಃ ಕಿಂ ಚಲಂ ವಯಃ ।

## ೮೪. ಸೂಕ್ಷ್ಮಾಲಂಕಾರಃ

ಕೆಲವು ವ್ಯಕ್ತಿಗಳು ಇತರರಿಗೆ ತಿಳಿಯದಂತೆ ಒಂದು ಕೆಲಸವನ್ನು ಮಾಡಬೇಕಾಗುತ್ತದೆ. ಆದರೆ, ಪರಸ್ಪರ ಅವರಿಬ್ಬರಲ್ಲಿಯೇ ಮಾರ್ಮಿಕಸಂಗತಿ ಅರ್ಥವಾಗಬೇಕು. ಈ ಅಭಿಪ್ರಾಯವನ್ನು ಸೂಚಿಸುವ ಸಲುವಾಗಿ ಓರ್ವ ವ್ಯಕ್ತಿಯು ಯಾವುದೇ ಮಾತನಾಡದೆ, ಕೇವಲ ಚೇಷ್ಟೆಯ ಮೂಲಕ ಅಭಿಪ್ರಾಯವನ್ನು ತಿಳಿಸುವುದು ಈ ಸೂಕ್ಷ್ಮಾಲಂಕಾರವಾಗುತ್ತದೆ. ಆದರೆ ಈ ಅಭಿಪ್ರಾಯ ಬೇರೆಯವರಿಗೆ, ಅಂದರೆ ಇವರಿಬ್ಬರನ್ನು ಹೊರತು ಬೇರೆಯವರಿಗೆ ತಿಳಿಯುವುದಿಲ್ಲ.

ಸೂಕ್ಷ್ಮಂ ಪರಾಶಯಾಭಿಜ್ಞೇತರಸಾಕೂತಚೇಷ್ಟಿತಮ್ ॥೧೫೦॥
ಮಯಿ ಪಶ್ಯ ತಿ ಸಾ ಕೇಶೈಃ ಸೀಮಂತಮಣಿಮಾವೃಣೋತ್ ॥

'ಪರಾಶಯಾಭಿಜ್ಞೇತರಸಾಕೂತಚೇಷ್ಟಿತಂ ಸೂಕ್ಷ್ಮಮ್ (ಇತ್ಯಲಂಕಾರಃ)'. 'ಓರ್ವ ವ್ಯಕ್ತಿಯ ಅಭಿಪ್ರಾಯವನ್ನು ಅರಿತ ಮತ್ತೊಬ್ಬ ವ್ಯಕ್ತಿಯು ತನ್ನ ಅಭಿಪ್ರಾಯವನ್ನು ಯಾವುದಾದರೊಂದು ಚೇಷ್ಟೆ (ಅಂಗಾದಿ ಅಭಿನಯ) ಯ ಮುಖಾಂತರ ಸೂಚಿಸುವುದು ಸೂಕ್ಷ್ಮಾಲಂಕಾರವೆನಿಸುತ್ತದೆ'.

**ಉದಾಹರಣೆ :** 'ಮಯಿ ಪಶ್ಯತಿ (ಸತಿ) ಸಾ ಕೇಶೈಃ ಸೀಮಂತಮಣಿಂ ಆವೃಣೋತ್'. 'ನಾನು ಅವಳನ್ನು ನೋಡಲಾಗಿ, ಅವಳು ತನ್ನ ಕೇಶಗಳಿಂದ ಸೀಮಂತಮಣಿಯನ್ನು (ಬೈತಲೆಯ ಬಟ್ಟನ್ನು) ಮುಚ್ಚಿಕೊಂಡಳು'. ಅಂದರೆ ಸಂಕೇತಸಮಯವಾವುದೆಂದು ಪ್ರಶ್ನಿಸುವ ಸಲುವಾಗಿ ಪ್ರಿಯಕರನು ನಾಯಕಿಗೆ ಕಾಣಿಸಿಕೊಂಡನು. ಅಲ್ಲೆಲ್ಲ ಅತ್ತೆ - ಮಾವಂದಿರು ಮೊದಲಾದವರ ಎದುರಲ್ಲಿ ಏನನ್ನೂ ಹೇಳುವಂತಿಲ್ಲವಾದ್ದರಿಂದ, ತನ್ನ ಬೈತಲೆಯ ಬಟ್ಟನ್ನು ತನ್ನ ಕೂದಲುಗಳಿಂದ ಅವಳು ಮುಚ್ಚುವುದರ ಮುಖಾಂತರ, ನಮ್ಮ ಸಂಕೇತಸಮಯವು ಸೂರ್ಯನು ಮುಳುಗಿದ ಬಳಿಕ ಎಂಬ ತನ್ನ ಅಭಿಪ್ರಾಯವನ್ನು ಹೀಗೆ ತನ್ನ ಚೇಷ್ಟೆಯ ಮುಖಾಂತರ ಸೂಚಿಸಿರುವುದರಿಂದ ಇದು ಸೂಕ್ಷ್ಮಾಲಂಕಾರ.

## ೮೫. ಪಿಹಿತಾಲಂಕಾರಃ

ಬೇರೆಯವರ ಮನಸ್ಸಿನ ಇಂಗಿತವನ್ನು ಅರಿತು, ಓರ್ವ ವ್ಯಕ್ತಿಯು ಅದಕ್ಕನುಸಾರವಾಗಿ ವರ್ತಿಸುವುದೂ ಸಹ ಒಂದು ಚಮತ್ಕಾರವಿಶೇಷವಾಗಿ, ಪಿಹಿತಾಲಂಕಾರವೆನಿಸುತ್ತದೆ.

**ಪಿಹಿತಂ ಪರವೃತ್ತಾಂತಜ್ಞಾತುಃ ಸಾಕೂತಚೇಷ್ಟಿತಮ್ ॥ ೧೫೧ ॥**
**ಪ್ರಿಯೇ ಗೃಹಾಗತೇ ಪ್ರಾತಃ ಕಾಂತಾ ತಲ್ಪಮಕಲ್ಪಯತ್**

**'ಪರವೃತ್ತಾಂತಜ್ಞಾತುಃ ಸಾಕೂತಚೇಷ್ಟಿತಂ ಪಿಹಿತಂ (ಇತ್ಯಲಂಕಾರಃ ಭವತಿ)'.** 'ಪರರವೃತ್ತಾಂತವನ್ನು ಅಂದರೆ ಮನಸ್ಸಿನ ಇಂಗಿತವನ್ನು ಅರಿತ ವ್ಯಕ್ತಿಯು, ಅದಕ್ಕನುಸಾರವಾಗಿ ಆಚರಿಸುವುದು ಪಿಹಿತಾಲಂಕಾರ.

**ಉದಾಹರಣೆ :** 'ಪ್ರಾತಃ ಪ್ರಿಯೇ ಗೃಹಾಗತೇ (ಸತಿ)ಕಾಂತಾ ತಲ್ಪಂ ಅಕಲ್ಪಯತ್, ಬೆಳಿಗ್ಗೆ ಪ್ರಿಯನು ಮನೆಗೆ ಬರಲಾಗಿ, ಕಾಂತೆಯು ಅವನು ಮಲಗಲು ತಲ್ಪವನ್ನು ಸಿದ್ಧಪಡಿಸಿದಳು'; ಅಂದರ, 'ರಾತ್ರಿಪೂರ್ತ ಇವನು ಸಪತ್ನಿಯ (ಸವತಿಯ) ಗೃಹದಲ್ಲಿ ಇದ್ದು ನಿದ್ದೆಗೆಟ್ಟವನಾಗಿದ್ದಾನೆ. ಈಗ ಈತನಿಗೆ ನಿದ್ರೆಯ ಅವಶ್ಯಕತೆ ಇದೆ- ಎಂದು ತಿಳಿದ ಕಾಂತೆಯು ಅದಕ್ಕನುಸಾರವಾಗಿ, ಮಾತಿನಿಂದ ಏನನ್ನೂ ಹೇಳದೆ, ಹಾಸಿಗೆ ಸಿದ್ಧಪಡಿಸುವುದರ ಮುಖಾಂತರ ಅವನ ಅಭಿಪ್ರಾಯಕ್ಕೆ ಅನುಸಾರವಾಗಿ ಆಚರಿಸಿದಂತೆ ಇಲ್ಲಿ ವರ್ಣನೆ ಇರುವುದರಿಂದ ಇದು ಪಿಹಿತಾಲಂಕಾರ.

## ೮೬. ವ್ಯಾಜೋಕ್ತ್ಯಲಂಕಾರಃ

ಒಂದು ನೈಜ ಘಟನೆ ನಡೆದಿರುತ್ತದೆ. ಅದನ್ನು ಬೇರೊಂದು ವ್ಯಕ್ತಿ ಗಮನಿಸಿರುತ್ತದೆ. ಆದರೆ, ಆ ಸತ್ಯಹೇತುವನ್ನು ಮರೆಮಾಚಿ, ಆಗಿರುವ ಕಾರ್ಯಕ್ಕೆ ಬೇರೊಂದು ಕಾರಣವನ್ನು ಹೇಳಿ ಸತ್ಯತ್ವವನ್ನು ಗೋಪನಮಾಡುವುದು (ಮರೆ ಮಾಚುವುದು) ವ್ಯಾಜೋಕ್ತ್ಯಲಂಕಾರವಾಗುತ್ತದೆ. ಇಲ್ಲಿ ಆಕಾರಗೋಪನ - ಎಂದರೆ ತನ್ನಲ್ಲಿ ನೈಜನಿಮಿತ್ತದಿಂದ ಆಗಿರುವ ಕಾರ್ಯವನ್ನು ಕಾರಣಾಂತರವನ್ನು ಹೇಳಿ ಸಮರ್ಥಿಸುವುದು ಎಂದರ್ಥ.

**ವ್ಯಾಜೋಕ್ತಿರನ್ಯಹೇತೂಕ್ತ್ಯಾ ಯದಾಕಾರಸ್ಯ ಗೋಪನಮ್ ॥ ೧೫೨ ॥**
**ಸಖಿ ಪಶ್ಯ ಗೃಹಾರಾಮಪರಾಗೈರಸ್ಮಿ ಧೂಸರಾ ।**

**'ಅನ್ಯಹೇತೂಕ್ತ್ಯಾ ಆಕಾರಸ್ಯ ಗೋಪನಂ ಇತಿ ಯತ್ (ಸಾ) ವ್ಯಾಜೋಕ್ತಿಃ'.** 'ಬೇರೊಂದು ಕಾರಣವನ್ನು ಹೇಳಿ, ತನ್ನ ಆಕಾರವನ್ನು ಗೋಪನ ಮಾಡಿಕೊಳ್ಳುವುದು ವ್ಯಾಜೋಕ್ತ್ಯಲಂಕಾರ'.

**ಉದಾಹರಣೆ :** ಚೌರ್ಯರತಿಕಾಲದಲ್ಲಿ ಭೂಮಿಯ ಮೇಲೆ ಹೊರಳಾಡಿದ್ದುದರಿಂದ ಶರೀರದಲ್ಲಿ ಧೂಳಿ ಕಚ್ಚಿಕೊಂಡಿತ್ತು. ಇದು ಸಖಿಗೆ ತಿಳಿಯಬಾರದೆಂದು ಬಯಸಿದ ಓರ್ವಳು ತನ್ನ ಆಕಾರವನ್ನು ಗೋಪನಮಾಡಿಕೊಳ್ಳುವ ಸಲುವಾಗಿ ಹೀಗೆ ಹೇಳುತ್ತಿರುವುದು - **'ಹೇ ಸಖಿ! ಗೃಹಾರಾಮಪರಾಗೈಃ ಧೂಸರಾಸ್ಮಿ, ಪಶ್ಯ'.** 'ಎಲೌ ಸಖಿಯೇ ಕೈತೋಟದ ಮರಗಳಿಂದ ಬಿದ್ದಿರುವ ಪರಾಗದ ಧೂಳಿಯಿಂದ ನಾನು ಧೂಸರವರ್ಣವುಳ್ಳವಳಾಗಿದ್ದೇನೆ, ನೋಡು'. ಇಲ್ಲಿ ಚೌರ್ಯಕೃತ ಸುರತಹೇತುಕವಾದ ತನ್ನ ಶರೀರದ ವೈವರ್ಣ್ಯವನ್ನು, ಗೃಹಾರಾಮದಲ್ಲಿ ವಿಹಾರಮಾಡಿದ್ದರಿಂದ ಪುಷ್ಪಪರಾಗ ತನ್ನ ಮೈ ಮೇಲೆ ಬಿದ್ದು ಹೀಗಾಗಿದೆ - ಎಂದು ಹೇತ್ವಂತರವನ್ನು ಕಲ್ಪಿಸಿ ಆಚ್ಛಾದನೆ ಮಾಡಿರುವುದರಿಂದ ಇದು ವ್ಯಾಜೋಕ್ತ್ಯಲಂಕಾರ.

## ೮೭. ಗೂಢೋಕ್ತ್ಯಲಂಕಾರಃ

ಓರ್ವ ವ್ಯಕ್ತಿಯನ್ನು ಕುರಿತು, ಒಂದು ವಿಷಯವನ್ನು ಹೇಳುವ ಸಂದರ್ಭದಲ್ಲಿ ಗೋಪನೀಯ ವಿಷಯವು ಬೇರೆಯವರಿಗೆ ತಿಳಿಯಬಾರದೆಂಬ ಉದ್ದೇಶದಿಂದ ಮತ್ತು ಕೇವಲ ಆ ವ್ಯಕ್ತಿಗೆ ಮಾತ್ರವೇ ತಿಳಿಯಬೇಕಾಗಿರುವುದರಿಂದ, ಒಂದು ಅಪ್ರಕೃತ ವ್ಯಕ್ತಿಯನ್ನು ಉದ್ದೇಶಿಸಿ, ಶ್ಲೇಷಭಂಗಿಯನ್ನನುಸರಿಸಿ ಕರ್ತವ್ಯವನ್ನು ತಿಳಿಸುವುದು ಗೂಢೋಕ್ತ್ಯಲಂಕಾರವಾಗುತ್ತದೆ.

ಗೂಢೋಕ್ತಿರನ್ಯೋದ್ದೇಶ್ಯಾ ಗೀರ್ಯದನ್ಯಂ ಪ್ರತಿ ಕಥ್ಯತೇ ||೧೫೩||
ವೃಷಾಪೇಹಿ ಪರಕ್ಷೇತ್ರಾದಾಯಾತಿ ಕ್ಷೇತ್ರಪಾಲಕಃ |

'ಅನ್ಯೋದ್ದೇಶ್ಯಾ ಗೀಃ ಅನ್ಯಂ ಪ್ರತಿ ಕಥ್ಯತೇ (ಇತಿ)ಯತ್ (ಸಾ) ಗೂಢೋಕ್ತಿಃ (ಇತಿ ಅಲಂಕಾರಃ)'. 'ಒಬ್ಬ ವ್ಯಕ್ತಿಯನ್ನು ಕುರಿತು ಹೇಳುವ ಯಾವ ಮಾತಿದೆಯೋ, ಆ ಮಾತನ್ನು ಅಪ್ರಕೃತ ಬೇರೆ ವ್ಯಕ್ತಿಯನ್ನು ಉದ್ದೇಶಿಸಿ ಹೇಳಿದಂತೆ ವರ್ಣಿಸುವುದು ಗೂಢೋಕ್ತ್ಯಲಂಕಾರ'.

**ಉದಾಹರಣೆ :** ಒಬ್ಬ ಕಾಮುಕನು ಪರಸ್ತ್ರೀಯನ್ನು ಅನುಭವಿಸುತ್ತಿರುವ ಸಂದರ್ಭದಲ್ಲಿಯೇ ಆಕೆಯ ಪತಿಯು ಬರುತ್ತಿರುವುದನ್ನು ದೂರದಿಂದಲೇ ನೋಡಿದ ಸಖಿಯೋರ್ವಳು ವಿಟಪುರುಷನಿಗೆ ಹೇಳುತ್ತಿರುವ ಮಾತು. ಆದರೆ, ಈ ಮಾತು ಅಪ್ರಕೃತ ವೃಷಭವನ್ನು ಉದ್ದೇಶಿಸಿ ಹೇಳಿದಂತಿರುತ್ತದೆ. 'ಹೇ ವೃಷ । ಪರ ಕ್ಷೇತ್ರಾತ್ ಅಪೇಹಿ, (ಯತಃ) ಕ್ಷೇತ್ರಪಾಲಕಃ ಆಯಾತಿ'. 'ಎಲೈ ವೃಷಭವೇ ! (ಎಲೈ ವಿಟನೇ!) ಪರರ ಕ್ಷೇತ್ರವನ್ನು ಬಿಟ್ಟು ಹೊರಹೋಗು (ಪರಕಳತ್ರವನ್ನು ಬಿಟ್ಟು ಹೊರಟು ಹೋಗು) (ಏಕೆಂದರೆ) ಕ್ಷೇತ್ರಪಾಲಕನು (ಈ ಕಳತ್ರಸ್ವಾಮಿಯು) ಬರುತ್ತಿರುವನು'. ಇಲ್ಲಿ ಶ್ಲೇಷಭಂಗಿಯಿಂದ, ಕಾಮುಕನು ಈ ಗೂಢಾರ್ಥವನ್ನು ತಿಳಿಯಲಿ - ಎಂದು ನೇರವಾಗಿ ಅವನನ್ನು ಉದ್ದೇಶಿಸಿ ಹೇಳದೆ, ಅವನಿಗೆ ಅರ್ಥವಾಗುವ ರೀತಿಯಲ್ಲಿ ಅಪ್ರಸ್ತುತ ವೃಷಭವನ್ನು ಉದ್ದೇಶಿಸಿ ಹೇಳುವಂತೆ ಇಲ್ಲಿ ವರ್ಣನೆ ಇರುವುದರಿಂದ, ಇದು ಗೂಢೋಕ್ತ್ಯಲಂಕಾರ.

## ೮೮. ವಿವೃತೋಕ್ತ್ಯಲಂಕಾರಃ

ಗೂಢೋಕ್ತ್ಯಲಂಕಾರದಲ್ಲಿರುವಂತೆ ವಿಷಯವನ್ನು ಶ್ಲೇಷಭಂಗಿಯಿಂದ ಗೋಪನಮಾಡಬೇಕಾಗಿದ್ದರೂ, ಆ ಅರ್ಥವನ್ನು ಕವಿಯೇ ತನ್ನ ಮಾತಿನ ಮುಖಾಂತರ ಸೂಚಿಸಿದ್ದಾದರೆ, ಅದು ವಿವೃತೋಕ್ತ್ಯಲಂಕಾರವಾಗುತ್ತದೆ.

ವಿವೃತೋಕ್ತಿಃ ಶ್ಲಿಷ್ಟಗುಪ್ತಂ ಕವಿನಾಽಽವಿಷ್ಕೃತಂ ಯದಿ ||೧೫೪||
ವೃಷಾಽಽಪೇಹಿ ಪರಕ್ಷೇತ್ರಾದಿತಿ ವಕ್ತಿ ಸ ಸೂಚನಮ್ |

'ಶ್ಲಿಷ್ಟಗುಪ್ತಂ ಕವಿನಾ ಯದಿ ಆವಿಷ್ಕೃತಂ (ಭವತಿ) (ತದಾ) ವಿವೃತೋಕ್ತಿಃ (ಇತಿ ಅಲಂಕಾರಃ). ಶ್ಲೇಷಮೂಲಕವಾಗಿ ನಿಗೂಹನಯೋಗ್ಯವಾದ ಅರ್ಥವನ್ನು ಕವಿಯೇ ತನ್ನ ಮಾತಿನ ಮುಖಾಂತರವೇ ಆವಿಷ್ಕಾರ ಮಾಡಿದ್ದಾದರೆ ಅದು ವಿವೃತೋಕ್ತ್ಯಲಂಕಾರ.

ಉದಾಹರಣೆ : ಪ್ರಸಂಗ ಹಿಂದಿನಂತೆಯೇ ಎಂದು ತಿಳಿಯಬೇಕು. - 'ಹೇ ವೃಷ। ಪರಕ್ಷೇತ್ರಾತ್ ಅಪೇಹಿ - ಇತಿ ಸಃ ಸೂಚನಂ ವಕ್ತಿ'. 'ಎಲೈ ವೃಷಭವೇ । ಬೇರೆಯವರ ಹೊಲದಿಂದ ದೂರ ಹೋಗು - ಎಂದು ಅವನು ಸೂಚನೆಯನ್ನು ನೀಡುತ್ತಾನೆ'. ಇಲ್ಲಿ ಶ್ಲೇಷಮೂಲಕ ಗುಪ್ತವಾಗಿರ ಬೇಕಾದ ಅರ್ಥವನ್ನು (ಎಲೈ ವಿಟನೇ । ಹೊರಟುಹೋಗು, ಕ್ಷೇತ್ರಪಾಲಕನು ಬರುತ್ತಿರುವನು ಎಂಬ ಅರ್ಥವನ್ನು) ಕವಿಯೇ 'ಸೂಚನಂ ವಕ್ತಿ' ಎಂದು ಆ ಅಭಿಪ್ರಾಯವನ್ನು ಸೂಚನಂ ವಕ್ತಿ ಎಂಬ ಪದದ ಮುಖಾಂತರವೇ ಆವಿಷ್ಕರಣಗೊಳಿಸಿರುವುದರಿಂದ ಇದು ವಿವೃತೋಕ್ತ್ಯಲಂಕಾರ.

## ೮೯. ಯುಕ್ತ್ಯಲಂಕಾರಃ

ತನ್ನ ಮರ್ಮಸಂಗತಿಯನ್ನು ಗೋಪನಮಾಡಿಕೊಳ್ಳುವ ಸಲುವಾಗಿ ಬೇರೆಯವರಿಗೆ ಆ ಅಂತರ್ಯ ತಿಳಿಯಬಾರದೆಂದು ಒಂದು ನಿರ್ದಿಷ್ಟ ಕ್ರಿಯೆಯ ಮುಖಾಂತರ ಮರ್ಮಗೋಪನ ಮಾಡಿಕೊಂಡಂತೆ ಮಾಡುವ ವರ್ಣನೆ ಯುಕ್ತ್ಯಲಂಕಾರವಾಗುತ್ತದೆ.

**ಯುಕ್ತಿಃ ಪರಾತಿಸಂಧಾನಂ ಕ್ರಿಯಯಾ ಮರ್ಮಗುಪ್ತಯೇ ॥ ೧೫೫ ॥**
**ತ್ವಾಮಾಲಿಖಂತೀ ದೃಷ್ಟ್ವಾನ್ಯಾಂ ಧನುಃ ಪೌಷ್ಪಂ ಕರೇಽಲಿಖತ್ ।**

'ಮರ್ಮಗುಪ್ತಯೇ ಕ್ರಿಯಯಾ ಪರಾತಿಸಂಧಾನಂ ಯುಕ್ತಿಃ (ಇತಿ ಅಲಂಕಾರಃ ಭವತಿ)'. 'ತನ್ನ ರಹಸ್ಯವನ್ನು ಮರೆ ಮಾಚಿಕೊಳ್ಳುವ ಒಂದು ಕ್ರಿಯೆಯ ನೆಪದಿಂದ ಬೇರೆಯವರಿಗೆ ತಿಳಿಯದಂತೆ ಮಾಡುವುದು 'ಯುಕ್ತಿ' ಎಂಬ ಅಲಂಕಾರವಾಗುತ್ತದೆ.

ಉದಾಹರಣೆ : ವಿರಹಾತುರಳಾದ ನಾಯಿಕೆಯನ್ನು ಉಪೇಕ್ಷೆಮಾಡಿರುವ ನಾಯಕನ ಬಳಿ ಆ ನಾಯಿಕೆಯ ಸಖಿಯು ಹೇಳುತ್ತಿರುವ ಮಾತಿದು. - 'ಹೇ (ನಾಯಕ) । (ತ್ವತ್ಪ್ರಿಯಾ) ತ್ವಾಂ ಆಲಿಖಂತೀ (ಸತೀ) ಅನ್ಯಾಂ ದೃಷ್ಟ್ವಾ ಕರೇ ಪೌಷ್ಪಂ ಧನುಃ ಅಲಿಖತ್' 'ಎಲೌ ನಾಯಕನೇ ! ನಿನ್ನ ಪ್ರಿಯೆಯು ನಿನ್ನ ವಿರಹದಿಂದ ತಪ್ತಳಾಗಿ ವಿನೋದಕ್ಕಾಗಿ ನಿನ್ನ ಚಿತ್ರವನ್ನು ಬರೆಯುತ್ತಿರಲು, ಆಗ ಬೇರೊಬ್ಬ ಸ್ತ್ರೀಯು ಅಲ್ಲಿಗೆ ಬಂದಿದ್ದರಿಂದ, ತನ್ನ ಆಂತರಿಕ ಸಂಗತಿ ಅವಳಿಗೆ ತಿಳಿಯ ಬಾರದೆಂದು, ಕೈಯಲ್ಲಿ ಹೂವಿನ ಧನುಸ್ಸನ್ನು ಬರೆದಳು'. ಅಂದರೆ, ತಾನು ಬರೆಯುತ್ತಿರುವುದು ನಾಯಕನ ಚಿತ್ರವಲ್ಲ, ಮನ್ಮಥನ ಚಿತ್ರ ಎಂದು ಸೂಚಿಸುವ ಸಲುವಾಗಿ ಹೀಗೆ ಮಾಡಿದಳು ಎಂದು ತಾತ್ಪರ್ಯ. ಇಲ್ಲಿ ನಾಯಕನ ವಿಷಯಕವಾದ ತನ್ನ ರಹಸ್ಯವನ್ನು ಮರೆಮಾಚಿಕೊಳ್ಳುವ ಸಲುವಾಗಿ ಪುಷ್ಪಧನುಸ್ಸನ್ನು ಬರೆಯುವ ಕ್ರಿಯೆಯ ಮುಖಾಂತರ ಅನ್ಯಸ್ತ್ರೀಗೆ ವಂಚನೆ (ಅತಿಸಂಧಾನ) ಮಾಡಿದಂತೆ ವರ್ಣನೆ ಇರುವುದರಿಂದ ಇದು ಯುಕ್ತ್ಯಲಂಕಾರ.

## ೯೦. ಲೋಕೋಕ್ತ್ಯಲಂಕಾರಃ

ಲೋಕದಲ್ಲಿ ಪ್ರಸಿದ್ಧವಾಗಿರುವ ಗಾದೆಯ ಮಾತುಗಳನ್ನೇ ಕಾವ್ಯದಲ್ಲಿ ಬಳಸಿಕೊಂಡು ಮಾಡುವ ವರ್ಣನೆಯೂ ಸಹ ಒಂದು ರೀತಿಯ ಚಮತ್ಕಾರ ವಿಶೇಷವಷ್ಟೆ । ಇದನ್ನು 'ಲೋಕೋಕ್ತಿ' ಎನ್ನಲಾಗುತ್ತದೆ.

**ಲೋಕಪ್ರವಾದಾನುಕೃತಿರ್ಲೋಕೋಕ್ತಿರಿತಿ ಕಥ್ಯತೇ || ೧೫೬ ||**
**ಸಹಸ್ವ ಕತಿಚಿನ್ಮಾಸಾನ್ ಮೀಲಯಿತ್ವಾ ವಿಲೋಚನೇ |**

**'ಲೋಕಪ್ರವಾದಾನುಕೃತಿಃ ಲೋಕೋಕ್ತಿಃ ಇತಿ ಕಥ್ಯತೇ'.** 'ಲೋಕದಲ್ಲಿ ಪ್ರಸಿದ್ಧವಾಗಿರುವ ಗಾದೆಯಂತಹ ಮಾತುಗಳ ಅನುಕರಣವು ಲೋಕೋಕ್ತಿ ಎಂಬ ಅಲಂಕಾರವಾಗುತ್ತದೆ'.

**ಉದಾಹರಣೆ:** ಪರಸ್ಥಳಕ್ಕೆ ಬಹಳ ದಿವಸಗಳ ಹಿಂದೆ ಹೋಗಿದ್ದು ಇನ್ನೂ ಹಿಂತಿರುಗದೇ ಇರುವ ನಾಯಕನ ಪತ್ನಿ ವಿರಹಪೀಡಿತಳಾಗಿರಲು, ಅವಳ ಸಖಿಯು ಅವಳನ್ನು ಹೀಗೆ ಸಮಾಧಾನ ಮಾಡುತ್ತಿರುವುದು.' **(ಹೇ ಸಖಿ!) ವಿಲೋಚನೇ ಮೀಲಯಿತ್ವಾ ಕತಿಚಿತ್ ಮಾಸಾನ್ ಸಹಸ್ವ'** - 'ಎಲೌ ಸಖಿಯೇ ! ಕಣ್ಣು ಮುಚ್ಚಿಕೊಂಡು ಇನ್ನು ಕೆಲವೇ ತಿಂಗಳು ಸಹಿಸಿಕೋ (ಅಷ್ಟರಲ್ಲಿ ನಾಯಕನು ತಪ್ಪದೆ ಹಿಂತಿರುಗುತ್ತಾನೆ) (ಎಂದು ತಾತ್ಪರ್ಯ)'. 'ಮೀಲಯಿತ್ವಾ ವಿಲೋಚನೇ' ಎನ್ನುವುದು ಒಂದು ಲೋಕೋಕ್ತಿ. ಇದನ್ನು ಇಲ್ಲಿ ಅನುಕರಿಸಿ ವರ್ಣಿಸಿರುವುದರಿಂದ ಇದು ಲೋಕೋಕ್ತ್ಯಲಂಕಾರ.

## ೯೧. ಛೇಕೋಕ್ತ್ಯಲಂಕಾರಃ

ಇದೇ ರೀತಿಯ ಲೋಕೋಕ್ತಿಯನ್ನೇ ಬೇರೊಂದು ಅರ್ಥಗರ್ಭಿತವಾದ ವಾಕ್ಯವಾಗಿ ಯೋಜಿಸಿಕೊಂಡರೆ ಅದು ಛೇಕೋಕ್ತ್ಯಲಂಕಾರ.

**ಛೇಕೋಕ್ತಿರ್ಯತ್ರ ಲೋಕೋಕ್ತಿಃ ಸ್ಯಾದರ್ಥಾಂತರಗರ್ಭಿತಾ || ೧೫೭ ||**
**ಭುಜಂಗ ಏವ ಜಾನೀತೇ ಭುಜಂಗಚರಣಂ ಸಖೇ |**

**'ಯತ್ರ ಲೋಕೋಕ್ತಿಃ ಅರ್ಥಾಂತರಗರ್ಭಿತಾ ಸ್ಯಾತ್ (ಸಾ) ಛೇಕೋಕ್ತಿಃ (ಇತ್ಯಲಂಕಾರಃ ಭವತಿ).'** 'ಎಲ್ಲಿ ಲೋಕೋಕ್ತಿಯೇ ಬೇರೊಂದು ಅರ್ಥವನ್ನು ಹೊಂದಿರುವಂತೆ ವರ್ಣಿತವಾದರೆ ಅದು ಛೇಕೋಕ್ತಿ ಎಂಬ ಅಲಂಕಾರವಾಗುತ್ತದೆ'.

**ಉದಾಹರಣೆ :** ಒಬ್ಬ ವ್ಯಕ್ತಿಯ ವಿಚಾರವಾಗಿ ಬೇರೊಬ್ಬನು ಪ್ರಶ್ನೆ ಮಾಡಿದಾಗ, ಆತನ ವಿಷಯವನ್ನು ತಾನು ತಿಳಿದಿದ್ದರೂ ತಿಳಿಯದವನಂತೆ ನಟಿಸಿ, ಪಕ್ಕದಲ್ಲಿರುವ ಮತ್ತೊಬ್ಬ ಅವನ ಮಿತ್ರನು ಈತನ ವಿಷಯವನ್ನು ಬಲ್ಲವನು ಎಂದು ಹೇಳುವ ನೆಪದಲ್ಲಿ ಈ ಮಾತನ್ನು ಎರಡನೆಯವನು ಹೇಳುತ್ತಿರುವುದು - **'ಹೇ ಸಖೇ! ಭುಜಂಗಃ ಏವ ಭುಜಂಗಚರಣಂ ಜಾನೀತೆ'.** 'ಎಲೈ ಮಿತ್ರನೇ! ಸರ್ಪವು ಮಾತ್ರವೇ ಸರ್ಪದ ಹೆಜ್ಜೆಯನ್ನು ತಿಳಿದಿರುತ್ತದೆ'. ಇಲ್ಲಿ ಭುಜಂಗಪದಕ್ಕೆ ಶ್ಲೇಷದಿಂದ 'ವಿಟ' ಎಂಬ ಅರ್ಥವೂ ಇರುವುದರಿಂದ, ವಿಟನ ಜಾಡನ್ನು ವಿಟನು ಮಾತ್ರವೇ ಬಲ್ಲ ಎಂಬ ಬೇರೊಂದು ಅರ್ಥವು ಈ ಲೋಕೋಕ್ತಿಯಲ್ಲಿ ಅಡಗಿರುವುದರಿಂದ ಇದು ಛೇಕೋಕ್ತ್ಯಲಂಕಾರ.

## ೯೨. ವಕ್ರೋಕ್ತ್ಯಲಂಕಾರಃ

ಶ್ಲೇಷದ ಮೂಲಕ ಅಥವಾ ಕಾಕುವಿನ ಮೂಲಕ ಬೇರೊಂದು ಅರ್ಥವು ತೋರುವುದಾದರೆ ಅದು ವಕ್ರೋಕ್ತ್ಯಲಂಕಾರ. ಈ ಅಲಂಕಾರವು ಶಬ್ದಾಲಂಕಾರದಲ್ಲಿಯೂ ಪರಿಗಣಿತವಾಗಿದೆ.

ಅರ್ಥಾಲಂಕಾರದಲ್ಲಿಯೂ ಪರಿಗಣಿತವಾಗಿದೆ. 'ಕಾಕು' ವೆಂದರೆ 'ಕಾಕುಸ್ತ್ರಿಯಾಂ ವಿಕಾರೋ ಯಃ ಶೋಕಭೀತ್ಯಾದಿಭಿರ್ಧ್ವನೇಃ' ಎಂಬ ಅಮರ ಕೋಶದ ವಾಕ್ಯದಂತೆ 'ಸ್ವರದ ವಿಕಾರ'. ನೀನು ಹೋಗುವುದಿಲ್ಲವೇನು? ಎಂಬಲ್ಲಿ ಪ್ರಶ್ನೆಯಾದರೆ, ನಾನು ಈ ಕಾರ್ಯವನ್ನು ಮಾಡಲಾರೆನೇನು? ಎಂಬುದು ಕಾಕು. ಇಲ್ಲಿ ಕಾರ್ಯವನ್ನು ಮಾಡಿಯೇ ಮಾಡುತ್ತೇನೆ ಎಂಬ ಅರ್ಥ ಗರ್ಭಿತವಾಗಿರುತ್ತದೆ. ಇತ್ಯಾದಿ. ವಕ್ರೋಕ್ತಿಯು ೧. ಶ್ಲೇಷಮೂಲಕ ೨. (ಕಾಕ್ವಾಕ್ಷಿಪ್ತ) ಕಾಕುಮೂಲಕ ಎಂದು ಎರಡು ವಿಧವಾಗುತ್ತದೆ.

> **ವಕ್ರೋಕ್ತಿಃ ಶ್ಲೇಷಕಾಕುಭ್ಯಾಮಪರಾರ್ಥಪ್ರಕಲ್ಪನಮ್ ॥ ೧೫೮ ॥**
> **ಮುಂಚ ಮಾನಂ ದಿನಂ ಪ್ರಾಪ್ತಂ ನೇಹ ಹರಾಂತಿಕೇ ।**

**'ಶ್ಲೇಷಕಾಕುಭ್ಯಾಂ ಅಪರಾರ್ಥಪ್ರಕಲ್ಪನಂ ವಕ್ರೋಕ್ತಿಃ (ಇತ್ಯಲಂಕಾರಃ)'.** 'ಶ್ಲೇಷ ಅಥವಾ ಕಾಕುವಿನ ಮುಖಾಂತರ ಬೇರೊಂದು ಅರ್ಥವು ಪ್ರತೀತವಾಗುವುದಾದರೆ ಅದು ವಕ್ರೋಕ್ತ್ಯಲಂಕಾರವಾಗುತ್ತದೆ'.

**ಉದಾಹರಣೆ :** ನಾಯಕನು ಅನ್ಯಸ್ತ್ರೀಸಂಗದಿಂದ ನಾಯಿಕೆಗೆ ಕೋಪವನ್ನುಂಟು ಮಾಡಿರುತ್ತಾನೆ. ಇಡೀ ರಾತ್ರಿ ಅವಳು ಕೋಪವನ್ನೇ ಹೊಂದಿರುತ್ತಾಳೆ. ಇಷ್ಟರಲ್ಲಿ ಬೆಳಕಾಗುವ ಸಮಯ. ಆಗ ಇವರಿಬ್ಬರ ಸಂಭಾಷಣೆ. ಇದು ನಾಯಕನು ಹೇಳುವ ಮಾತು- **'ಮಾನಂ ಮುಂಚ ದಿನಂ ಪ್ರಾಪ್ತಂ'** 'ಎಲೌ ನಾಯಿಕೆಯೇ ! ನೀನು ಕೋಪವನ್ನು ಬಿಡು; ಏಕೆಂದರೆ ಈಗ ಪ್ರಭಾತ ಕಾಲವು ಬರುವ ಸಮಯ.' ಇದಕ್ಕೆ ನಾಯಿಕೆಯು **'ಮುಂಚ ಮಾ ನಂದಿನಂ ಪ್ರಾಪ್ತಂ'** = '(ಕೈಗೆ ಸಿಕ್ಕಿರುವ ನಂದಿಯನ್ನು ಬಿಡಬೇಡ) - ಎಂಬ ಅರ್ಥವನ್ನು ಕಲ್ಪಿಸಿಕೊಂಡು ಹೀಗೆ ಉತ್ತರಿಸುತ್ತಾಳೆ'. **'ಇಹ ನಂದೀ ನ (ಸಃ) ಹರಾಂತಿಕೇ (ವರ್ತತೇ)'** - 'ನಂದಿ ಇಲ್ಲಿರುವುದಿಲ್ಲ, ಅವನಿರುವುದು ಶಿವನ ಬಳಿ '- ಎಂದು. ಆದ್ದರಿಂದ ಪರಸ್ತ್ರೀಸಂಗದಿಂದ ಪರವಶನಾಗಿರುವ ನೀನು ಉನ್ಮತ್ತನಂತೆ ಈ ರೀತಿ ಮಾತನಾಡಬೇಡ' - ಎಂದು ಭಾವ. ಇಲ್ಲಿ 'ಕಾಲ ವಿಳಂಬಹೇತುಕವಾದ ಕೋಪವನ್ನು ಬಿಡು' ಎಂಬ ವಾಕ್ಯವನ್ನು ಶಬ್ದಶ್ಲೇಷದ ಮುಖಾಂತರ (ಸಭಂಗಶ್ಲೇಷದ ಮುಖಾಂತರ) ನಂದಿಯ ವಿಷಯಕವಾದ ಅರ್ಥಾಂತರಕಲ್ಪನೆ ವರ್ಣಿತವಾಗಿರುವುದರಿಂದ ಇದು ಶ್ಲೇಷಮೂಲಕವಾದ ವಕ್ರೋಕ್ತ್ಯಲಂಕಾರ. ಕಾಕುವಕ್ರೋಕ್ತಿಯನ್ನು ಹೀಗೆಯೇ ಊಹಿಸಿಕೊಳ್ಳಬೇಕು.

## ೯೩. ಸ್ವಭಾವೋಕ್ತ್ಯಲಂಕಾರಃ

ಒಂದು ವಸ್ತುವಿನ ಸ್ವಭಾವವನ್ನು ತದ್ವತ್ತಾಗಿ ವರ್ಣಿಸುವುದು ಸ್ವಭಾವೋಕ್ತ್ಯಲಂಕಾರ ವಾಗುತ್ತದೆ. ಇದರಲ್ಲಿ ಯಾವ ರೀತಿಯ ಚಮತ್ಕಾರವೂ ಇರುವುದಿಲ್ಲವೆಂದು ಭಾಮಹನು ಈ ಅಲಂಕಾರವನ್ನು ಒಪ್ಪದೆ, ಇದನ್ನು ಕೇವಲ 'ವಾರ್ತೆ' ಎಂದು ಕರೆದಿದ್ದಾನೆ. ಆದರೆ, ವಸ್ತುವಿನ ಸ್ವಭಾವದ ವರ್ಣನೆಯೂ ಸಹ ಚಮತ್ಕಾರವುಳ್ಳದ್ದಾಗಿರುತ್ತದೆಂದು ತಿಳಿದು ಬಹುಮಟ್ಟಿಗೆ ಎಲ್ಲರೂ ಈ ಅಲಂಕಾರವನ್ನು ಒಪ್ಪಿದ್ದಾರೆ.

ಸ್ವಭಾವೋಕ್ತಿ: ಸ್ವಭಾವಸ್ಯ ಜಾತ್ಯಾದಿಸ್ಥಸ್ಯ ವರ್ಣನಮ್ ॥ ೧೫೯ ॥
ಕುರಂಗೈರುತ್ತರಂಗಾಕ್ಷೈ: ಸ್ತಬ್ಧಕರ್ಣೈರುದೀಕ್ಷಿತಮ್ ।

'ಜಾತ್ಯಾದಿಸ್ಥಸ್ಯ ಸ್ವಭಾವಸ್ಯ ವರ್ಣನಂ ಸ್ವಭಾವೋಕ್ತಿ: (ಇತ್ಯಲಂಕಾರ:)'. 'ಜಾತಿ-ಕ್ರಿಯಾದಿಗಳಲ್ಲಿರುವ ಸ್ವಭಾವದ ವರ್ಣನೆಯು ಸ್ವಭಾವೋಕ್ತಿ ಎಂಬ ಅಲಂಕಾರವಾಗುತ್ತದೆ'.

ಉದಾಹರಣೆ : 'ಉತ್ತರಂಗಾಕ್ಷೈ: ಸ್ತಬ್ಧಕರ್ಣೈ: ಕುರಂಗೈ: ಉದೀಕ್ಷಿತಮ್'. 'ಮೇಲ್ಮುಖವಾದ ಮತ್ತು ಚಂಚಲವಾದ ಲೋಚನಗಳುಳ್ಳ, ಮತ್ತು ಚಾಂಚಲ್ಯರಹಿತವಾದ ಅಂದರೆ, ನಟ್ಟಗೆ ನಿಂತಂತಿರುವ ಕಿವಿಗಳುಳ್ಳ ಜಿಂಕೆಗಳಿಂದ ನೋಡಲ್ಪಟ್ಟಿತು'. ಇಲ್ಲಿ ವ್ಯಾಧಾದಿಗಳ ದರ್ಶನದಿಂದ ಭೀತ್ಯಾದಿಯನ್ನು ಹೊಂದಿರುವ ಜಿಂಕೆಗಳ ಸ್ವಾಭಾವಿಕವರ್ತನೆಯನ್ನು ವರ್ಣಿಸಿರುವುದರಿಂದ ಇದು ಸ್ವಭಾವೋಕ್ತ್ಯಲಂಕಾರ.

## ೯೪. ಭಾವಿಕಾಲಂಕಾರ:

ಹಿಂದೆ ನಡೆದುಹೋಗಿರುವ ಅಥವಾ ಮುಂದೆ ಆಗಲಿರುವ ಅರ್ಥವನ್ನು ಈಗ ಸಾಕ್ಷಾತ್ಕಾರ ಮಾಡಿಕೊಂಡಂತೆ ಅಂದರೆ, ಈಗಲೂ ತನ್ನೆದುರು ಹಾಗೆ ನಡೆಯುತ್ತಿದೆ ಎಂಬಂತೆ ಮಾಡುವ ವರ್ಣನೆ ಭಾವಿಕಾಲಂಕಾರವಾಗುತ್ತದೆ.

ಭಾವಿಕಂ ಭೂತಭಾವ್ಯರ್ಥಸಾಕ್ಷಾತ್ಕಾರಸ್ಯ ವರ್ಣನಮ್ ॥ ೧೬೦ ॥
ಅಹಂ ವಿಲೋಕಯೇಽದ್ಯಾಪಿ ಯುಧ್ಯಂತೇಽತ್ರ ಸುರಾಽಸುರಾ: ।

'ಭೂತಭಾವ್ಯರ್ಥಸಾಕ್ಷಾತ್ಕಾರಸ್ಯ ವರ್ಣನಂ ಭಾವಿಕಂ (ಇತ್ಯಲಂಕಾರ: ಭವತಿ)'. 'ಹಿಂದೆ ನಡೆದುಹೋಗಿರುವ ಅಥವಾ ಮುಂದೆ ಆಗಲಿರುವ ಅರ್ಥವನ್ನು ಈಗ ಸಾಕ್ಷಾತ್ಕಾರರೂಪವಾದ ರೀತಿಯಲ್ಲಿ ಮಾಡಿರುವ ವರ್ಣನೆ ಭಾವಿಕಾಲಂಕಾರ'.

ಅತೀತವೃತ್ತಾಂತಪ್ರತ್ಯಕ್ಷರೂಪ ವರ್ಣನೆಗೆ ಉದಾಹರಣೆ - 'ಸುರಾ ಸುರಾ: ಅತ್ರ ಯುಧ್ಯಂತೇ (ಇತಿ) ಅಹಂ ಅದ್ಯಾಪಿ ವಿಲೋಕಯೇ'. 'ದೇವಾಸುರರು ಈ ಪ್ರದೇಶದಲ್ಲಿ ಯುದ್ಧಮಾಡುತ್ತಿರುವಂತೆ ನಾನು ಈಗಲೂ ಕಾಣುತ್ತಿದ್ದೇನೆ' - 'ಕಳೆದುಹೋಗಿರುವ ಅಥವಾ ಹಿಂದೆ ಆಗಿಹೋಗಿರುವ ದೇವಾಸುರರ ಯುದ್ಧವು ಈಗಲೂ ಆಗುತ್ತಿರುವಂತೆ ಪ್ರತ್ಯಕ್ಷ ರೂಪವಾಗಿ ವರ್ಣಿತವಾಗಿರುವುದರಿಂದ ಇದು ಭಾವಿಕಾಲಂಕಾರ.

ಹೀಗೆಯೇ ಮುಂದೆ ಆಗಬಹುದಾದ (ಅನಾಗತ - ಇನ್ನೂ ಆಗದಿರುವ ಅಂದರೆ, ಮುಂದೆ ಆಗಲಿರುವ) ವೃತ್ತಾಂತದ ಪ್ರತ್ಯಕ್ಷರೀತಿಯ ವರ್ಣನೆ ಸಹ ಭಾವಿಕಾಲಂಕಾರ. ಇದರ ಉದಾಹರಣೆಯನ್ನು ಊಹಿಸಿಕೊಳ್ಳಬೇಕು.

## ೯೫. ಉದಾತ್ತಾಲಂಕಾರ:

ಶ್ಲಾಘ್ಯವೂ, ಸಮೃದ್ಧಿಪೂರ್ಣವೂ ಆದ ಚರಿತವನ್ನು ಅಂದರೆ ಸಂಗತಿಯನ್ನು ಬೇರೆಯವರ ಸೂಚಕರೀತಿಯಲ್ಲಿ (ಉಪಲಕ್ಷಣ-ಸೂಚಕ) ವರ್ಣನೆ ಮಾಡುವುದು ಉದಾತ್ತಾಲಂಕಾರವಾಗುತ್ತದೆ.

ಉದಾತ್ತಮೃದ್ಧೇಶ್ಚರಿತಂ ಶ್ಲಾಘ್ಯಂ ವಾನ್ಯೋಪಲಕ್ಷಣಮ್ ॥ ೧೬೧ ॥
ಸಾನೌ ಯತ್ರಾಭವದ್ಯುದ್ಧಂ ತದ್ಧೂರ್ಜಟಕಿರೀಟಿನೋಃ ।

'ಶ್ಲಾಘ್ಯಂ ಋದ್ಧೇಃ ಚರಿತಂ ವಾ ಅನ್ಯೋಪಲಕ್ಷಣಂ ಸತ್ (ವರ್ಣ್ಯತೇ) ತತ್ ಉದಾತ್ತಂ (ಇತ್ಯಲಂಕಾರಃ ಭವತಿ)'. ಪ್ರಶಂಸಾರ್ಹವಾದ ಚರಿತೆ ಅಥವಾ ಸಮೃದ್ಧಿಯುಳ್ಳ ಚರಿತೆಯ (ಘಟನೆಯ) ವರ್ಣನೆಯು ಬೇರೊಂದರ ಸೂಚಕರೂಪವಾಗಿ ವರ್ಣಿತವಾದರೆ ಅದು ಉದಾತ್ತಾಲಂಕಾರ.

ಉದಾಹರಣೆ : 'ಯತ್ರ ಸಾನೌ ಧೂರ್ಜಟಕಿರೀಟಿನೋಃ ತದ್ ಯುದ್ಧಂ ಅಭವತ್' - '(ಸಾ ಏಷಾ ಸಾನುಃ)'. 'ಯಾವ ಪರ್ವತದಲ್ಲಿ ಶಿವಾರ್ಜುನರ ಯುದ್ಧವಾಯಿತೋ ಅದೇ ಈ ಪರ್ವತ. ಇಲ್ಲಿ ಶಿವ - ಅರ್ಜುನರ ಯುದ್ಧವು ಹಿಮಾಲಯದ ಸೂಚಕವಾಗಿರುವುದರಿಂದ ಇದು ಉದಾತ್ತಾಲಂಕಾರ. ಇದು, ಶ್ಲಾಘ್ಯಚರಿತವು ಅನ್ಯಾರ್ಥಕ್ಕೆ ಉಪಲಕ್ಷಣ (ಸೂಚಕ) ವಾಗಿರುವುದಕ್ಕೆ ಉದಾಹರಣೆ ಯಾಗಿರುತ್ತದೆ. ಸಮೃದ್ಧಿಪೂರ್ಣಚರಿತವು ಇತರಾರ್ಥಕ್ಕೆ ಉಪಲಕ್ಷಣವಾಗಿರುವುದಕ್ಕೆ ಉದಾಹರಣೆಯನ್ನು ಊಹಿಸಿಕೊಳ್ಳಬೇಕು.

## ೯೬. ಅತ್ಯುಕ್ತ್ಯಲಂಕಾರಃ

ಅದ್ಭುತವೂ, ಅಸತ್ಯಾರ್ಥವೂ ಆದ ಶೌರ್ಯ ಔದರ್ಯಾದಿ ಗುಣಗಳ ವರ್ಣನೆ ಚಮತ್ಕಾರ ವುಳ್ಳದ್ದಾಗಿ ಅತ್ಯುಕ್ತ್ಯಲಂಕಾರವಾಗುತ್ತದೆ.

ಅತ್ಯುಕ್ತಿರದ್ಭುತಾತಥ್ಯಶೌರ್ಯೌದಾರ್ಯಾದಿವರ್ಣನಮ್ ॥ ೧೬೨ ॥
ತ್ವಯಿ ದಾತರಿ ರಾಜೇಂದ್ರ .ಯಾಚಕಾಃ ಕಲ್ಪಶಾಖಿನಃ ।

'ಅದ್ಭುತಾತಥ್ಯಶೌರ್ಯೌದಾರ್ಯಾದಿವರ್ಣನಂ ಅತ್ಯುಕ್ತಿಃ(ಭವತಿ)' ಅದ್ಭುತವೂ - ಅಸತ್ಯವೂ ಆದ ಶೌರ್ಯ, ಔದಾರ್ಯಾದಿ ಗುಣಗಳನ್ನು ವರ್ಣನೆ ಮಾಡಿದ್ದಾದರೆ ಅದು ಅತ್ಯುಕ್ತ್ಯಲಂಕಾರ.

ಉದಾಹರಣೆ : 'ಹೇ ರಾಜೇಂದ್ರ। ತ್ವಯಿ ದಾತರಿ (ಸತಿ) (ತದಾ) ಯಾಚಕಾಃ ಕಲ್ಪಶಾಖಿನಃ (ಭವಂತಿ), 'ಎಲೈ ರಾಜನೇ ! ನೀನು ಸಕಲ ಅಭೀಷ್ಟಗಳನ್ನು ನೆರವೇರಿಸತಕ್ಕವನಾಗಿರಲು, ಯಾಚಕರು ಕಲ್ಪವೃಕ್ಷಗಳೇ ಆಗಿರುವರು'. - ಅಂದರೆ, ರಾಜನು ನೀಡಿದ ಅಪರಿಮಿತ ಧನಾದಿಗಳಿಂದ ಯಾಚಕರೂ ಸಹ ಅಪಾರವಾಗಿ ದಾನಮಾಡುವ ಸಾಮರ್ಥ್ಯವುಳ್ಳವರಾದರು ಎಂದು ತಾತ್ಪರ್ಯ. ಇಲ್ಲಿ ರಾಜನ ದಾನಶೀಲತೆ ಅದ್ಭುತ ರೀತಿಯಿಂದ ಮತ್ತು ಮಿಥ್ಯಾರೂಪದಿಂದ ವರ್ಣಿತವಾಗಿರುವುದರಿಂದ, ಇದು ಕೇವಲ ಅತ್ಯುಕ್ತಿಯೇ ಆಗಿರುವುದರಿಂದ, ಇದು ಅತ್ಯುಕ್ತ್ಯಲಂಕಾರ. ದಾನಶೀಲತೆ ಅಪಾರ ವೆಂಬುದಂತೂ ಸತ್ಯ. ಆದರೆ, ಯಾಚಕರೂ ಸಹ ಕಲ್ಪವೃಕ್ಷಗಳಂತೆ ಇಷ್ಟಾರ್ಥದಾಯಕರಾಗುವುದು ಅದ್ಭುತ ಮತ್ತು ಅಸತ್ಯ ಎಂದು ಭಾವ.

## ೯೭. ನಿರುಕ್ತ್ಯಲಂಕಾರಃ

ಒಂದು ಪದದಲ್ಲಿನ ಅವಯವಾರ್ಥದ ಮುಖಾಂತರ ಬೇರೊಂದು ಅರ್ಥವನ್ನು ಕಲ್ಪಿಸಿ ವರ್ಣಿಸುವುದಾದರೆ ಅದು ನಿರುಕ್ತ್ಯಲಂಕಾರವಾಗುತ್ತದೆ.

ನಿರುಕ್ತಿರ್ಯೋಗತೋ ನಾಮ್ನಾಮನ್ಯಾರ್ಥತ್ವಪ್ರಕಲ್ಪನಮ್ ||೧೬೩||
ಈದೃಶೈಶ್ಚರಿತೈರ್ಜಾನೇ ಸತ್ಯಂ ದೋಷಾಕರೋ ಭವಾನ್ |

'**ಯೋಗತಃ ನಾಮ್ನಾಂ ಅನ್ಯಾರ್ಥತ್ವಪ್ರಕಲ್ಪನಮ್ ನಿರುಕ್ತಿಃ(ಇತ್ಯಲಂಕಾರ)**'. ಒಂದು ಪದದಲ್ಲಿನ ಯೋಗದ ಅಂದರೆ ವಿಗ್ರಹವಾಕ್ಯದ ಮುಖಾಂತರ ಬೇರೊಂದು ಅರ್ಥವನ್ನು ಕಲ್ಪನೆ ಮಾಡಿದ್ದಾದರೆ ಅದು ನಿರುಕ್ತ್ಯಲಂಕಾರ.

**ಉದಾಹರಣೆ :** ವಿರಹಿಣಿಯೋರ್ವಳು ಚಂದ್ರನನ್ನು ನಿಂದಿಸುತ್ತಿರುವುದು '(ಹೇ ಚಂದ್ರ!)' **ಈದೃಶೈಃ ಚರಿತೈಃ ಭವಾನ್ ಸತ್ಯಂ ದೋಷಾಕರಃ (ಇತಿ) ಜಾನೇ'** - 'ಎಲೈ ಚಂದ್ರನೇ ! ವಿರಹಿಗಳಿಗೆ ಇಂತಹ ಅಸಹನೀಯವಾದ ಪೀಡೆಯನ್ನುಂಟುಮಾಡುವಿಕೆಯಾದ ಕೆಟ್ಟಚರಿತೆಗಳಿಂದಾಗಿಯೇ ನಿಜಕ್ಕೂ **ದೋಷಾಕರ (ದೋಷಾಣಾಂ ಆಕರಃ, ದೋಷಾಂ ಕರೋತಿ ಇತಿ ಚ ದೋಷಾಕರಃ)** ಎಂದೆನಿಸಿರುವೆ'. ಇಲ್ಲಿ 'ದೋಷಾಕರ' ಪದದ ಅವಯವಾರ್ಥವು ೧. ದೋಷಗಳಿಗೆ ಆಕರ ಮತ್ತು ೨. ರಾತ್ರಿಗೆ ಕಾರಣ ಎಂಬ ಅರ್ಥವುಳ್ಳದ್ದಾಗಿ, ದೋಷಾಕರ = ರಾತ್ರಿಗೆ ಕಾರಣ - ಎಂಬ ಅರ್ಥವು ಪ್ರಸಿದ್ಧವಾಗಿದ್ದು, ತನ್ನ ದುಷ್ಟಚರಿತೆಯ ಕಾರಣ 'ದೋಷಗಳಿಗೆ ಆಕರ' ಎಂಬ ಅರ್ಥಾಂತರವು ಇಲ್ಲಿ ತೋರುವಂತೆ ವರ್ಣಿತವಾಗಿರುವುದರಿಂದ, ಇದು ನಿರುಕ್ತ್ಯಲಂಕಾರ.

## ೯೮. ಪ್ರತಿಷೇಧಾಲಂಕಾರಃ

ಪ್ರಸಿದ್ಧವಾದ ಒಂದು ಅರ್ಥದ ನಿಷೇಧವು ಪುನಃ ವರ್ಣಿತವಾದರೆ ಅದು ಪ್ರತಿಷೇಧಾಲಂಕಾರ ವಾಗುತ್ತದೆ. ಅಂದರೆ ಈ ನಿಷೇಧವು ಅರ್ಥಾಂತರಗರ್ಭಿತವಾಗಿರಬೇಕು ಎಂಬುದು ತತ್ತ್ವ.

ಪ್ರತಿಷೇಧಃ ಪ್ರಸಿದ್ಧಸ್ಯ ನಿಷೇಧಸ್ಯಾನುವರ್ಣನಮ್ ||೧೬೪||
ನ ದ್ಯೂತಮೇತತ್ ಕಿತವ ಕ್ರೀಡನಂ ನಿಶಿತೈಃ ಶರೈಃ |

'ಪ್ರಸಿದ್ಧಸ್ಯ ನಿಷೇಧಸ್ಯ ಅನುವರ್ಣನಂ ಪ್ರತಿಷೇಧಃ (ಇತ್ಯಲಂಕಾರಃ)'. 'ಪ್ರಸಿದ್ಧವಾಗಿರುವ ನಿಷೇಧವನ್ನೇ ಮತ್ತೆ ವರ್ಣನೆ ಮಾಡಿದರೆ ಅದು ಪ್ರತಿಷೇಧಾಲಂಕಾರ'.

**ಉದಾಹರಣೆ :** ಯುದ್ಧ ಪ್ರವೃತ್ತನಾದ ಶಕುನಿಯನ್ನು ಹಾಸ್ಯ ಮಾಡುತ್ತಿರುವುದು - '**ಹೇ ಕಿತವ! ಏತತ್ ದ್ಯೂತಂ ನ, (ಕಿಂತು) ನಿಶಿತೈಃ ಶರೈಃ (ಸಹ) ಕ್ರೀಡನಂ**'. 'ಎಲೈ ವಂಚಕ ಶಕುನಿಯೇ! ಇದು ದಾಳಗಳ ಕ್ರೀಡೆಯಾದ ದ್ಯೂತವಲ್ಲ; ಆದರೆ ತೀಕ್ಷ್ಣವಾದ ಬಾಣಗಳ ಮುಖಾಂತರ ಆಡುವ ಯುದ್ಧ ಕ್ರೀಡೆ'. ಇಲ್ಲಿ ಯುದ್ಧವನ್ನು ದ್ಯೂತವಲ್ಲವೆಂದು ದ್ಯೂತತ್ವರೂಪದಿಂದ ನಿಷೇಧಿಸಿ, ಆ ರೀತಿ ನಿಷಿದ್ಧವಾಗಿರುವ ಯುದ್ಧವನ್ನೇ, ನಿಶಿತಶರಗಳ ಕ್ರೀಡೆ - ಎಂಬ ಅರ್ಥಾಂತರರೂಪದಿಂದ ವರ್ಣಿಸಿರುವುದರಿಂದ ಇದು ಪ್ರತಿಷೇಧಾಲಂಕಾರವಾಗುತ್ತದೆ. 'ನೀನು ದ್ಯೂತಕ್ಕೆ ಮಾತ್ರ ಯೋಗ್ಯ. ಯುದ್ಧಕ್ಕಲ್ಲ' ಎಂಬ ಹಾಸ್ಯ ಇಲ್ಲಿದೆ.

## ೯೯. ವಿಧ್ಯಲಂಕಾರಃ

ಸಿದ್ಧವೇ ಆಗಿರುವ ಅರ್ಥವನ್ನು ಪುನಃ ವರ್ಣಿಸುವುದು ಅರ್ಥವಿಶೇಷದ ದ್ಯೋತನದ ನಿಮಿತ್ತವೆಂಬ ರೀತಿಯ ವರ್ಣನೆ ವಿಧ್ಯಲಂಕಾರವಾಗುತ್ತದೆ.

ಸಿದ್ಧಸ್ಯೈವ ವಿಧಾನಂ ಯತ್ ತಾಮಾಹುರ್ವಿಧ್ಯಲಂಕೃತವ್ || ೧೬೫ ||
ಪಂಚಮೋದಂಚನೇ ಕಾಲೇ ಕೋಕಿಲಃ ಕೋಕಿಲೋ ಭವೇತ್ |

'ಸಿದ್ಧಸ್ಯೈವ ವಿಧಾನಂ (ಇತಿ) ಯತ್, ತಾಂ ವಿಧ್ಯಲಂಕೃತಿಂ ಆಹುಃ'; ಸಿದ್ಧವಾದ ಅರ್ಥವನ್ನೇ, ಅನುಪಯುಕ್ತವಾದರೂ ಅರ್ಥಾಂತರಗರ್ಭಿತವಾಗಿರುವ ಕಾರಣ, ಮತ್ತೆ ವರ್ಣಿಸುವುದು ವಿಧ್ಯಲಂಕಾರವಾಗುತ್ತದೆ.

**ಉದಾಹರಣೆ :** 'ಪಂಚಮೋದಂಚನೇ ಕಾಲೇ ಕೋಕಿಲಃ ಕೋಕಿಲಃ ಭವೇತ್' 'ಪಂಚಮ ಸ್ವರವನ್ನಾಶ್ರಯಿಸಿ ಕೂಗುವ ಕಾಲದಲ್ಲಿ ಅಂದರೆ ವಸಂತಕಾಲದಲ್ಲಿ ಕೋಗಿಲೆಯು ಕೋಗಿಲೆಯೇ ಆಗಿರುತ್ತದೆ'. ಇಲ್ಲಿ ಇತರ ಕಾಲದಲ್ಲಿ ಕೋಗಿಲೆಯು ಪಂಚಮಸ್ವರವನ್ನಾಶ್ರಯಿಸಿ ಹಾಡದೇ ಇರುವುದರಿಂದ, ಇದು ಕೋಗಿಲೆ ಎಂಬ ಅನ್ವರ್ಥನಾಮವುಳ್ಳದ್ದು ವಸಂತಕಾಲದಲ್ಲಿ ಎಂದು ಭಾವ. ವಸ್ತುತಃ ಕೋಗಿಲೆಯಲ್ಲಿ ಕೋಕಿಲತ್ವವು ಪ್ರಸಿದ್ಧವೇ ಆಗಿದ್ದರೂ, ಎರಡನೇ ಸಾರಿ ಕೋಕಿಲ ಶಬ್ದ ಪ್ರಯೋಗ ವಿಧಾನವೂ. ವಸಂತ ಕಾಲದಲ್ಲಿ ಪಂಚಮಸ್ವರವನ್ನಾಶ್ರಯಿಸಿ ಹಾಡುವುದರಿಂದ ಸರ್ವಜನ ಹೃದ್ಯವಾಗಿರುತ್ತದೆಂಬ ಅರ್ಥಾಂತರಪ್ರತೀತಿದಾಯಕವಾಗಿರುವುದರಿಂದ ಇದು ವಿಧ್ಯಲಂಕಾರ.

## ೧೦೦. ಹೇತ್ವಲಂಕಾರಃ

ಕಾರಣ ಕಾರ್ಯಗಳ ಸಂಬಂಧವನ್ನು ಚಮತ್ಕಾರರೂಪವಾಗಿ ಮಾಡುವ ವರ್ಣನೆ ಹೇತ್ವಲಂಕಾರ ವಾಗುತ್ತದೆ.

ಹೇತೋರ್ಹೇತುಮತಾಸಾರ್ಧಂ ವರ್ಣನಂ ಹೇತುರುಚ್ಯತೇ || ೧೬೬ ||
ಅಸಾವುದೇತಿ ಶೀತಾಂಶುರ್ಮಾನಭೇದಾಯ ಸುಭ್ರುವಾಮ್ |

'ಹೇತೋಃ ಹೇತುಮತಾಸಾರ್ಧಂ ವರ್ಣನಂ ಹೇತುಃ (ಇತಿ) ಉಚ್ಯತೇ'. 'ಕಾರಣ ಮತ್ತು ಕಾರ್ಯಗಳನ್ನು ಒಟ್ಟಿಗೆ ವರ್ಣಿಸಿದರೆ ಅದು ಹೇತ್ವಲಂಕಾರ'.

**ಉದಾಹರಣೆ:** 'ಅಸೌ ಶೀತಾಂಶುಃ ಸುಭ್ರುವಾಂ ಮಾನಭೇದಾಯ ಉದೇತಿ;' 'ಶೀತಕಿರಣನಾದ ಈ ಚಂದ್ರನು ಸ್ತ್ರೀಯರ ಪ್ರಣಯಕೋಪಶಮನಕ್ಕಾಗಿ ಮೂಡುತ್ತಾನೆ'. ಇಲ್ಲಿ ಚಂದ್ರೋದಯ ಕಾರಣ, ಸ್ತ್ರೀಯರ ಪ್ರಣಯಕೋಪಶಮನ ಕಾರ್ಯ. ಈ ಕಾರಣ - ಕಾರ್ಯಗಳ ಸಂಬಂಧವನ್ನು ಇಲ್ಲಿ ವರ್ಣಿಸಿರುವುದರಿಂದ ಇದು ಹೇತ್ವಲಂಕಾರ. ಕೆಲವರು ಹೇತ್ವಲಂಕಾರವನ್ನು ಹೀಗೂ ವಿವರಿಸುವರು.

ಹೇತು ಹೇತುಮತೋರೈಕ್ಯಂ ಹೇತುಂ ಕೇಚಿತ್ಪ್ರಚಕ್ಷತೇ |
ಲಕ್ಷ್ಮೀವಿಲಾಸಾ ವಿದುಷಾಂ ಕಟಾಕ್ಷಾ ವೆಂಕಟಪ್ರಭೋಃ || ೧೬೭ ||

ಹೇತು - ಹೇತುಮತೋಃ ಐಕ್ಯಂ (ಅಪಿ) ಕೇಚಿತ್ ಹೇತುಂ ಪ್ರಚಕ್ಷತೇ' 'ಕಾರಣ ಮತ್ತು ಕಾರ್ಯಗಳ ಐಕ್ಯವನ್ನೂ ಸಹ ಕೆಲವರು ಹೇತ್ವಲಂಕಾರವೆಂದು ಹೇಳುತ್ತಾರೆ'.

**ಉದಾಹರಣೆ :** 'ಹೇ ವೆಂಕಟಪ್ರಭೋ ! (ತವ) ಕಟಾಕ್ಷಾಃ ವಿದುಷಾಂ (ಸದಾ) ಲಕ್ಷ್ಮೀವಿಲಾಸಾಃ, 'ಎಲೌ ಸ್ವಾಮಿಯಾದ ವೆಂಕಟೇಶ್ವರನೇ ! ನಿನ್ನ ಕಟಾಕ್ಷಗಳೆಂದರೆ, ವಿದ್ವಾಂಸರಿಗೆ ಸದಾಕಾಲ ಸಂಪತ್ಸಮೃದ್ಧಿದಾಯಕಗಳು'. ಇಲ್ಲಿ ವೆಂಕಟೇಶ್ವರನ ಕಟಾಕ್ಷಮಾತ್ರದಿಂದ ಜ್ಞಾನಿಗಳಿಗೆ ಸಮೃದ್ಧಿಯುಂಟಾಗುತ್ತದೆ ಎಂದು ಹೇಳುವುದಕ್ಕೆ ಬದಲಾಗಿ, ಕಾರ್ಯಶೈಘ್ರ್ಯಕ್ಕಾಗಿ, ಕಾರಣಗಳಾದ ಕಟಾಕ್ಷಗಳಿಗೂ, ಕಾರ್ಯರೂಪವಾದ ಲಕ್ಷ್ಮೀವಿಲಾಸಗಳಿಗೂ ಇಲ್ಲಿ ಐಕ್ಯ ಮತ್ತು ಅಭೇದವನ್ನು ಹೇಳಿರುವುದರಿಂದ ಇದು ಹೇತ್ವಲಂಕಾರವಾಗುತ್ತದೆ.

## ಶಬ್ದಾಲಂಕಾರಗಳು

**ಪ್ರಸ್ತಾವಿಕ :** 'ಚಂದ್ರಾಲೋಕದಲ್ಲಿ ಕೇವಲ ಅರ್ಥಾಲಂಕಾರಗಳನ್ನು (ಒಂದು ನೂರು) ವಿವರಿಸಲಾಗಿದೆ. ಆದರೆ ಸಾಹಿತ್ಯ ತರಗತಿಯ ಪಾಠ್ಯಗ್ರಂಥದಲ್ಲಿ ಆರಿಸಿದ ಎಪ್ಪತ್ತೇಳು ಅರ್ಥಾಲಂಕಾರಗಳ ಜತೆಗೆ ನಾಲ್ಕು ಶಬ್ದಾಲಂಕಾರಗಳನ್ನೂ ಸಹ ಸೇರಿಸಲಾಗಿದೆ. ಆದ್ದರಿಂದ ಸಾಹಿತ್ಯ ಪ್ರಸಿದ್ಧ ಪರೀಕ್ಷೆಯ ದೃಷ್ಟಿಯಿಂದ ಆ ನಾಲ್ಕು ಶಬ್ದಾಲಂಕಾರಗಳ ವಿವರಣೆಯನ್ನು ಇಲ್ಲಿ ಕೊಡಲಾಗಿದೆ. ಆ ನಾಲ್ಕು ಶಬ್ದಾಲಂಕಾರಗಳೆಂದರೆ—

೧. ಛೇಕಾನುಪ್ರಾಸಾಲಂಕಾರ    ೨. ವೃತ್ತ್ಯನುಪ್ರಾಸಾಲಂಕಾರ
೩. ಲಾಟಾನುಪ್ರಾಸಾಲಂಕಾರ    ೪. ಯಮಕಾಲಂಕಾರ

ಅಲಂಕಾರ ಪದಕ್ಕೆ ಚಮತ್ಕಾರ, ಶೋಭಾಜನಕ, ಶೋಭಾಧಾಯಕ, ಸೌಂದರ್ಯ, ಇತ್ಯಾದಿ ಅರ್ಥಗಳಿರುವಂತೆ, ಗೌಣ ಅಥವಾ ಅಮುಖ್ಯ, ಪೋಷಕ ಇತ್ಯಾದಿ ಅರ್ಥಗಳೂ ಇರುತ್ತವೆ.

ಚಮತ್ಕಾರವು ಶಬ್ದವನ್ನು ಆಶ್ರಯಿಸಿರುವಂತೆ, ಅರ್ಥವನ್ನೂ ಆಶ್ರಯಿಸಿರುತ್ತದೆ. ಚಮತ್ಕಾರವು ಶಬ್ದನಿಷ್ಠವಾದಲ್ಲಿ ಅದು ಶಬ್ದಾಲಂಕಾರವೆನಿಸುತ್ತದೆ. ಹಾಗೆಯೇ ಅರ್ಥನಿಷ್ಠವಾದಲ್ಲಿ ಅದು ಅರ್ಥಾಲಂಕಾರವೆನಿಸುತ್ತದೆ. ಇವೆರಡರ ಪ್ರಮುಖ ವೈಲಕ್ಷಣ್ಯವೆಂದರೆ ಶಬ್ದಾಲಂಕಾರವು ಶಬ್ದ ಪರಿವೃತ್ತಿಯನ್ನು ಸಹಿಸುವುದಿಲ್ಲ. ಆದರೆ, ಅರ್ಥಾಲಂಕಾರವು ಶಬ್ದಪರಿವೃತ್ತಿಯನ್ನು ಸಹಿಸುತ್ತದೆ. ಹೇಗೆಂದರೆ

**'ಹಂಸೀವ ಕೃಷ್ಣ ತೇ ಕೀರ್ತಿಃ'** - ಎಂಬಲ್ಲಿ ಹಂಸೀ, ಕೀರ್ತಿ ಪದಗಳಿಗೆ ಬದಲಾಗಿ, ಇವುಗಳ ಪರ್ಯಾಯ ಪದಗಳನ್ನು ಯೋಜಿಸಿದರೂ, ಅರ್ಥ ಚಮತ್ಕಾರ ಕೆಡುವುದಿಲ್ಲ. ಆದರೆ **'ಉಚ್ಚರದ್ - ಭೂರಿಕೀಲಾಲಃ ಶುಶುಭೇ ವಾಹಿನೀಪತಿಃ** - ಎಂಬಲ್ಲಿ ಕೀಲಾಲ, ವಾಹಿನೀಪತಿ ಈ ಪದಗಳನ್ನು ಬಿಟ್ಟು ಇವುಗಳ ಪರ್ಯಾಯಪದಗಳನ್ನು ಬಳಸಿದರೆ, ಕವಿಯ ಉದ್ದಿಷ್ಟ ಚಮತ್ಕಾರ ದೊರೆಯಲಾರದು - ಇತ್ಯಾದಿ.

ಶಬ್ದಾಲಂಕಾರಗಳಿರುವ ಉದಾಹರಣೆಗಳಲ್ಲಿ ಅರ್ಥಾಲಂಕಾರಗಳೂ ಇರಬಹುದು. ಹಾಗೆ ಅರ್ಥಾಲಂಕಾರಗಳು ಇರುವ ಉದಾಹರಣೆಗಳಲ್ಲಿ ಶಬ್ದಾಲಂಕಾರಗಳೂ ಇರಬಹುದು. ಆದರೆ 'ಗೌಣ - ಮುಖ್ಯ ನ್ಯಾಯ'ದಂತೆ, ಅರ್ಥಲಂಕಾರದ ಸಂದರ್ಭದಲ್ಲಿ ಅರ್ಥಾಲಂಕಾರಕ್ಕೇ ಪ್ರಾಧಾನ್ಯ,

ಶಬ್ದ ಚಮತ್ಕಾರ ಗೌಣ; ಅಂತೆಯೇ ಶಬ್ದಾಲಂಕಾರದ ಸ್ಥಳದಲ್ಲಿ ಸಹ ಶಬ್ದನಿಷ್ಠ ಚಮತ್ಕಾರವೇ ಪ್ರಧಾನವಾಗಿದ್ದು ಅರ್ಥಚಮತ್ಕಾರವು ಗೌಣವಾಗಿರುತ್ತದೆ - ಇತ್ಯಾದಿ.

## ಶಬ್ದಾಲಂಕಾರಾಃ

(ಮೊದಲಿಗೆ ಅನುಪ್ರಾಸಾಲಂಕಾರಗಳನ್ನು ಸಮನ್ವಯಿಸಲಾಗಿದೆ)

**ಸರೂಪವರ್ಣವಿನ್ಯಾಸಮನುಪ್ರಾಸಂ ಪ್ರಚಕ್ಷತೇ' |**

'ಸಮಾನ ರೂಪವನ್ನುಳ್ಳ ವರ್ಣಗಳ ವಿನ್ಯಾಸವನ್ನು ಅನುಪ್ರಾಸವೆಂದು ಹೇಳಲಾಗುತ್ತದೆ'.

ಉದಾಹರಣಮ್—

**'ಕಿಂ ತಯಾ ಚಿಂತಯಾ ಕಾಂತೇ ನಿತಾಂತೇತಿ ಯಯೋದಿತಮ್' ||**

'ಎಲೌ ಕಾಂತೆಯೇ, ಸುಧೀರ್ಘವಾದ ಈ ಚಿಂತೆಯಿಂದ ಏನು ಪ್ರಯೋಜನ ?'

ಇಲ್ಲಿ 'ಕ' ಕಾರವು ಎರಡು ಸಾರಿಯೂ 'ತಯಾ' ಎಂಬುದು ಎರಡು ಸಾರಿಯೂ 'ಂತ' ಎಂಬುದು ಮೂರು ಸಾರಿಯೂ 'ತ' ಕಾರವು ಏಳು ಸಾರಿಯೂ ಬಂದಿವೆ. ಆದ್ದರಿಂದ ಇದು ಅನುಪ್ರಾಸಾಲಂಕಾರ.

**'ಸ ಚ ದ್ವಿವಿಧಃ | ಛೇಕಾನುಪ್ರಾಸಃ' ವೃತ್ತ್ಯನುಪ್ರಾಸಃ ||**

'ಆ ಅನುಪ್ರಾಸವು ಛೇಕಾನುಪ್ರಾಸ ಮತ್ತು ವೃತ್ತ್ಯನುಪ್ರಾಸವೆಂದು ಎರಡು ವಿಧವಾಗಿರುತ್ತದೆ'.

## ಛೇಕಾನುಪ್ರಾಸಃ

**'ಸೋಽನೇಕಸ್ಯ ಸಕೃತ್ಪೂರ್ವಃ' |**
**ಅನೇಕಸ್ಯ-ವ್ಯಂಜನಸ್ಯ, ಪೂರ್ವಃ-ಛೇಕಃ, ಸಃ-ಅನುಪ್ರಾಸಃ ||**

'ಅನೇಕ ವ್ಯಂಜನವು ಒಮ್ಮೆ ಆವೃತ್ತವಾಗುವುದು ಮೊದಲನೆಯದಾದ ಛೇಕಾನುಪ್ರಾಸವಾಗುತ್ತದೆ'.

ಉದಾಹರಣಮ್—

**'ತತೋಽರುಣ ಪರಿಸ್ಪಂದಮಂದೀಕೃತವಪುಃ ಶಶೀ |**
**ದಧೇ ಕಾಮಪರಿಕ್ಷಾಮ ಕಾಮಿನೀಗಂಡಪಾಂಡುತಾಮ್ ||**

'ಪೂರ್ವದಿಕ್ಕಿನಲ್ಲಿ ಅರುಣೋದಯವಾಗುತ್ತಾ ಇದೆ, ಪಶ್ಚಿಮ ದಿಕ್ಕಿನಲ್ಲಿ ಪೂರ್ಣಚಂದ್ರನು ಮುಳುಗುವ ಸ್ಥಿತಿಯಲ್ಲಿದ್ದಾನೆ. ಆಗ, ಕಾಂತಿಹೀನದ ಈ ಚಂದ್ರನು, ವಿರಹವ್ಯಥೆಯಿಂದ ಬಳಲುತ್ತಿರುವ ಕಾಮಿನಿಯ ಕಪೋಲದಂತೆ ಪಾಂಡುತ್ವವನ್ನು ಹೊಂದಿದನು'.

ಇಲ್ಲಿ 'ತ' ಕಾರ, 'ರ' ಕಾರ, 'ಪ' ಕಾರ, 'ಂದ' ಕಾರ, 'ಶ' ಕಾರ-ಹೀಗೆ ಅನೇಕ ವ್ಯಂಜನಗಳ ಸಕೃತ್ ಆವೃತ್ತಿ ಇರುವುದರಿಂದ ಇಲ್ಲಿ ಛೇಕಾನುಪ್ರಾಸಾಲಂಕಾರ. ಈ ಉದಾಹರಣೆಯ ಉತ್ತರಾರ್ಧದಲ್ಲಿ ಉಪಮಾಲಂಕಾರವಿದ್ದರೂ, ಅದು ಶಬ್ದಚಮತ್ಕಾರದಲ್ಲಿ ಮುಚ್ಚಿಹೋಗಿದೆ.

## ವೃತ್ತ್ಯನುಪ್ರಾಸಃ

'ಏಕಸ್ಯಾನೇಕಸ್ಯ ವಾ ವ್ಯಂಜನಸ್ಯ ಅನೇಕವಾರಂ ಪ್ರಯೋಗಃ ವೃತ್ತ್ಯನುಪ್ರಾಸಃ' ||

'ಒಂದು ವ್ಯಂಜನ ಅಥವಾ ಅನೇಕ ವ್ಯಂಜನಗಳು ಅನೇಕ ಸಾರಿ ಪ್ರಯುಕ್ತವಾದಲ್ಲಿ ಅದು ವೃತ್ತ್ಯನುಪ್ರಾಸಾಲಂಕಾರ'.

ಯಥಾ ವಾ -

ಅಪಸಾರಯ ಘನಸಾರಂ ಕುರುಹಾರಂ ದೂರ ಏವ ಕಿಂ ಕಮಲೈಃ ? |
ಅಲಮಲಮಲಮಾಲಿ ಮೃಣಾಲೈಃ ಇತಿ ವದತಿ ದಿವಾನಿಶಂ ಬಾಲಾ ||

ವಿರಹತಪ್ತಳಾದ ನಾಯಿಕೆಗೆ ಅವಳ ಸಖಿಯು ಶೈತ್ಯೋಪಚಾರ ಮಾಡುತ್ತಿರುವಾಗ, ನಾಯಿಕೆಯ ಆ ಉಪಕಾರಗಳನ್ನು ತಡೆಯುತ್ತಿರುವ ರೀತಿಯಿದು. 'ಎಲೌ ಸಖಿಯೇ! ಕರ್ಪೂರವನ್ನು ದೂರವಿಡು, ಈ ಮುಕ್ತಾಹಾರವನ್ನು ದೂರಮಾಡು, ಈ ಕಮಲಗಳಿಂದ ಏನು ಪ್ರಯೋಜನ ? ಹಾಗೆಯೇ ಈ ತಾವರೆಯ ದಂಟುಗಳ ಉಪಚಾರವೂ ಕೂಡ ಬೇಡವೇ ಬೇಡ' ಎಂದು ಅಸಹಾಯಕಳಾದ ನಾಯಿಕೆಯು ಹಗಲೂ ರಾತ್ರಿ ಹೇಳುತ್ತಿರುವಳು.

ಇಲ್ಲಿ 'ನ' ಕಾರ 'ರ' ಕಾರ, 'ಕ' 'ಲ' ಕರಾದಿ ಅನೇಕ ವ್ಯಂಜನಗಳು ಅನೇಕ ಸಾರಿ ಪ್ರಯುಕ್ತ ವಾಗಿರುವುದರಿಂದ ಇದು ವೃತ್ತ್ಯನುಪ್ರಾಸಾಲಂಕಾರ

## ಲಾಟಾನುಪ್ರಾಸಃ

'ಶಾಬ್ದಸ್ತು ಲಾಟಾನುಪ್ರಾಸೋ ಭೇದೇ ತಾತ್ಪರ್ಯಮಾತ್ರತಃ' |

ಒಂದೇ ಪದವು ಅನೇಕವಾರ ಪ್ರಯುಕ್ತವಾಗಿದ್ದರೂ ತಾತ್ಪರ್ಯ ಮಾತ್ರ ಬೇರೆಯೇ ಆಗಿದ್ದಲ್ಲಿ, ಅದು ಲಾಟಾನುಪ್ರಾಸಾಲಂಕಾರ.

ಉದಾಹರಣಮ್ —

ಯಸ್ಯ ನ ಸವಿಧೇ ದಯಿತಾ ದವದಹನಸ್ತುಹಿನದೀಧಿತಿಸ್ತಸ್ಯ |
ಯಸ್ಯ ಚ ಸವಿಧೇ ದಯಿತಾ ದವದಹನಸ್ತುಹಿನದೀಧಿತಿಸ್ತಸ್ಯ ||

'ಯಾವಾತನ ಸನಿಹದಲ್ಲಿ ಪ್ರಿಯಳು ಇರುವುದಿಲ್ಲವೋ ಅವನಿಗೆ ಚಂದ್ರನ ಕಿರಣಗಳು ಕಾಡುಕಿಚ್ಚಿನಂತೆ ಆಗುತ್ತವೆ. ಆದರೆ, ಯಾವಾತನ ಸನಿಹದಲ್ಲಿ ಪ್ರಿಯಳು ಇರುವಳೋ, ಅವನಿಗೆ ಕಾಡುಕಿಚ್ಚೂ ಸಹ ಚಂದ್ರನ ಕಿರಣದಂತೆ ತಂಪಾಗುತ್ತದೆ'.

ಈ ಉದಾಹರಣೆಯ ಪೂರ್ವಾರ್ಧದಲ್ಲಿ ನ ಕಾರದಿಂದಾಗಿ ನಿಷೇಧಾರ್ಥವಿರುತ್ತದೆ. ಆದರೆ, ಉತ್ತರಾರ್ಧದಲ್ಲಿ 'ಚ' ಕಾರದಿಂದಾಗಿ ವಿಧ್ಯರ್ಥವಿರುತ್ತದೆ. ಇದರಿಂದಾಗಿ, ಪದಗಳ ಸಾಮ್ಯದಿಂದ ಅರ್ಥವು ಒಂದೇ ಆಗಿದ್ದರೂ, ತಾತ್ಪರ್ಯವು ಮಾತ್ರ ಪೂರ್ವಾರ್ಧದಲ್ಲಿಯೇ ಬೇರೆ, ಉತ್ತರಾರ್ಧದಲ್ಲಿಯೇ ಬೇರೆ. ಆದ್ದರಿಂದ ಇದು ಲಾಟಾನುಪ್ರಾಸಾಲಂಕಾರ.

## ಯಮಕಾಲಂಕಾರಃ

**ಅರ್ಥೇಸತ್ಯರ್ಥಭಿನ್ನಾನಾಂ ವರ್ಣಾನಾಂ ಸಾ ಪುನಃ ಶ್ರುತಿಃ |**

ಅರ್ಥವೂ ಇರಬೇಕು. ಅಂದರೆ, ಪೂರ್ಣಾರ್ಥವೂ ಇರಬೇಕು. ಆದರೆ, ಭಿನ್ನ ಭಿನ್ನ ಅರ್ಥಬೋಧಕವಾದ ವರ್ಣಗಳ ಪುನರಾವೃತ್ತಿ ಇರಬೇಕು. ಹೀಗಿದ್ದರೆ ಇದು ಯಮಕಾಲಂಕಾರ.

**ಉದಾಹರಣಮ್ –**

**'ಸರಸ್ವತಿ ಪ್ರಸಾದಂ ಮೇ ಸ್ಥಿತಿಂ ಚಿತ್ತ ಸರಸ್ವತಿ |**
**ಸರಸ್ವತಿ ಕುರುಕ್ಷೇತ್ರಂ ಕುರು ಕ್ಷೇತ್ರಸರಸ್ವತಿ' ||**

'ಎಲೌ ಸರಸ್ವತಿಯೇ ! ನೀನು ನನಗೆ ಅನುಗ್ರಹವನ್ನು ಮಾಡು, ನನ್ನ ಚಿತ್ತವೆಂಬ ಸಾಗರದಲ್ಲಿ ನಿನ್ನ ಶಾಶ್ವತ ಸ್ಥಿತಿಯನ್ನು ಉಂಟುಮಾಡು, ನನ್ನ ಶರೀರವೆಂಬ ಸಮುದ್ರದಲ್ಲಿ ಶಾಶ್ವತವಾದ ನಿನ್ನ ಆವಾಸಸ್ಥಾನವನ್ನು ಹೊಂದು' ಇಲ್ಲಿ ಸರಸ್ವತಿ 'ಕುರು' 'ಕ್ಷೇತ್ರ' ಈ ಪದಗಳು ಅರ್ಥವುಳ್ಳವುಗಳಾಗಿದ್ದರೂ, ಭಿನ್ನ ಭಿನ್ನ ಅರ್ಥಗಳನ್ನು ಕೊಡುತ್ತಿರುವುದರಿಂದ ಇದು ಯಮಕಾಲಂಕಾರ.

'ಯಸ್ಯ ನ ಸವಿಧೇ............', ಮತ್ತು 'ಸರಸ್ವತಿ .................' ಈ ಎರಡೂ ಉದಾಹರಣೆಗಳಲ್ಲಿ ಉಪಮಾಲಂಕಾರವಿದ್ದರೂ, ಅದು ಗೌಣ.

## ಮುಕ್ತಾಯವಾಕ್ಯ.

**ಇತ್ಥಂ ಶತಮಲಂಕಾರಾ ಲಕ್ಷಯಿತ್ವಾ ನಿದರ್ಶಿತಾಃ**
**ಪ್ರಾಚಾಮಾಧುನಿಕಾನಾಂ ಚ ಮತಾನ್ಯಾಲೋಚ್ಯ ಸರ್ವಶಃ || ೧೬೮ ||**

ಹೀಗೆ ಪ್ರಾಚೀನರಾದ ಭಾಮಹ - ದಂಡಿ - ಉದ್ಭಟಾದಿ ಆಲಂಕಾರಿಕರ ಮತ್ತು ನವೀನರಾದ ಮಮ್ಮಟ, ರುಯ್ಯಕ, ವಿಶ್ವನಾಥಾದಿ ಆಲಂಕಾರಿಕರ ಎಲ್ಲ ಅಭಿಪ್ರಾಯಗಳನ್ನೂ ಪರಿಶೀಲಿಸಿ, ಅಂದರೆ ಎಲ್ಲವನ್ನೂ ಸರ್ವರೀತಿಯಿಂದ ಪರಾಮರ್ಶಿಸಿ, ಒಟ್ಟು ಒಂದು ನೂರು ಅಲಂಕಾರಗಳ ಲಕ್ಷಣ ಹಾಗೂ ಲಕ್ಷ್ಯಗಳ ಸಮನ್ವಯವನ್ನು ವಿವರಿಸಲಾಗಿದೆ.

ಇಲ್ಲಿಗೆ ಚಂದ್ರಾಲೋಕಗ್ರಂಥವು ಸಮಾಪ್ತವಾದುದು.

|| ಶಿವಮ್ ||

# ವೃತ್ತರತ್ನಾಕರಃ

ಛಂದಶ್ಶಾಸ್ತ್ರವು ವೇದಗಳ ಆರು ಅಂಗಗಳ ಪೈಕಿ ಒಂದು ಅಂಗವಾಗಿರುತ್ತದೆ.

'ಶಿಕ್ಷಾ ಕಲ್ಪೋ ವ್ಯಾಕರಣಂ ನಿರುಕ್ತಂ ಛಂದಸಾಂ ಚಯಃ ।
ಜ್ಯೋತಿಷಾಮಯನಂ ಚೈವ ವೇದಾಂಗಾನಿ ಷಡೇವ ತು' ॥ ಹಾಗೆಯೇ

'ಛಂದಃ ಪಾದೌ ತು ವೇದಸ್ಯ ಹಸ್ತೌ ಕಲ್ಪೋಽಥ ಕಥ್ಯತೇ
ಜ್ಯೋತಿಷಾಮಯನಂ ನೇತ್ರಂ ನಿರುಕ್ತಂ ಶ್ರೋತ್ರಮುಚ್ಯತೇ ॥
ಶಿಕ್ಷಾ ಘ್ರಾಣಂ ತು ವೇದಸ್ಯ ಮುಖಂ ವ್ಯಾಕರಣಂ ಸ್ಮೃತಮ್ ।
ತಸ್ಮಾತ್ಸಾಂಗಮಧೀತ್ಯೈವ ಬ್ರಹ್ಮಲೋಕೇ ಮಹೀಯತೇ' ॥

ಎಂಬ ವಾಕ್ಯಗಳು ಪ್ರಸಿದ್ಧವಾಗಿರುತ್ತವೆ. ಛಂದಶ್ಶಾಸ್ತ್ರವನ್ನು ವೇದದ ಪಾದವೆಂದು ಪರಿಗಣಿಸಲಾಗಿದೆ. ಈ ಛಂದಶ್ಶಾಸ್ತ್ರದ ಆದ್ಯಪ್ರವರ್ತಕನೆಂದರೆ ಪಿಂಗಲಾಚಾರ್ಯ. ಇವನು ವೇದವೆಂಬ ಸಮುದ್ರದಿಂದ, ದೇವಾಸುರರು ಕ್ಷೀರಸಾಗರದಿಂದ ಅಮೃತವನ್ನು ಪಡೆದಂತೆ, ಈ ಛಂದಶ್ಶಾಸ್ತ್ರವನ್ನು ಪಡೆದನು.

'ಕ್ಷೀರಾಬ್ಧೇರಮೃತಂ ಯದ್ವದುದ್ಧೃತಂ ದೇವದಾನವೈಃ ।
ಛಂದೋಬ್ಧೇಃ ಪಿಂಗಲಾಚಾರ್ಯೈಶ್ಛಂದೋಽಮೃತಂ ತಥೋದ್ಧೃತಮ್ ॥

ಋಗ್ವೇದದಲ್ಲಿ ಗಾಯತ್ರೀ, ಅನುಷ್ಟುಪ್, ಮೊದಲಾದ ಛಂದಸ್ಸುಗಳನ್ನು ಆಶ್ರಯಿಸಿ ಮಂತ್ರಗಳು (ಸಂಹಿತೆಗಳು) ರಚಿತವಾಗಿರುವುದರಿಂದ ವೇದಕ್ಕೆ 'ಛಂದಸ್' ಎಂಬ ಹೆಸರೂ ಸಹ ಇರುತ್ತದೆ.

ಪಿಂಗಲಾಚರ್ಯನಿಗೆ ಪಿಂಗಲಮುನಿ, ಪಿಂಗಲನಾಗ ಇತ್ಯಾದಿ ಹೆಸರುಗಳು ಕಂಡುಬರುತ್ತವೆ. ಈ ಆಚಾರ್ಯನು ಸೂತ್ರರೂಪವಾಗಿ ವೈದಿಕ ಮತ್ತು ಲೌಕಿಕಛಂದಸ್ಸುಗಳ ಬಗ್ಗೆ ವಿರಚಿಸಿರುವನು. ಇದು ಬಹಳ ದುರ್ಬೋಧವಾದುದರಿಂದ ಕೇದಾರಭಟ್ಟನೆಂಬ ಪ್ರಕಾಂಡಪಂಡಿತನು ಸುಲಭಗ್ರಾಹ್ಯವಾಗುವಂತೆ ಈ ವೃತ್ತರತ್ನಾಕರ ಗ್ರಂಥವನ್ನು ಪಿಂಗಲನ ಛಂದಸ್ಸೂತ್ರವನ್ನೇ ಆಶ್ರಯಿಸಿ ರಚಿಸಿರುವನು. ಈ ಗ್ರಂಥಕ್ಕೆ ಅನೇಕ ವಿದ್ವಾಂಸರು ಅನೇಕ ಭಾಷೆಗಳಲ್ಲಿ ಟೀಕೆಗಳನ್ನು ಬರೆದಿರುವರು. ಕೇದಾರಭಟ್ಟನ ಕಾಲ ದೇಶಾದಿಗಳ ಬಗ್ಗೆ ಅಷ್ಟಾಗಿ ತಿಳಿಯದು. ಗ್ರಂಥಾರಂಭದಲ್ಲಿ ತಾನೇ ಸ್ವಲ್ಪ ಹೇಳಿಕೊಂಡಿರುತ್ತಾನೆ. ಅಷ್ಟನ್ನೇ ನಾವು ಗ್ರಹಿಸಿದರೆ ಸಾಕು ಎನಿಸುತ್ತದೆ.

|| ಶ್ರೀ ಗಣೇಶಾಯ ನಮಃ ||

|| ವೃತ್ತರತ್ನಾಕರಃ ||

## || ಪ್ರಥಮೋಽಧ್ಯಾಯಃ ||

ತಾನು ಬರೆಯಲಾರಂಭಿಸಿರುವ 'ವೃತ್ತರತ್ನಾಕರ' ಎಂಬ ಛಂದಶ್ಶಾಸ್ತ್ರ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಯನ್ನು ಹೊಂದಲೆಂಬ ಉದ್ದೇಶದಿಂದ, ಕೇದಾರಭಟ್ಟನು ಮೊದಲು ತನ್ನ ಇಷ್ಟ ದೇವತೆಯಾದ ಶಂಕರನ ನಮಸ್ಕಾರಪುರಃಸರವಾದ ಮಂಗಳವನ್ನು ಮಾಡಿ, ಅಧಿಕಾರಿ, ವಿಷಯ, ಸಂಬಂಧ ಮತ್ತು ಪ್ರಯೋಜನಗಳೆಂಬ ಅನುಬಂಧಚತುಷ್ಟಯವನ್ನು ಸೂಚಿಸಬಯಸಿದವನಾಗಿ, ತನ್ನ ತಂದೆಯ ವಿದ್ವತ್ಪ್ರಶಂಸಾಪೂರ್ವಕ ಗ್ರಂಥವನ್ನು ಹೀಗೆ ಆರಂಭಿಸುತ್ತಾನೆ.

**ಸುಖಸಂತಾನಸಿದ್ಧ್ಯರ್ಥಂ ನತ್ವಾ ಬ್ರಹ್ಮಾಚ್ಯುತಾರ್ಚಿತಮ್ |**
**ಗೌರೀವಿನಾಯಕೋಪೇತಂ ಶಂಕರಂ ಲೋಕಶಂಕರಮ್ || ೧ ||**

**ವೇದಾಂತಶೈವಶಾಸ್ತ್ರಜ್ಞಃ ಪವ್ಯೇಕೋಽಭೂದ್ದ್ವಿಜೋತ್ತಮಃ |**
**ತಸ್ಯ ಪುತ್ರೋಽಸ್ತಿ ಕೇದಾರಃ ಶಿವಪಾದಾರ್ಚನೇ ರತಃ || ೨ ||**

**ತೇನೇದಂ ಕ್ರಿಯತೇ ಛಂದೋ ಲಕ್ಷ್ಯಲಕ್ಷಣಸಂಯುತಮ್ ||**
**ವೃತ್ತರತ್ನಾಕರಂ ನಾಮ ಬಾಲಾನಾಂ ಸುಖಬುದ್ಧಯೇ || ೩ ||**

ಸುಖ-ಶಾಂತಿಗಳ ಪರಂಪರೆಯ ಸಿದ್ಧಿಗಾಗಿ, ಬ್ರಹ್ಮ ಮತ್ತು ವಿಷ್ಣುಗಳಿಂದ ಪೂಜಿಸಲ್ಪಟ್ಟವನೂ, ಗೌರೀ ಮತ್ತು ವಿನಾಯಕರಿಂದ ಕೂಡಿಕೊಂಡಿರುವವನೂ, ಲೋಕಗಳಿಗೆ ಮಂಗಳವನ್ನುಂಟು ಮಾಡುವವನೂ ಆದ ಶಂಕರನನ್ನು ನಮಸ್ಕರಿಸಿ, ೧. ವೇದಾಂತ ಅಂದರೆ ಉತ್ತರಮೀಮಾಂಸಾ ಶಾಸ್ತ್ರ ಮತ್ತು ಶೈವಶಾಸ್ತ್ರಗಳಲ್ಲಿ ಪಂಡಿತನಾದ ಪವ್ಯೇಕನೆಂಬ ಯಾವ ದ್ವಿಜಶ್ರೇಷ್ಠನಿದ್ದನೋ, ಅವನ ಪುತ್ರನೂ, ಶಿವ-ಶಿವೆಯರ ಪಾದಗಳ ಪೂಜೆಯಲ್ಲಿ ನಿತ್ಯ ಆಸಕ್ತನೂ ಆದ ಕೇದಾರ ನೆಂಬುವನು ಇರುವನಷ್ಟೆ. ೨. ಈ ಕೇದಾರನೆಂಬುವನು, ಲಕ್ಷಣ-ಲಕ್ಷ್ಯಗಳಿಂದ ಕೂಡಿರುವ ವೃತ್ತರತ್ನಾಕರವೆಂಬ ಛಂದಶ್ಶಾಸ್ತ್ರವನ್ನು ಛಂದಶ್ಶಾಸ್ತ್ರದ ಅಭ್ಯಾಸಿಗಳಾದ ಬಾಲಕರಿಗೆ ಸುಲಭವಾಗಿ ಬುದ್ಧಿಗೋಚರ ವಾಗಲೆಂಬ ದೃಷ್ಟಿಯಿಂದ ರಚಿಸುತ್ತಿರುವನು.

**ವಿವರಣೆ**: ಈ ಮೂರೂ ಶ್ಲೋಕಗಳಿಗೆ ಏಕಾನ್ವಯವಿರುತ್ತದೆ. ಮೊದಲನೆಯ ಪದ್ಯದಲ್ಲಿ ಕೇದಾರನು ಶಂಕರನನ್ನು ನಮಿಸಿರುತ್ತಾನೆ. ಎರಡನೆಯ ಪದ್ಯದಲ್ಲಿ ತನ್ನ ತಂದೆಯ ಬಗ್ಗೆ ಹೇಳಿಕೊಂಡಿರುತ್ತಾನೆ. ಇವನ ತಂದೆ ಪವ್ಯೇಕನೆಂಬ ಪಂಡಿತನು ಉತ್ತರಮೀಮಾಂಸಾಶಾಸ್ತ್ರಗಳಲ್ಲಿ ಹಾಗೂ ಶೈವಶಾಸ್ತ್ರಗಳಲ್ಲಿ ಅತ್ಯಂತ ಬಲ್ಲಿದನಾಗಿದ್ದನೆಂದೂ, ಈತನು ದ್ವಿಜೋತ್ತಮ ನಾಗಿದ್ದನೆಂದೂ ಇದರಿಂದ ತಿಳಿದು ಬರುತ್ತದೆ. ಮೂರನೆಯ ಪದ್ಯದಲ್ಲಿ ಅಧಿಕಾರಿ - ಛಂದಶ್ಶಾಸ್ತ್ರವನ್ನು ಅಧ್ಯಯನ ಮಾಡಲಾರಂಭಿಸಿರುವ ಬಾಲಕ, ವಿಷಯ - ಛಂದಶ್ಶಾಸ್ತ್ರ, ಸಂಬಂಧ - ಪ್ರತಿಪಾದ್ಯ - ಪ್ರತಿಪಾದಕಭಾವಸಂಬಂಧ, ಪ್ರಯೋಜನ - ಛಂದಶ್ಶಾಸ್ತ್ರದ

ಪರಿಜ್ಞಾನ - ಇವುಗಳನ್ನು ತಿಳಿಸುತ್ತಾ, ಈ ವೃತ್ತರತ್ನಾಕರ ಗ್ರಂಥವನ್ನು ತಾನು ರಚಿಸುತ್ತಿರುವುದಾಗಿ ಪ್ರತಿಜ್ಞೆ ಅಥವಾ ಸಂಕಲ್ಪ ಮಾಡಿರುತ್ತಾನೆ ಕೇದಾರಭಟ್ಟನು.

**ಪಿಂಗಲಾದಿಭಿರಾಚಾರ್ಯೈರ್ಯದುಕ್ತಂ ಲೌಕಿಕಂ ದ್ವಿಧಾ |**
**ಮಾತ್ರಾವರ್ಣವಿಭೇದೇನ ಛಂದಸ್ತದಿಹ ಕಥ್ಯತೇ || ೪ ||**

ಪಿಂಗಲಾದಿ ಪ್ರಾಚೀನ ಆಚಾರ್ಯರು ಲೌಕಿಕ ಛಂದಸ್ಸನ್ನು ಮಾತ್ರಾಛಂದಸ್ಸು ಮತ್ತು ವರ್ಣಛಂದಸ್ಸು ಎಂದು ಎರಡು ವಿಧವಾಗಿ ವಿವರಿಸಿರುವರು. ಅವರು ವಿವರಿಸಿರುವ ಈ ಎರಡು ವಿಧದ ಛಂದಸ್ಸನ್ನೇ ಈ ಗ್ರಂಥದಲ್ಲಿ ಹೇಳಲಾಗುತ್ತಿದೆ. ಅಂದರೆ ಈ ಗ್ರಂಥದಲ್ಲಿ ವೈದಿಕಛಂದಸ್ಸನ್ನು ವಿವರಿಸದೆ, ಲೌಕಿಕಛಂದಸ್ಸಿನ ಮಾತ್ರಾಛಂದಸ್ಸು, ವರ್ಣಛಂದಸ್ಸುಗಳನ್ನು ವಿವರಿಸಲಾಗಿದೆ.

**ಷಡಧ್ಯಾಯನಿಬದ್ಧಸ್ಯ ಛಂದಸೋಽಸ್ಯ ಪರಿಸ್ಫುಟಂ |**
**ಪ್ರಮಾಣಮಪಿ ವಿಜ್ಞೇಯಂ ಷಟ್‌ತ್ರಿಂಶದಧಿಕಂ ಶತಮ್ || ೫ ||**

ಈ ಗ್ರಂಥದ ಪ್ರಮಾಣವೆಂದರೆ ಆರು ಅಧ್ಯಾಯಗಳು ಎಂದು ತಿಳಿಯುವುದು. ಮತ್ತು ಇದರಲ್ಲಿ ಒಂದು ನೂರ ಮೂವತ್ತಾರಕ್ಕೂ ಹೆಚ್ಚು (ಕಾರಿಕೆ) ಎಂದು ತಿಳಿಯಬೇಕು.

**ಟಿಪ್ಪಣಿ** : 1 ಛಂದಃ - ಅವದ್ಯಂ ಛಾದಯತಿ ಇತಿ ಛಂದಃ 2 ಲಕ್ಷ್ಯಂ = ಲಕ್ಷ್ಯತೇ ಇತಿ ಲಕ್ಷ್ಯಂ = ಉದಾಹರಣಮ್ 3 ಲಕ್ಷಣಂ - ಲಕ್ಷ್ಯತೇ ಅನೇನ ಇತಿ ಲಕ್ಷಣಂ, ಸೂತ್ರಮ್ 4 ವೃತ್ತ ರತ್ನಾಕರಂ = ವೃತ್ತಾನಿ ಏವ ರತ್ನಾನಿ ವೃತ್ತರತ್ನಾನಿ | ತೇಷಾಂ ಆಕರಂ; ವೃತ್ತರತ್ನಾಕರಃ- ಎಂದು, ಪುಲ್ಲಿಂಗ ರೂಪವಾದರೆ 'ತೇಷಾಂ ಆಕರಃ'

**ಮ್ಯರಸ್ತಜಭ್ನಗೈರ್ಲಾಂತೈರೇಭಿರ್ದಶಭಿರಕ್ಷರೈಃ |**
**ಸಮಸ್ತಂ ವಾಙ್ಮಯಂ ವ್ಯಾಪ್ತಂ ತ್ರೈಲೋಕ್ಯಮಿವ ವಿಷ್ಣುನಾ || ೬ ||**

ಮ್, ಯ, ರ, ಸ್, ತ, ಜ, ಭ್, ನ, ಗ, ಲ, (ಮಗಣ, ಯಗಣ, ರಗಣ, ಸಗಣ, ತಗಣ, ಜಗಣ, ಭಗಣ, ನಗಣ, ಗುರು, ಲಘು) ಎಂಬ ಈ ಹತ್ತು ಅಕ್ಷರಗಳಿಂದ, ಮೂರೂ ಲೋಕಗಳೂ ಹೇಗೆ ವಿಷ್ಣುವಿನಿಂದ ವ್ಯಾಪ್ತವಾಗಿವೆಯೋ ಹಾಗೆಯೇ ಸಮಸ್ತವಾಙ್ಮಯವೂ ವ್ಯಾಪ್ತವಾಗಿದೆ. ಈ ಎಂಟು ಗಣಗಳ ಲಕ್ಷಣವೆಂದರೆ -

**ಸರ್ವಗುರ್ಮೋ ಮುಖಾಂತರ್ಲೌ ಯರಾವಂತಗಲೌ ಸತೌ |**
**ಗ್ಮಧ್ಯಾದ್ಯೌ ಜ್ಭೌ ತ್ರಿಲೋ ನೋಽಷ್ಟೌ ಭವಂತ್ಯತ್ರ ಗಣಾಸ್ತ್ರಿಕಾಃ || ೭ ||**

1. ಸರ್ವಗುಃ ಮಃ - ಮೂರು ಗುರುವುಳ್ಳದ್ದು 'ಮಗಣ'
2. ಮುಖಾಂತರ್ಲೌ ಯರೌ = ಮುಖ - ಆದಿ, ಅಂತ- ಮಧ್ಯ ; ಆದಿಯಲ್ಲಿ ಲಘುವಿದ್ದರೆ 'ಯಗಣ'
3. ಮಧ್ಯದಲ್ಲಿ ಲಘುವಿದ್ದರೆ 'ರಗಣ'

4. ಅಂತಗಲೌ ಸತೌ - ಅಂತ್ಯದಲ್ಲಿ ಗುರು ವಿದ್ದರೆ 'ಸಗಣ'
5. ಅಂತ್ಯದಲ್ಲಿ ಲಘುವಿದ್ದರೆ 'ತಗಣ'
6. ಗ್ಮಧ್ಯಾದ್ಯೌ ಜ್ಬೌ= ಗುರುವು ಮಧ್ಯದಲ್ಲಿದ್ದರೆ 'ಜಗಣ'
7. ಗುರುವು ಆದಿಯಲ್ಲಿದ್ದರೆ 'ಭಗಣ'
8. ತ್ರಿಲಃ ನಃ = ಮೂರು ಲಘುವಿದ್ದರೆ 'ನಗಣ'. ಹೀಗೆ ಮೂರು ಮೂರು ಅಕ್ಷರಗಳನ್ನುಳ್ಳ ವರ್ಣಗಣಗಳು ಈ ಛಂದಶ್ಶಾಸ್ತ್ರದಲ್ಲಿ ಎಂಟು ಇರುತ್ತವೆ. ಅಂದರೆ

1. **ಮಗಣ** — — — 2. **ಯಗಣ** u — — 3. **ರಗಣ** — u — 4. **ಸಗಣ** u u —
5. **ತಗಣ** _ _ u 6. **ಜಗಣ** u — u 7. **ಭಗಣ** _ u u 8. **ನಗಣ** uuu

ಈ ಗಣ ನಿಯಮವನ್ನು ಸುಲಭವಾಗಿ ತಿಳಿಯುವ ಉಪಾಯವೆಂದರೆ

u — — — u — u u u —
ಯ ಮಾ ತಾ ರಾ ಜ ಭಾ ನ ಸ ಲ ಗಮ್ (ಈ ವಾಕ್ಯಕ್ಕೆ ಯಾವ ಅರ್ಥವೂ ಇಲ್ಲ)

1. ಯಗಣ - ಯಮಾತಾ u — — 2. ಮಗಣ - ಮಾತಾರಾ — — —
3. ತಗಣ - ತಾರಾಜ — — u 4. ರಗಣ - ರಾಜಭಾ — u — 5. ಜಗಣ - ಜಭಾನ u — u
6. ಭಗಣ - ಭಾನಸ — u u 7. ನಗಣ - ನಸಲ u u u 8. ಸಗಣ - ಸಲಗಂ u u —
ಲ = ಲಘು ಗಂ = ಗುರು.

**ಜ್ಞೇಯಾಃ ಸರ್ವಾದಿಮಧ್ಯಾಂತಗುರವೋऽತ್ರ ಚತುಷ್ಕಲಾಃ |**
**ಗಣಾಶ್ಚತುರ್ಲಘೂಪೇತಾಃ ಪಥ್ಯಾರ್ಯಾದಿಷು ಸಂಸ್ಥಿತಾಃ || ೮ ||**

ಪಥ್ಯಾರ್ಯಾ ಮೊದಲಾದ ಮಾತ್ರಾಛಂದಸ್ಸುಗಳಲ್ಲಿನ ಗಣಗಳು ನಾಲ್ಕು-ನಾಲ್ಕು ಮಾತ್ರೆಗಳನ್ನುಳ್ಳವಾಗಿರುತ್ತವೆ. ಇವುಗಳ ಕ್ರಮವೆಂದರೆ

1. ಸರ್ವಗುರುಃ — — 2. ಆದಿ ಗುರುಃ — u u 3. ಮಧ್ಯಗುರುಃ u — u 4. ಅಂತಗುರುಃ u u — 5. ನಾಲ್ಕೂ ಲಘು u u u u . ಹೀಗೆ ನಾಲ್ಕು—ನಾಲ್ಕು ಮಾತ್ರೆಯ ಗಣಗಳು ಐದು ರೀತಿ ಇರುತ್ತವೆ.

**ಟಿಪ್ಪಣಿ** : ಮಾತ್ರಾಗಣ ಮತ್ತು ವರ್ಣಗಣ ಎಂದು ಗಣವು ಎರಡು ವಿಧ., ಮಾತ್ರಾಗಣಗಳನ್ನು ಆರ್ಯಾ ಮೊದಲಾದ ವೃತ್ತಗಳಲ್ಲಿಯೂ, ವರ್ಣಗಣಗಳನ್ನು ಉಕ್ತಾ, ಅತ್ಯುಕ್ತಾ ಮೊದಲಾದವುಗಳಲ್ಲಿಯೂ ಗಮನಿಸಬಹುದಾಗಿದೆ. ಎರಡನೆಯ ಅಧ್ಯಾಯದಲ್ಲಿ ಆರ್ಯಾ ಮೊದಲಾದ ಮಾತ್ರಾಗಣಸಂಬಂಧಿ ಛಂದಸ್ಸುಗಳನ್ನೂ, ಮೂರನೆಯ ಅಧ್ಯಾಯದಲ್ಲಿ ವರ್ಣಗಣಗಳ ಸಂಬಂಧಿ ಛಂದಸ್ಸುಗಳನ್ನೂ ವಿವರಿಸಲಾಗಿದೆ.

**ಗುರ್ವಕ್ಷರವಾಗುವ ರೀತಿ ಹೇಗೆಂದರೆ**

**ಸಾನುಸ್ವಾರೋ ವಿಸರ್ಗಾಂತೋ ದೀರ್ಘೋ ಯುಕ್ತಪರಶ್ಚ ಯಃ |**
**ವಾ ಪಾದಾಂತೇ ತ್ವಸೌ ಗ್ವಕ್ರೋ ಜ್ಞೇಯೋऽನ್ಯೋ ಮಾತ್ರಿಕೋ ಲೃಜುಃ || ೯ ||**

1. ಅನುಸ್ವಾರದಿಂದ ಕೂಡಿದ ವರ್ಣ 2. ವಿಸರ್ಗವನ್ನು ಅಂತ್ಯದಲ್ಲಿ ಉಳ್ಳ ವರ್ಣ

3. ದೀರ್ಘಸ್ವರಯುಕ್ತ ವರ್ಣ 4. ಮುಂದೆ ಸಂಯುಕ್ತಾಕ್ಷರವನ್ನು ಹೊಂದಿದ ಹಿಂದಿನ ವರ್ಣ 5. ಪಾದದ ಕಡೆಯಲ್ಲಿ ಲಘುವಿದ್ದರೆ ಇದಕ್ಕೆ ವಿಕಲ್ಪವಾಗಿ ಬರುವುದು— ಗುರು (ವರ್ಣ) ವೆಂದು ತಿಳಿಯಬೇಕು. ಗುರುವನ್ನು ವಕ್ರರೇಖೆಯಿಂದಲೂ, ಲಘುವನ್ನುಸರಳರೇಖೆಯಿಂದಲೂ ಗುರುತಿಸಲಾಗುತ್ತದೆ.

**ಟಿಪ್ಪಣಿ** : ಲಘುವು ಏಕಮಾತ್ರಾಕಾಲಿಕವಾದುದು, ಗುರುವು ದ್ವಿಮಾತ್ರಾಕಾಲಿಕವಾದುದು (ಹ್ರಸ್ವಂ—ಲಘು, ದೀರ್ಘಂ — ಗುರು) ಗುರುವನ್ನು 'ก' ವಕ್ರರೇಖೆಯಿಂದಲೂ, ಲಘುವನ್ನು '—' ಎಂಬ ಋಜು (ಸರಳ) ರೇಖೆಯಿಂದಲೂ ಗುರುತಿಸಲಾಗುತ್ತದೆ. ಕೆಲವರು ಗುರುವನ್ನು S ಎಂಬ ಚಿಹ್ನೆಯಿಂದಲೂ ಲಘುವನ್ನು I ಎಂಬ ಚಿಹ್ನೆಯಿಂದಲೂ ಗುರುತಿಸುವುದೂ ಉಂಟು. ಅಥವಾ ಅನುಕೂಲದ ದೃಷ್ಟಿಯಿಂದ ಗುರುವನ್ನು '—'ಎಂಬ ಚಿಹ್ನೆಯಿಂದಲೂ ಲಘುವನ್ನು U ಎಂಬ ಚಿಹ್ನೆಯಿಂದಲೂ ಗುರುತಿಸುವುದು ರೂಢಿ. ಪ್ರಕೃತ ಗುರು '—' ಲಘು 'U' ಎಂಬ ಚಿಹ್ನೆಗಳಿಂದ ಇವುಗಳನ್ನು ಗುರುತಿಸುವುದನ್ನು ಅನುಸರಿಸಲಾಗಿದೆ. ಈಗ 'ಕ್ರಮ' ಎಂಬ ಸಂಜ್ಞೆಯನ್ನು ಹೇಳಲಾಗುತ್ತದೆ.

> ಪಾದಾದಾವಿಹ ವರ್ಣಸ್ಯ ಸಂಯೋಗಃ ಕ್ರಮಸಂಜ್ಞಿತಃ ।
> ಪರಸ್ಥಿತೇನ ತೇನ ಸ್ಯಾಲ್ಲಘುತಾಪಿ ಕ್ವಚಿದ್ಗುರೋಃ ॥ ೧೦ ॥

ಪದ್ಯದ ನಾಲ್ಕನೆಯ ಒಂದಂಶವನ್ನು 'ಪಾದ' ವೆಂದು ಕರೆಯಲಾಗುತ್ತದೆ. ಈ ಶಾಸ್ತ್ರದಲ್ಲಿ ಪಾದದ ಆದಿಯಲ್ಲಿ ಸಂಯೋಗ ವರ್ಣ (ಸಂಯುಕ್ತಾಕ್ಷರ) ವಿದ್ದಲ್ಲಿ ,ಅದಕ್ಕೆ 'ಕ್ರಮ' ಎಂಬ ಸಂಜ್ಞೆ ಬರುತ್ತದೆ. (ಇದರ ಪ್ರಯೋಜನವೆಂದರೆ) 'ಕ್ರಮ' ಸಂಜ್ಞೆ ಯುಳ್ಳ ಈ ಸಂಯುಕ್ತಾಕ್ಷರವನ್ನು ಮುಂದೆ ಉಳ್ಳ ಹಿಂದಿನ ಅಕ್ಷರವು, ಒಂದು ವೇಳೆ ಗುರುವೇ ಆಗಿದ್ದರೂ, ಕೆಲವೊಮ್ಮೆ (ಅಂದರೆ ಛಂದಸ್ಸಿಗೆ ಭಂಗ ಬರುವುದಾದರೆ) ಅದನ್ನು ಲಘುವೆಂದೇ ಭಾವಿಸಬೇಕು. **ಇದಮಸ್ಯೋದಾಹರಣಮ್**— ಈ ಕೆಳಗಿನ ಪದ್ಯವೇ ಇದಕ್ಕೆ ಉದಾಹರಣೆ —

> ತರುಣಂ ಸರ್ಷಪಶಾಕಂ ನವೌದನಂ ಪಿಚ್ಛಿಲಾನಿ ಚ ದಧೀನಿ ।
> ಅಲ್ಪವ್ಯಯೇನ ಸುಂದರಿ ! ಗ್ರಾಮ್ಯಜನೋ ಮಿಷ್ಟಮಶ್ನಾತಿ ॥ ೧೧ ॥

'ಎಲೌ ಸುಂದರಿ ! ಎಳೆಯ (ಕೋಮಲವಾದ) ಸಾಸಿವೆಯ ಸೊಪ್ಪು, ನೂತನ ಅನ್ನ ಅಂದರೆ ಬಿಸಿಬಿಸಿಯಾದ ಅನ್ನ, ಸರಸ (ಪಿಚ್ಛಿಲ) ವಾದ ಮೊಸರು - ಹೀಗೆ ಗ್ರಾಮ್ಯಜನರು ಅಲ್ಪವ್ಯಯದಿಂದ ಮೃಷ್ಟಾನ್ನವನ್ನೇ ಊಟಮಾಡುತ್ತಾರೆ'.

ಈ ಪದ್ಯದ ನಾಲ್ಕನೆಯ ಪಾದದ ಆದಿಯ ವರ್ಣ 'ಗ್ರಾ' (ಗ್ರಾಮ್ಯಜನಃ) ಎಂಬುದು 'ಕ್ರಮ' ಸಂಜ್ಞೆಯುಳ್ಳದ್ದಾಗಿದೆ. ಮೂರನೆಯ ಪಾದದಲ್ಲಿ 'ಅಲ್ಪ ವ್ಯಯೇನ - ಸುಂದರಿ' (— —, U — U, — U U) ಹೀಗೆ ನಾಲ್ಕು ನಾಲ್ಕು ಮಾತ್ರೆಯ ಮೂರುಗಣಗಳಿರುತ್ತವೆ. (ಇದು ಆರ್ಯಾ ಛಂದಸ್ಸಾಗಿರುತ್ತದೆ, ಅಂದರೆ ಮಾತ್ರಾ ಛಂದಸ್ಸು) ಕ್ರಮ ಸಂಜ್ಞೆಯುಳ್ಳ 'ಗ್ರಾ' ಅಕ್ಷರದ ಹಿಂದೆ ಇರುವ 'ರಿ' ವರ್ಣವು ಗುರುವಾಗಬೇಕು. ಆದರೆ ಅಲ್ಲಿ 'ಸುಂದರಿ' ಪದವು ಐದು ಮಾತ್ರೆಯ ಗಣವಾಗಿ ಛಂದಸ್ಸಿಗೆ ಭಂಗ ಬರುವುದರಿಂದ 'ರಿ' ವರ್ಣವು ಲಘುವಾಗಿಯೇ

ಉಳಿಯುತ್ತದೆ. ಅಂದರೆ 'ಗ್ರಾ' ಅಕ್ಷರವನ್ನು ಶಿಥಿಲವನ್ನಾಗಿ ಉಚ್ಚರಿಸಿಕೊಳ್ಳಬೇಕು - ಎಂದು ತಾತ್ಪರ್ಯ.

ಕೆಲವು ಅತ್ಯವಶ್ಯ ಸಂಖ್ಯಾ ಸಂಜ್ಞೆಗಳನ್ನು ಈಗ ತಿಳಿಸಲಾಗುತ್ತದೆ.

**ಅಬ್ಧಿಭೂತರಸಾದೀನಾಂ ಜ್ಞೇಯಾಃ ಸಂಖ್ಯಾಸ್ತು ಲೋಕತಃ |**
**ಜ್ಞೇಯಃ ಪಾದಶ್ಚತುರ್ಥೋಽಂಶೋ ಯತಿರ್ವಿಚ್ಛೇದಸಂಜ್ಞಕಃ || ೧೨ ||**

ಅಬ್ಧಯಃ = ನಾಲ್ಕು, ಭೂತಾನಿ = ಪಂಚ, ರಸಾಃ = ಷಟ್, ಆದಿ ಪದದಿಂದ ಸ್ವರಾಃ = ಸಪ್ತ, ವಸವಃ = ಅಷ್ಟೌ, ಗ್ರಹಾಃ = ನವ, ದಿಶಃ = ದಶ, ರುದ್ರಾಃ = ಏಕಾದಶ, ಇತ್ಯಾದಿ, ಹೀಗೆ ಲೋಕ ವ್ಯವಹಾರದಿಂದಾಗಿ ಈ ಸಂಖ್ಯೆಗಳನ್ನು ತಿಳಿಯತಕ್ಕದ್ದು. (ಈ ಸಂಖ್ಯೆಗಳನ್ನು ವೃತ್ತಗಳ ಯತಿಯನ್ನು ನಿರ್ದೇಶ ಮಾಡಲು ಬಳಸಲಾಗುತ್ತದೆ.) ಪದ್ಯದಲ್ಲಿ ನಾಲ್ಕು ಪಾದಗಳಿರುತ್ತವೆಯಾದ್ದರಿಂದ, ಪಾದವೆಂದರೆ ಪದ್ಯದ ನಾಲ್ಕನೆಯ ಒಂದು ಭಾಗವೆಂದು ತಿಳಿಯಬೇಕು. ಯತಿ - ಎಂದರೆ ವಿರಾಮ, ನಿಯತವಾದ ಅಕ್ಷರಗಳಲ್ಲಿ ನಿಲುಗಡೆ.

ಟಿಪ್ಪಣಿ - ಸೂರ್ಯರು = ಹನ್ನೆರಡು, ಅಶ್ವಗಳು = ಸಪ್ತ, ಅಗ = ಪರ್ವತ = ಸಪ್ತ (ಕುಲಪರ್ವತಗಳು), ವೇದಗಳು = ನಾಲ್ಕು, ರಂಧ್ರಗಳು = ನವ, ಅಕ್ಷ = ಪಂಚ (ಪಂಚ ಇಂದ್ರಿಯಗಳು) ಮುನಿಗಳು = ಸಪ್ತ(ಸಪ್ತರ್ಷಿಗಳು) ಇತ್ಯಾದಿ ಸಂಖ್ಯಾಸಂಜ್ಞೆಗಳನ್ನೂ ಭಾವಿಸಬೇಕು. ವೃತ್ತಗಳ ವಿವರಣೆಯಲ್ಲಿ ಇವುಗಳನ್ನು ಸ್ಪಷ್ಟವಾಗಿ ಗಮನಿಸಬಹುದಾಗಿದೆ.

**ಯುಕ್ ಸಮಂ ವಿಷಮಂ ಚಾಯುಕ್ ಸ್ಥಾನಂ ಸದ್ಭಿರ್ನಿಗದ್ಯತೇ |**
**ಸಮಮರ್ಧಸಮಂ ವೃತ್ತಂ ವಿಷಮಂ ಚ ತ್ರಿಧಾ ಮತಮ್ || ೧೩ ||**

ಸಮಸ್ಥಾನವನ್ನು (ಎರಡು , ನಾಲ್ಕು ಇತ್ಯಾದಿ) 'ಯುಕ್' ಎಂಬುದಾಗಿಯೂ, ವಿಷಮ ಸ್ಥಾನವನ್ನು (ಒಂದು, ಮೂರು, ಐದು ಇತ್ಯಾದಿ) 'ಅಯುಕ್' ಎಂಬುದಾಗಿಯೂ ಪಂಡಿತರು ಹೇಳಿರುವರು. ಹಾಗೆಯೇ ವೃತ್ತವನ್ನೂ ಸಹ ಸಮವೃತ್ತ, ಅರ್ಧಸಮವೃತ್ತ, ವಿಷಮವೃತ್ತ - ಎಂದು ಮೂರು ವಿಧವಾಗಿ ವಿವರಿಸಿರುವರು.

**ಅಂಘ್ರಯೋ ಯಸ್ಯ ಚತ್ವಾರಸ್ತುಲ್ಯಲಕ್ಷಣಲಕ್ಷಿತಾಃ |**
**ತಚ್ಛಂದಃಶಾಸ್ತ್ರತತ್ತ್ವಜ್ಞಾಃ ಸಮಂ ವೃತ್ತಂ ಪ್ರಚಕ್ಷತೇ || ೧೪ ||**

ಯಾವ ವೃತ್ತದ ನಾಲ್ಕು ಪಾದಗಳು ಸಮಾನ ಲಕ್ಷಣದಿಂದ ಕೂಡಿರುತ್ತವೋ, ಅಂತಹ ವೃತ್ತವನ್ನು ಛಂದಃಶಾಸ್ತ್ರಜ್ಞರು ಸಮವೃತ್ತವೆಂದು ಹೇಳಿರುತ್ತಾರೆ.

**ಪ್ರಥಮಾಂಘ್ರಿಸಮೋ ಯಸ್ಯ ತೃತೀಯಶ್ಚರಣೋ ಭವೇತ್ |**
**ದ್ವಿತೀಯಸ್ತುರ್ಯವದ್ವೃತ್ತಂ ತದರ್ಧಸಮಮುಚ್ಯತೇ || ೧೫ ||**

ಮೊದಲ ಪಾದ ಮತ್ತು ಮೂರನೆಯ ಪಾದಗಳು ಸಮಾನ ಲಕ್ಷಣಗಳಿಂದ ಕೂಡಿದ್ದು, ಎರಡನೆಯ ಮತ್ತು ನಾಲ್ಕನೆಯ ಪಾದಗಳು ಸಮಾನ ಲಕ್ಷಣಗಳಿಂದ ಕೂಡಿದ್ದರೆ ಅದನ್ನು ಅರ್ಧಸಮವೃತ್ತವೆಂದು

ಕರೆಯಲಾಗುತ್ತದೆ.

ಯಸ್ಯ ಪಾದಚತುಷ್ಕೇಽಪಿ ಲಕ್ಷ್ಮ ಭಿನ್ನಂ ಪರಸ್ಪರಮ್ ।
ತದಾಹುರ್ವಿಷಮಂ ವೃತ್ತಂ ಛಂದಃಶಾಸ್ತ್ರವಿಶಾರದಾಃ ॥ ೧೬ ॥

ಯಾವ ವೃತ್ತದ ನಾಲ್ಕೂ ಪಾದಗಳಲ್ಲಿಯೂ ಲಕ್ಷಣವು ಬೇರೆ ಬೇರೆಯೇ ಆಗಿರುತ್ತದೋ ಅದನ್ನು ವಿಷಮವೃತ್ತವೆಂದು ಛಂದಃಶಾಸ್ತ್ರಪಂಡಿತರು ಹೇಳಿರುವರು.

ಆರಭ್ಯೈಕಾಕ್ಷರಾತ್ ಪಾದಾದೇಕೈಕಾಕ್ಷರವರ್ಧಿತೈಃ ।
ಪೃಥಕ್ ಛಂದೋ ಭವೇತ್ಪಾದ್ಯೈರ್ಯಾವತ್ ಷಡ್ವಿಂಶತಿಂ ಗತಮ್ ॥ ೧೭ ॥

ಒಂದು ಪಾದವನ್ನು ಒಂದು ಅಕ್ಷರದಿಂದ ಪ್ರಾರಂಭಿಸಿ, ಒಂದೊಂದೇ ಅಕ್ಷರವನ್ನು ವರ್ಧಿಸುತ್ತಾ, ಒಂದು ಪಾದದಲ್ಲಿ ಇಪ್ಪತ್ತಾರು ಅಕ್ಷರಗಳಾಗುವಂತೆ ವಿಂಗಡಿಸಲು ಪ್ರತ್ಯೇಕ ಪ್ರತ್ಯೇಕ ಛಂದಸ್ಸಾಗುತ್ತದೆ. ಅಂದರೆ, ಒಂದಕ್ಷರದ ಪಾದದಿಂದ ಪ್ರಾರಂಭಿಸಿ ಇಪ್ಪತ್ತಾರು ಅಕ್ಷರದ ಪಾದವಿರುವವರೆಗೆ ಛಂದಸ್ಸಿನ ಭೇದವುಂಟು.

ತದೂರ್ಧ್ವಂ ಚಂಡವೃಷ್ಟ್ಯಾದಿ ದಂಡಕಾಃ ಪರಿಕೀರ್ತಿತಾಃ ।
ಶೇಷಂ ಗಾಥಾಸ್ತ್ರಿಭಿಃ ಷಡ್ಭಿಶ್ಚರಣೈಶ್ಚೋಪಲಕ್ಷಿತಾಃ ॥ ೧೮ ॥

ಇಪ್ಪತ್ತಾರು ಅಕ್ಷರಗಳನ್ನು ಮೀರಿದ್ದು ಚಂಡವೃಷ್ಟಿ ಮೊದಲಾದ ದಂಡಕವೆನಿಸುತ್ತದೆ. ಉಳಿದ - ಮೂರು - ಆರು - ಚರಣಗಳುಳ್ಳದ್ದು ಸಾಮಾನ್ಯಲಕ್ಷಣಗಳಿಂದ ಕೂಡಿದ್ದಾಗಿ 'ಗಾಥಾ' ಎನಿಸುತ್ತದೆ.

ಉಕ್ತಾತ್ಯುಕ್ತಾ ತಥಾ ಮಧ್ಯಾ ಪ್ರತಿಷ್ಠಾ ಸುಪ್ರತಿಷ್ಠಿತಾ ।
ಗಾಯತ್ರ್ಯುಷ್ಣಿಗನುಷ್ಟುಪ್‌ಚ ಬೃಹತೀ ಪಂಕ್ತಿರೇವ ಚ ॥ ೧೯ ॥

ತ್ರಿಷ್ಟುಪ್ ಚ ಜಗತೀ ಚೈವ ತಥಾತಿಜಗತೀ ಮತಾ ।
ಶಕ್ವರೀ ಸಾತಿಪೂರ್ವಾ ಸ್ಯಾದಷ್ಟ್ಯತ್ಯಷ್ಟೀ ತತಃ ಸ್ಮೃತೇ ॥ ೨೦ ॥

ಧೃತಿಶ್ಚಾತಿಧೃತಿಶ್ಚೈವ ಕೃತಿಃ ಪ್ರಕೃತಿರಾಕೃತಿಃ ।
ವಿಕೃತಿಃ ಸಂಕೃತಿಶ್ಚೈವ ತಥಾತಿಕೃತಿರುತ್ಕೃತಿಃ ॥ ೨೧ ॥

ಇತ್ಯುಕ್ತಾಶ್ಛಂದಸಾಂ ಸಂಜ್ಞಾಃ ಕ್ರಮಶೋ ವಚ್ಮಿ ಸಾಂಪ್ರತಂ ।
ಲಕ್ಷಣಂ ಸರ್ವವೃತ್ತಾನಾಂ ಮಾತ್ರಾವೃತ್ತಾನುಪೂರ್ವಕಮ್ ॥ ೨೨ ॥

ಇತಿ ವೃತ್ತರತ್ನಾಕರಾಖ್ಯೇ ಛಂದಸಿ ಸಂಜ್ಞಾಭಿಧಾನಂ ನಾಮ ಪ್ರಥಮೋಽಧ್ಯಾಯಃ

೧. ಉಕ್ತಾ ೨. ಅತ್ಯುಕ್ತಾ ೩. ಮಧ್ಯಾ ೪. ಪ್ರತಿಷ್ಠಾ ೫. ಸುಪ್ರತಿಷ್ಠಾ ೬. ಗಾಯತ್ರೀ ೭. ಉಷ್ಣಿಕ್ ೮. ಅನುಷ್ಟುಪ್ ೯. ಬೃಹತೀ ೧೦. ಪಂಕ್ತಿಃ ೧೧. ತ್ರಿಷ್ಟುಪ್ ೧೨. ಜಗತೀ ೧೩. ಅತಿಜಗತೀ ೧೪. ಶಕ್ವರೀ ೧೫. ಅತಿಶಕ್ವರೀ ೧೬. ಅಷ್ಟೀ ೧೭. ಅತ್ಯಷ್ಟೀ ೧೮. ಧೃತಿಃ

೧೯. ಅತಿಧೃತಿಃ ೨೦. ಕೃತಿಃ ೨೧. ಪ್ರಕೃತಿಃ ೨೨. ಆಕೃತಿಃ ೨೩. ವಿಕೃತಿಃ ೨೪. ಸಂಕೃತಿಃ ೨೫. ಅತಿಕೃತಿಃ ೨೬. ಉತ್ಕೃತಿಃ

ಎಂಬ ಇಪ್ಪತ್ತಾರು ಸಂಜ್ಞೆಗಳನ್ನುಳ್ಳ ಛಂದಸ್ಸುಗಳ ಸಂಬಂಧಿ ಎಲ್ಲ ವೃತ್ತಗಳ ಲಕ್ಷಣವನ್ನೂ ಕ್ರಮವಾಗಿ ಹೇಳುತ್ತೇನೆ. ಅದಕ್ಕೂ ಮುನ್ನ ಮಾತ್ರಾವೃತ್ತವನ್ನು ಈಗ ವಿವರಿಸುತ್ತೇನೆ.

ವೃತ್ತರತ್ನಾಕರವೆಂಬ ಛಂದೋಗ್ರಂಥದಲ್ಲಿ ಸಂಜ್ಞಾ ಪ್ರಕರಣ
ಎಂಬ ಮೊದಲ ಅಧ್ಯಾಯವು ಮುಗಿದುದು.

---

## ದ್ವಿತೀಯೋಽಧ್ಯಾಯಃ (ಮಾತ್ರಾಛಂದಸ್)

## ೧. ಆರ್ಯಾಪ್ರಕರಣಮ್

### 1. ಆರ್ಯಾವೃತ್ತದ ಲಕ್ಷಣ

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
| — — | — — | U U — | — — | — U U | U — U | U U — | — |
| ಲಕ್ಷ್ಮೈ | ತತ್ಸ | ಪ್ತಗಣಾ | ಗೋಪೇ | ತಾ ಭವ | ತಿ ನೇಹ | ವಿಷಮೇ | ಜಃ । |

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
| — — | — U U | U U — | U U — | — U U | U | — — | — |
| ಷಷ್ಠೋಽ | ಯಂ ಚ ನ | ಲಘು ವಾ | ಪ್ರಥಮೇಽ | ರ್ಧೇ ನಿಯ | ತ | ಮಾರ್ಯಾ | ಯಾಃ ॥೨೩॥ |

ಆರ್ಯಾವೃತ್ತದ ಪೂರ್ವಾರ್ಧದಲ್ಲಿ ಏಳುಗಣಗಳೂ (ನಾಲ್ಕು ನಾಲ್ಕು ಮಾತ್ರೆಯ ಏಳು ಗಣ) ಕಡೆಯಲ್ಲಿ ಒಂದು ಗುರುವೂ ಇರಬೇಕು. ವಿಷಮ ಸ್ಥಾನಗಳಾದ 1-3-5-7 ಈ ಗಣಗಳು ಜಗಣ ಅಂದರೆ ಮಧ್ಯಗುರುಕ (U—U) ಗಣವಾಗಿರಬಾರದು. ಆರನೆಯ ಗಣವು ಜಗಣ (U—U) ಅಥವಾ ನಗಣಲಘು (UUUU) ವುಳ್ಳದ್ದಾಗಿರಬೇಕು.

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
| — — | U — U | — U U | — — | U U — | U U U U | U U U U | — |
| ಷಷ್ಠೇ | ದ್ವಿತೀಯ | ಲಾತ್ಪರ | ಕೇ ನ್ಲೇ | ಮುಖಲಾ | ಚ್ಚ ಸಯತಿ | ಪದನಿಯ | ಮಃ । |

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
| U U — | — — | U U — | — — | U U U U | U | — — | — |
| ಚರಮೋಽ | ರ್ಧೇ ಪಂ | ಚಮಕೇ | ತಸ್ಮಾ | ದಿಹ ಭವ | ತಿ | ಷಷ್ಠೋ | ಲಃ ॥ ೨೪ ॥ |

ಈಗ ಯತಿಯ ನಿಯಮವನ್ನು ತಿಳಿಸಲಾಗುತ್ತದೆ. ಆರನೆಯ ಗಣವು ನಗಣ ಲಘುವುಳ್ಳದ್ದಾಗಿದ್ದರೆ, ಆಗ ಎರಡನೆಯ ಲಘುವಿನ ಬಳಿಕ ಅಂದರೆ 'ಚ್ಚ ಸ' ಎಂಬಲ್ಲಿ ಯತಿಯನ್ನು ಹೇಳಿಕೊಳ್ಳಬೇಕು. ಹಾಗೆಯೇ ಏಳನೆಯ ಗಣವೂ ನಗಣ ಲಘುವುಳ್ಳದ್ದಾಗಿದ್ದರೆ, ಆರನೆಯ ಗಣದ ಅಂತ್ಯದಲ್ಲಿ ಅಂದರೆ ಏಳನೆಯ ಗಣದ ಆದಿಯ ಲಘುವಿನ ಹಿಂದೆ ಅಂದರೆ 'ಸಯತಿ' ಎಂಬಲ್ಲಿ ಯತಿಯನ್ನು

ಹೇಳಿಕೊಳ್ಳಬೇಕು. ಆರನೆಯ ಗಣವು 'ಜಗಣ' ವಾಗಿದ್ದಲ್ಲಿ ಯತಿಯನ್ನು ಹೇಳಿರುವುದಿಲ್ಲವಾದರೂ, ಆರನೆಯ ಗಣದ ಮೊದಲ ಲಘುವಿನ ಬಳಿಕ ಯತಿ ಎಂದರೆ 'ಭವತಿ' (ನೇಹ ವಿಷಮೇ ಜಃ) ಎಂಬಲ್ಲಿ ಯತಿ ಎಂದು ತಿಳಿಯಬೇಕು.

**ಆರ್ಯಾ ಉತ್ತರಾರ್ಧದ ಲಕ್ಷಣ-** ಈ ಉತ್ತರಾರ್ಧದಲ್ಲಿ ಸಹ ಕಡೆಯಲ್ಲಿ ಗುರುವನ್ನುಳ್ಳ ಏಳುಗಣಗಳು ಇರುತ್ತವೆ. ವಿಷಮಸ್ಥಾನಗಳಲ್ಲಿ (೧,೩,೫ ಈ ಸ್ಥಾನಗಳಲ್ಲಿ) ಜಗಣ(U—U) ಇರಬಾರದು. (೨,೪,ರಲ್ಲಿ ಬರಬಹುದು) ಮತ್ತು ಆರನೆಯ ಗಣವು ಕೇವಲ ಲಘುವಾಗಿರುತ್ತದೆ. ಐದನೆಯ ಗಣವು ನಗಣಲಘುವಾಗಿದ್ದರೆ, ಮೊದಲ ಲಘುವಿನ ಹಿಂದೆ, ಅಂದರೆ 'ತಸ್ಯಾ,' ಎಂಬಲ್ಲಿ 'ಯತಿ' ಎಂದು ತಿಳಿಯಬೇಕು.

## 2. ಪಥ್ಯಾರ್ಯಾಲಕ್ಷಣ

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
| — — | U — U | — — | U U — | — — | U — U | — — | — |
| ತ್ರಿಷ್ಟಂ | ಶಕೇಷು | ಪಾದೋ | ದಲಯೋ | ರಾದ್ಯೇ | ಷು ದೃಶ್ಯ | ತೇ ಯ | ಸ್ಯಾ: । |

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
| — — | U — U | — — | — — | — — | U | — — | — |
| ಪಥ್ಯೇ | ತಿ ನಾಮ | ತಸ್ಯಾ | ಶ್ಛಂದೋ | ವಿದ್ಭಿ: | ಸ | ಮಾಖ್ಯಾ | ತಮ್ ॥ ೨೫ ॥ |

ಆರ್ಯಾಛಂದಸ್ಸಿನಲ್ಲಿ ಹೇಳಿದ ಲಕ್ಷಣವೇ ಇಲ್ಲಿಯೂ ಸಂಗತವಾಗುತ್ತದೆ. ಅಂದರೆ, ಪೂರ್ವಾರ್ಧದಲ್ಲಿ ಗುರುವಿನಿಂದ ಕೂಡಿದ ಏಳುಗಣಗಳಿರುತ್ತವೆ. ವಿಷಮ (೧,೩,೫,೭) ಸ್ಥಾನಗಳಲ್ಲಿ ಜಗಣವಿರಬಾರದು. ಆದರೆ (೨,೪,೬) ಸಮಸ್ಥಾನಗಳಲ್ಲಿರಬಹುದು. ಉತ್ತರಾರ್ಧದಲ್ಲಿಯೂ ಇದೇ ನಿಯಮವಿದ್ದು, ಆರನೆಯ ಗಣವು ಕೇವಲ ಲಘುವಾಗಿರುತ್ತದೆ. ಆದರೆ ಈ ವೃತ್ತದ ವಿಶೇಷವೆಂದರೆ, ಒಂದು ಮತ್ತು ಮೂರನೆಯ ಪಾದದಲ್ಲಿ ಮೂರು ಅಂಶ (ಗಣ) ವುಳ್ಳ ಅಂದರೆ ನಾಲ್ಕು ನಾಲ್ಕು ಮಾತ್ರೆಯ ಮೂರು ಮೂರು ಗಣ ಸ್ಪಷ್ಟವಾಗಿ ಇರಬೇಕು. 'ತ್ರಿಷ್ಟಂಶಕೇಷು ಪಾದ:' 'ಪಥ್ಯೇತಿ ನಾಮ ತಸ್ಯಾ:' ಎಂಬಲ್ಲಿ ಕ್ರಮವಾಗಿ ಒಂದು, ಮೂರು ಪಾದಗಳಾಗಿರುತ್ತವೆ.

## 3. ವಿಪುಲಾರ್ಯಾಲಕ್ಷಣ

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
| — — | U U — | U U — | U — U | U U — | U — U | UU — | — |
| ಉಲ್ಲಂ | ಘ್ಯ ಗಣಾ | ತ್ರಯಮಾ | ದಿಮಂ ಶ | ಕಲಯೋ | ರ್ದ್ವಯೋರ್ಭ | ವತಿ ಪಾ | ದ: । |

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
| — — | — — | U U — | — U U | — U U | U | — — | — |
| ಯಸ್ಯಾ | ಸ್ತ್ರಾಂ ಪಿಂ | ಗಲನಾ | ಗೋ ವಿಪು | ಲಾಮಿತಿ | ಸ | ಮಾಖ್ಯಾ | ತಿ ॥ ೨೬ ॥ |

ಆರ್ಯಾಛಂದಸ್ಸಿನ ಲಕ್ಷಣವೇ ಇಲ್ಲಿಯೂ ಸಹ ಇರುತ್ತದೆ. ಅಂದರೆ, ಪೂರ್ವಾರ್ಧದಲ್ಲಿ ಕಡೆಯಲ್ಲಿ ಗುರುವುಳ್ಳ ಏಳು ಗಣಗಳು, ವಿಷಮ ಸ್ಥಾನದಲ್ಲಿ ಜಗಣ ಬರಬಾರದು, ಸಮಸ್ಥಾನದಲ್ಲಿ ಬರಬಹುದು. ಆದರೆ ಆರನೆಯ ಗಣ ಜಗಣ ಅಥವಾ ನಗಣ ಲಘುವೇ ಆಗಿರಬೇಕು. ಹಾಗೆಯೇ ಉತ್ತರಾರ್ಧದಲ್ಲಿ ಕಡೆಯಲ್ಲಿ ಗುರುವುಳ್ಳ ಏಳುಗಣಗಳಿರುತ್ತವೆ. ವಿಷಮಸ್ಥಾನದಲ್ಲಿ ಜಗಣವಿರಬಾರದು. ಆರನೆಯ ಗಣ ಕೇವಲ ಲಘುವಾಗಿರುತ್ತದೆ. ಈ ಲಕ್ಷಣದೊಂದಿಗೆ ವಿಶೇಷಾಂಶವೆಂದರೆ ಒಂದು ಮತ್ತು ಮೂರನೆಯ ಪಾದದಲ್ಲಿ ಮೊದಲ ಮೂರು ಗಣಗಳ ಬಳಿಕ ನಾಲ್ಕನೆಯ ಗಣದಲ್ಲಿ ಪಾದ ಬರುತ್ತದೆ. ಹೀಗಿದ್ದರೆ ಇದು ವಿಪುಲಾರ್ಯಾ ಛಂದಸ್. ಈ ಲಕ್ಷಣದ ಪೂರ್ವಾರ್ಧದಲ್ಲಿ' 'ಮಾದಿಮಂ' ಎಂಬಲ್ಲಿಯೂ, ಉತ್ತರಾರ್ಧದಲ್ಲಿ, 'ಪಿಂಗಲನಾಗೋ' ಎಂಬಲ್ಲಿಯೂ ಪಾದವಿರುತ್ತದೆ ಯಾದ್ದರಿಂದ ಇದು ವಿಪುಲಾರ್ಯಾ ಎನಿಸುತ್ತದೆ

### 4. ಚಪಲಾರ್ಯಾಲಕ್ಷಣ

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
|  | ಜ |  | ಜ |  | ಜ |  |  |
| U U — | U — U | — — | U — U | — — | U — U | — — | — |
| ಉಭಯಾ | ರ್ಧಯೋರ್ಜ | ಕಾರೌ | ದ್ವಿತೀಯ | ತುರ್ಯೌ | ಗಮಧ್ಯ | ಗೌ ಯ | ಸ್ಯಾಃ । |

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
|  | ಜ |  | ಜ |  |  |  |  |
| U U — | U — U | — — | U — U | — — | U | — — | — |
| ಚಪಲೇ | ತಿನಾಮ | ತಸ್ಯಾಃ | ಪ್ರಕೀರ್ತಿ | ತಂ ನಾ | ಗ | ರಾಜೇ | ನ ॥ ೨೭ ॥ |

ಆರ್ಯಾಲಕ್ಷಣವೇ ಇಲ್ಲಿಯೂ ಸಂಗತವಾಗುತ್ತದೆ. ಅಂದರೆ ಏಳುಗಣ ಮತ್ತು ಗುರುವಿರಬೇಕು. ಆದರೆ ವಿಷಮ ಸ್ಥಾನದಲ್ಲಿ ಜಗಣವಿರಬಾರದು. ಆರನೆಯ ಗಣವು ಪೂರ್ವಾರ್ಧದಲ್ಲಿ ಜಗಣ ಅಥವಾ ನಗಣಲಘುವಾಗಿರಬೇಕು. ಆದರೆ ಉತ್ತರಾರ್ಧದಲ್ಲಿ ಆರನೆಯ ಸ್ಥಾನವು ಕೇವಲ ಲಘುವಾಗಿರುತ್ತದೆ. ಈ ಲಕ್ಷಣದ ಜತೆಗೆ ವಿಶೇಷ ಲಕ್ಷಣವೆಂದರೆ - ಪೂರ್ವಾರ್ಧ - ಉತ್ತರಾರ್ಧಗಳೆರಡಲ್ಲಿಯೂ ಎರಡನೆಯ ಮತ್ತು ನಾಲ್ಕನೆಯ ಸ್ಥಾನವು ಗುರು ಮಧ್ಯವುಳ್ಳ ಜಗಣವೇ ಆಗಿರಬೇಕು. ಹಾಗಿದ್ದರೆ ಈ ಆರ್ಯಾವೃತ್ತವೇ ಚಪಲಾರ್ಯಾವೃತ್ತವೆನಿಸುತ್ತದೆ.

## 5. ಮುಖಚಪಲಾರ್ಯಾ ಲಕ್ಷಣ

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
| — — | U ಜ— U | — — | U ಜ— U | — U U | U ಜ— U | — — | — |
| ಆದ್ಯಂ | ದಲಂ ಸ | ಮಸ್ತಂ | ಭಜೇತ | ಲಕ್ಷ್ಮ ಚ | ಪಲಾಗ | ತಂ ಯ | ಸ್ಯಾಃ । |

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
| — — | — U U | — — | U U U U | — — | U | — U U | — |
| ಶೇಷೇ | ಪೂರ್ವಜ | ಲಕ್ಷ್ಮಾ | ಮುಖಚಪ | ಲಾ ಸೋ | ದಿ | ತಾ ಮುನಿ | ನಾ ॥ ೨೮ ॥ |

ಪೂರ್ವಾರ್ಧದಲ್ಲಿ ಚಪಲಾರ್ಯಾದ ಲಕ್ಷಣವಿರಬೇಕು. ಅಂತೆಯೇ ಉತ್ತರಾರ್ಧದಲ್ಲಿ ಪಥ್ಯಾರ್ಯಾವೃತ್ತದ ಲಕ್ಷಣವಿರಬೇಕು. ಇದನ್ನು ಮುಖಚಪಲಾರ್ಯಾವೃತ್ತವೆನ್ನಲಾಗುತ್ತದೆ. ಅಂದರೆ ಪೂರ್ವಾರ್ಧದಲ್ಲಿ ಕಡೆಯಲ್ಲಿ ಗುರುವುಳ್ಳ ಏಳುಗಣಗಳಿರಬೇಕು. ಎರಡು ಮತ್ತು ನಾಲ್ಕನೆಯ ಸ್ಥಾನದಲ್ಲಿ ಜಗಣವಿರಬೇಕು. ಆರನೆಯ ಸ್ಥಾನ ಜಗಣವಾಗಿರಬೇಕು. ಹಾಗೆಯೇ ಉತ್ತರಾರ್ಧದಲ್ಲಿ ಪಥ್ಯಾರ್ಯಾ ಲಕ್ಷಣವೆಂದರೆ ಮೊದಲ ಮೂರು ಗಣಗಳಲ್ಲಿ ಒಂದು ಪಾದವಿರಬೇಕು. ಕಡೆಯಲ್ಲಿ ಗುರುವುಳ್ಳ ಒಟ್ಟು ಏಳು ಗಣಗಳಿರಬೇಕು. ಆರನೆಯದು ಕೇವಲ ಲಘುವಾಗಿರಬೇಕು. ಇದು ಮುಖಚಪಲಾರ್ಯಾವೃತ್ತವೆನಿಸುತ್ತದೆ.

## 6. ಜಘನಚಪಲಾರ್ಯಾ ಲಕ್ಷಣ

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
| — U U | — U U | — — | U U — | U U — | U ಜ— U | U U — | — |
| ಪ್ರಾಕ್ ಪ್ರತಿ | ಪಾದಿತ | ಮರ್ಧೇ | ಪ್ರಥಮೇ | ಪ್ರಥಮೇ | ತರೇತು | ಚಪಲಾ | ಯಾಃ । |

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
| — — | U ಜ— U | — — | U ಜ— U | — — | U | U U U U | — |
| ಲಕ್ಷ್ಮಾss | ಶ್ರಯೇತ | ಸೋಕ್ತಾ | ವಿಶುದ್ಧ | ಧೀಭಿ | ರ್ಜ | ಘನಚಪ | ಲಾ ॥ ೨೯ ॥ |

ವೃತ್ತದ ಪೂರ್ವಾರ್ಧದಲ್ಲಿ ಪಥ್ಯಾರ್ಯಾಲಕ್ಷಣವೂ, ಉತ್ತರಾರ್ಧದಲ್ಲಿ ಚಪಲಾರ್ಯಾ ಲಕ್ಷಣವೂ, ಇದ್ದುದಾದರೆ ಅದು ಜಘನಚಪಲಾರ್ಯಾವೃತ್ತ. ಅಂದರೆ ಪೂರ್ವಾರ್ಧದಲ್ಲಿ ಗುರುವಿನಿಂದ ಕೂಡಿದ ಏಳು ಗಣಗಳಿರಬೇಕು. ವಿಷಮಸ್ಥಾನದಲ್ಲಿ ಜಗಣವಿರಬಾರದು. ಆರನೆಯದು ಜಗಣವಾಗಿರಬೇಕು. ಅಥವಾ ನಗಣಲಘುವಾಗಿರಬಹುದು. ಆದರೆ, ವಿಶೇಷವೆಂದರೆ ಮೊದಲ ಮೂರು ಅಂಶಗಳಲ್ಲಿ ಒಂದು ಪಾದವಿರಬೇಕು. 'ಮರ್ಧೇ' ಎಂಬಲ್ಲಿಗೆ ಒಂದನೆಯ ಪಾದವಾಗಿರುತ್ತದೆ. ಹಾಗೆಯೇ ಉತ್ತರಾರ್ಧದಲ್ಲಿ ಚಪಲಾರ್ಯದ ಲಕ್ಷಣವಿರಬೇಕು. ಅಂದರೆ ಗುರುವಿನಿಂದ ಕೂಡಿದ ಏಳು ಗಣಗಳಿರಬೇಕು. ವಿಷಮಸ್ಥಾನದಲ್ಲಿ ಜಗಣವಿರಬಾರದು. ಆರನೆಯ ಗಣ ಕೇವಲ ಲಘುವಾಗಿರುತ್ತದೆ. ಆದರೆ, ಎರಡು ಮತ್ತು ನಾಲ್ಕನೆಯ ಸ್ಥಾನಗಳಲ್ಲಿ ಜಗಣವಿರಬೇಕು. ಈ ಲಕ್ಷಣವು ಈ ಉದಾಹರಣೆಯಲ್ಲಿರುವುದರಿಂದ, ಇದು ಜಘನಚಪಲಾರ್ಯಾವೃತ್ತವಾಗುತ್ತದೆ.

ಇಲ್ಲಿಗೆ ಆರ್ಯಾಪ್ರಕರಣ ಮುಗಿದುದು

# ೨. ಗೀತಿ ಪ್ರಕರಣಮ್

## 1. ಗೀತಿ ಲಕ್ಷಣ

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
| — — | U U U U | — — | U U U U | U U — | U — U | — U U | — |
| ಆರ್ಯಾ | ಪ್ರಥಮದ | ಲೋಕ್ತಂ | ಯದಿ ಕಥ | ಮಪಿ ಲ | ಕ್ಷಣಂ ಭ | ವೇದುಭ | ಯೋಃ । |

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
| U U — | U U U U | — — | — — | — — | U — U | — — | — |
| ದಲಯೋಃ | ಕೃತಯತಿ | ಶೋಭಾಂ | ತಾಂ ಗೀ | ತಿಂ ಗೀ | ತವಾನ್ ಭುಜಂ | ಗೇಶಃ | ॥ ೩೦ ॥ |

ಆರ್ಯಾಛಂದಸ್ಸಿನಪೂರ್ವಾರ್ಧದ ಲಕ್ಷಣವೇ ಪೂರ್ವಾರ್ಧ ಮತ್ತು ಉತ್ತರಾರ್ಧಗಳೆರಡಲ್ಲಿಯೂ ಸಂಗತವಾಗಿರುವುದು ಗೀತಿ ಛಂದಸ್ಸೆನಿಸುತ್ತದೆ. ಯತಿ ನಿಯಮವೂ ಸಹ ಅಲ್ಲಿ ಇರುವಂತೆಯೇ ಎಂದು ತಿಳಿಯಬೇಕು. ಅಂದರೆ, ಪೂರ್ವಾರ್ಧ ಮತ್ತು ಉತ್ತರಾರ್ಧಗಳೆರಡರಲ್ಲಿಯೂ ಕಡೆಯಲ್ಲಿ ಗುರುವುಳ್ಳ ಏಳುಗಣವಿರಬೇಕು. ವಿಷಮಸ್ಥಾನಗಳಾದ ೧-೩-೫-೭ ಈ ಸ್ಥಾನಗಳಲ್ಲಿ ಜಗಣ ವಿರಬಾರದು. ಆರನೆಯ ಸ್ಥಾನವು ಜಗಣ ಅಥವಾ ನಗಣಲಘುವಾಗಿರಬಹುದು. ಆರು - ಏಳನೆಯ ಸ್ಥಾನಗಳಲ್ಲಿ ನಗಣ ಲಘುವಿದ್ದರೆ ಯತಿ ನಿಯಮವುಂಟು. ಆರನೆಯ ಸ್ಥಾನವು ಇಲ್ಲಿ ಎರಡೂ ಅರ್ಧಗಳಲ್ಲಿ ಜಗಣವೇ ಆಗಿರುವುದರಿಂದ ಯಥಾನುಕೂಲ ಯತಿಯನ್ನು ಹೇಳಿಕೊಳ್ಳಬೇಕು. ಅಂದರೆ ಪೂರ್ವಾರ್ಧದಲ್ಲಿ 'ಲಕ್ಷಣಂ' ಎಂಬಲ್ಲಿಯೂ, ಉತ್ತರಾರ್ಧದಲ್ಲಿ 'ಗೀತವಾನ್' ಎಂಬಲ್ಲಿಯೂ ಯತಿಯನ್ನು ಹೇಳಿಕೊಳ್ಳಬಹುದು. ಹಾಗೆಯೇ ಎರಡೂ ಅರ್ಧಗಳಲ್ಲಿ ಮೊದಲ ಮೂರು ಗಣಗಳ ಬಳಿಕ ಪಾದ ನಿಯಮವನ್ನು ಇಟ್ಟುಕೊಂಡು ಯತಿಯನ್ನು ಹೇಳಿಕೊಳ್ಳಬಹುದು.

## 2. ಉಪಗೀತಿಯ ಲಕ್ಷಣ

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
| — — | U — U | — — | — U U | — — | U | — — | — |
| ಆರ್ಯಾ | ದ್ವಿತೀಯ | ಕೇಽರ್ಧೇ | ಯದ್ಗದಿ | ತಂ ಲ | ಕ್ಷ | ಣಂ ತತ್ | ಸ್ಯಾತ್ । |

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
| — — U | — U U | U U — | U U — | — — | U | — — | — |
| ಯದ್ಯುಭ | ಯೋರಪಿ | ದಲಯೋ | ರುಪಗೀ | ತಿಂ ತಾಂ | ಮು | ನಿರ್ಬ್ರೂ | ತೇ ॥ ೩೧ ॥ |

ಪೂರ್ವಾರ್ಧ -ಉತ್ತರಾರ್ಧಗಳೆರಡಲ್ಲಿಯೂ ಆರ್ಯಾಛಂದಸ್ಸಿನ ಉತ್ತರಾರ್ಧದ ಲಕ್ಷಣವು ಸಂಗತವಾದಲ್ಲಿ ಅದು ಉಪಗೀತಿ ಛಂದಸ್ಸೆನಿಸುತ್ತದೆ. ಅಂದರೆ, ಕಡೆಯಲ್ಲಿ ಗುರುವುಳ್ಳ ಏಳು ಗಣಗಳಿರಬೇಕು. ವಿಷಮಸ್ಥಾನಗಳಲ್ಲಿ ಜಗಣವಿರಬಾರದು. ಮತ್ತು ಆರನೆಯ ಸ್ಥಾನವು ಕೇವಲ

ಲಘುವಾಗಿರಬೇಕು. ಇದು ಉಪಗೀತಿಯೆನಿಸುತ್ತದೆ.

### 3. ಉದ್ಗೀತಿಯ ಲಕ್ಷಣ

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
| — — | UU— | U U — | — U U | U U — | U | — — | — |
| ಆರ್ಯಾ | ಶಕಲ | ದ್ವಿತಯಂ | ವ್ಯತ್ಯಯ | ರಚಿತಂ | ಭ | ವೇದ್ಯ | ಸ್ಯಾಃ । |

| 1 | 2 | 3 | 4 | 5 | 6 | 7 | ಗು |
|---|---|---|---|---|---|---|---|
| — — | — U U | UU — | — — | — — | U — U | — — | — |
| ಸೋದ್ಗೀ | ತಿಃ ಕಿಲ | ಕಥಿತಾ | ತದ್ವ | ದ್ವ್ಯತ್ಯಂ | ಪ್ರಭೇದ | ಸಂಯು | ಕ್ತಾ ॥ ೩೨ ॥ |

ಆರ್ಯಾಛಂದಸ್ಸಿನ ಪೂರ್ವಾರ್ಧವು ಉತ್ತರಾರ್ಧವಾಗಿಯೂ, ಉತ್ತರಾರ್ಧವು ಪೂರ್ವಾರ್ಧವಾಗಿಯೂ ವ್ಯತ್ಯಯಗೊಂಡಲ್ಲಿ ಅದು ಉದ್ಗೀತಿ ಛಂದಸ್ಸಾಗುತ್ತದೆ. ಅಂದರೆ ಪೂರ್ವಾರ್ಧದಲ್ಲಿ ಕಡೆಯಲ್ಲಿ ಗುರುವುಳ್ಳ ಏಳುಗಣಗಳಿರಬೇಕು. ಮತ್ತು ವಿಷಮಸ್ಥಾನಗಳಲ್ಲಿ ಜಗಣವಿರಬಾರದು. ಆದರೆ, ಪೂರ್ವಾರ್ಧದ ಆರನೆಯ ಸ್ಥಾನ ಕೇವಲ ಲಘುವಾಗಿರುತ್ತದೆ. ಮತ್ತು ಉತ್ತರಾರ್ಧದ ಆರನೆಯ ಸ್ಥಾನ ಜಗಣವಾಗಿರುತ್ತದೆ. ಅಥವಾ ನಗಣ ಲಘುವಾಗಿರುತ್ತದೆ.ಪೂರ್ವಾರ್ಧದಲ್ಲಿ ಮೊದಲ ಮೂರು ಅಂಶಗಳ ಬಳಿಕ ಹಾಗೂ ಐದನೆಯ ಗಣದ ಬಳಿಕ ಯತಿಯನ್ನು ಹೇಳಿಕೊಳ್ಳಬಹುದು. ಮತ್ತು ಉತ್ತರಾರ್ಧದಲ್ಲಿ ಆರನೆಯ ಗಣದ ಮೊದಲ ಲಘುವಿನ ಬಳಿಕ ಯತಿಯನ್ನು ಹೇಳಿಕೊಳ್ಳಬಹುದು. ಇದು ಉದ್ಗೀತಿಯಾಗುತ್ತದೆ.

### 4. ಆರ್ಯಾಗೀತಿಯ ಲಕ್ಷಣ

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| — — | — — | — U U | U U — | — — | U — U | U U — | — — |
| ಆರ್ಯಾ | ಪೂರ್ವಾ | ರ್ಧಂ ಯದಿ | ಗುರುಣೈ | ಕೇನಾ | ಧಿಕೇನ | ನಿಧನೇ | ಯುಕ್ತಮ್ |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| U U — | — — | U U — | U — U | — U U | U — U | — — | — — |
| ಇತರ | ತ್ತದ್ವ | ನ್ನಿಖಿಲಂ | ದಲಂ ಯ | ದೀಯಮು | ದಿತೇಯ | ಮಾರ್ಯಾ | ಗೀತಿಃ ॥೩೩॥ |

ಆರ್ಯಾ ಪೂರ್ವಾರ್ಧದ ಲಕ್ಷಣದ ಜತೆಗೆ ಒಂದು ಗುರುವು ಅಧಿಕವಾಗಿದ್ದು, ಈ ಲಕ್ಷಣ ಪೂರ್ವಾರ್ಧ ಮತ್ತು ಉತ್ತರಾರ್ಧಗಳೆರಡರಲ್ಲಿಯೂ ಸಂಭವಿಸಿದಲ್ಲಿ ಅದು ಆರ್ಯಾಗೀತಿ ಛಂದಸ್ಸೆನಿಸುತ್ತದೆ. ಅಂದರೆ, ಪೂರ್ವಾರ್ಧ ಉತ್ತರಾರ್ಧಗಳೆರಡರಲ್ಲಿಯೂ ಎಂಟು ಗಣಗಳಿರಬೇಕು. ವಿಷಮಸ್ಥಾನಗಳಲ್ಲಿ ಜಗಣವಿರಬಾರದು. ಆರನೆಯ ಗಣವು ಜಗಣವಾಗಿರಬೇಕು ಅಥವಾ ನಗಣ

ಲಘುವಾಗಿರಬಹುದು. ಯತಿಯನ್ನು ಆರನೆಯ ಗಣದ ಮೊದಲನೆಯ ಲಘುವಿನ ಬಳಿಕ ಹೇಳಿಕೊಳ್ಳಬಹುದು.

ಇಲ್ಲಿಗೆ ಗೀತಿ ಪ್ರಕರಣ ಮುಗಿದುದು

## ೩. ವೈತಾಲೀಯ ಪ್ರಕರಣಮ್

### 1. ವೈತಾಲೀಯ ಲಕ್ಷಣ

| 6 | ರ | ಲ ಗು | 8 | ರ | ಲ ಗು |
|---|---|---|---|---|---|
| — ∪∪— | — ∪ — | ∪— | — ∪∪— — | — ∪— | ∪— |
| ಷಟ್‌ವಿಷಮೇ | ಽಷ್ಟೌ ಸಮೇ | ಕಲಾಃ | ಷಟ್‌ಚ ಸಮೇ ಸ್ಯು | ರ್ನೋ ನಿರಂ | ತರಾಃ । |

| 6 | ರ | ಲ ಗು | 8 | ರ | ಲ ಗು |
|---|---|---|---|---|---|
| ∪ ∪ —∪ ∪ | — ∪ — | ∪— | — — — — | — ∪ — | ∪ — |
| ನ ಸಮಾತ್ರ ಪ | ರಾಶ್ರಿತಾ | ಕಲಾ | ವೈತಾಲೀಯೇ | ಽಂತೇ ರಲೌ | ಗುರುಃ ॥ ೩೪ ॥ |

ಈ ವೈತಾಲೀಯ ವೃತ್ತದ ಮೊದಲ ಮತ್ತು ಮೂರನೆಯ (ವಿಷಮ) ಪಾದಗಳಲ್ಲಿ ಮೊದಲು ಆರು ಮಾತ್ರೆ ಬಳಿಕ ರಗಣ-ಲಘು- ಗುರು ಹೀಗಿರಬೇಕು. ಸಮಪಾದಗಳಾದ ಎರಡು ನಾಲ್ಕನೆಯ ಪಾದಗಳಲ್ಲಿ ಮೊದಲು ಎಂಟು ಮಾತ್ರೆ, ಬಳಿಕ ರಗಣ, ಲಘು, ಗುರು-ಹೀಗಿರಬೇಕು. ಸಮಪಾದಗಳಾದ ಎರಡು ನಾಲ್ಕರಲ್ಲಿ ಆರು ಮಾತ್ರೆಗಳು (ಆರು ಲಘುಗಳು) ನಿರಂತರವಾಗಿ ಇರಬಾರದು. ಸಮಸ್ಥಾನದಲ್ಲಿರುವ ಲಘುವು ಅಂದರೆ 2,4,6 ರಲ್ಲಿನ ಲಘುವು ವಿಷಮ ಸ್ಥಾನಗತವಾದ 3,5,7 ರಲ್ಲಿನ ಲಘು ಮಾತ್ರೆಯನ್ನಾಶ್ರಯಿಸಿ ಇರಬಾರದು.

### 2. ಔಪಚ್ಛಂದಸಿಕದ ಲಕ್ಷಣ

| 6 | ರ | ಯ | 8 | ರ | ಯ |
|---|---|---|---|---|---|
| — — — | — ∪— | ∪— — | — — — ∪∪ | — ∪— | ∪ — — |
| ಪರ್ಯಂತೇ | ರ್ಯೌ ತ | ಥೈವ ಶೇಷ | ಮೌಪಚ್ಛಂದಸಿ | ಕಂ ಸುಧೀ | ಭಿರುಕ್ತಮ್ ॥ ೩೫ ॥ |

ಷರಾ - ಇಲ್ಲಿ ಶೇಷ ಎಂಬಲ್ಲಿನ 'ಷ' ಕಾರವನ್ನು ಪಾದಾಂತವೆಂದು ಭಾವಿಸಿ ಗುರುವನ್ನಾಗಿ ಮಾಡಿಕೊಳ್ಳಬೇಕು.

ಮೊದಲ ಮತ್ತು ಮೂರನೆಯ ಪಾದಗಳಲ್ಲಿ ಆರು ಮಾತ್ರೆ, ಬಳಿಕ ರಗಣ, ಯಗಣಗಳಿರಬೇಕು. ಹಾಗೆಯೇ ಎರಡು ನಾಲ್ಕನೆಯ ಪಾದಗಳಲ್ಲಿ ಎಂಟು ಮಾತ್ರೆ, ಬಳಿಕ ರಗಣ, ಯಗಣಗಳಿರಬೇಕು. ಹೀಗೆ ಇದು ಔಪಚ್ಛಂದಸಿಕವೃತ್ತವಾಗುತ್ತದೆ.

### 3. ಆಪಾತಲಿಕಾದ ಲಕ್ಷಣ

| 6 | ಭ | ಗು ಗು | 8 | ಭ | ಗು ಗು |
|---|---|---|---|---|---|
| — — ∪ ∪ | — ∪ ∪ | — — | — ∪ ∪ — ∪ ∪ | — ∪ ∪ | — — |
| ಆಪಾತಲಿ | ಕಾ ಕಥಿ | ತೇಯಂ | ಭಾದ್ಗುರುಕಾವಥ | ಪೂರ್ವವ | ದನ್ಯತ್ |

|| ೩೬ ||

ವಿಷಮಪಾದದಲ್ಲಿ ಅಂದರೆ ಒಂದು ಮತ್ತು ಮೂರನೆಯ ಪಾದದಲ್ಲಿ ಆರು ಮಾತ್ರೆಗಳ ಬಳಿಕ ಭಗಣ,+ ಗುರು,+ ಗುರು, ಇರಬೇಕು. ಹಾಗೆಯೇ ಸಮಪಾದದಲ್ಲಿ ಅಂದರೆ ಎರಡು ಮತ್ತು ನಾಲ್ಕನೆಯ ಪಾದದಲ್ಲಿ ಎಂಟು ಮಾತ್ರೆಗಳ ಬಳಿಕ ಭಗಣ,+ ಗುರು + ಗುರು ಇರಬೇಕು. ಇದು ಆಪಾತಲಿಕಾ ವೃತ್ತದ ಲಕ್ಷಣ. ಇದು ಪೂರ್ವಾರ್ಧ- ಉತ್ತರಾರ್ಧಗಳೆರಡಕ್ಕೂ ಅನ್ವಯವಾಗುತ್ತವೆ.

### 4. ದಕ್ಷಿಣಾಂತಿಕಾದ ಲಕ್ಷಣ

| 6 | ರ | ಲ ಗು | 8 | ರ | ಲ ಗು |
|---|---|---|---|---|---|
| ∪ — ∪ — | — ∪ — | ∪ — | ∪ — ∪ — — | — ∪ — | ∪ — |
| ತೃತೀಯಯುಗ್ | ದಕ್ಷಿಣಾಂ | ತಿಕಾ | ಸಮಸ್ತಪಾದೇ | ಷು ದ್ವಿತೀ | ಯ ಲಃ |

|| ೩೭ ||

ವೈತಾಲೀಯ ವೃತ್ತದ ಲಕ್ಷಣವೇ ಇಲ್ಲಿಯೂ ಸಂಗತವಾಗುತ್ತದೆ. ಅಂದರೆ, ೧-೩ನೇ ಪಾದಗಳಲ್ಲಿ ಆರು ಮಾತ್ರೆ ರಗಣ + ಲಘು + ಗುರು ಇರಬೇಕು;

೨-೪ ನೇ ಪಾದಗಳಲ್ಲಿ ಎಂಟು ಮಾತ್ರೆ ರಗಣ + ಲಘು + ಗುರು ಇರಬೇಕು. ಆದರೆ ವೈಶಿಷ್ಟ್ಯವೆಂದರೆ ನಾಲ್ಕೂ ಪಾದಗಳಲ್ಲಿ ಎರಡನೆಯ ಲಘುವು, ಮೂರನೆಯ ಲಘುವಿನೊಂದಿಗೆ ಸೇರಿ ಗುರುವಾಗಿರಬೇಕು. ಅಂದರೆ 'ತೀ' 'ಷು' ಗಳಲ್ಲಿರುವಂತೆ ಎರಡನೆಯ ಲಘು, ಮೂರನೆಯ ಲಘು ಸೇರಿ ಗುರುವಾಗಿರಬೇಕು. ಈ ಲಕ್ಷಣ ಪೂರ್ವಾರ್ಧ ಉತ್ತರಾರ್ಧಗಳೆರಡಕ್ಕೂ ಅನ್ವಯಿಸುತ್ತದೆ

### 5. ಉದೀಚ್ಯವೃತ್ತಿಯ ಲಕ್ಷಣ

| 6 | ರ | ಲ ಗು | 8 | ರ | ಲ ಗು |
|---|---|---|---|---|---|
| ∪ — ∪ — | — ∪ — | ∪ — | — — — ∪ | ∪ — ∪ | ∪ — |
| ಉದ್ದೀಚ್ಯವೃತ್ತಿ | ರ್ದ್ವಿತೀ | ಯ ಲಃ | ಸಕ್ತೋऽಗ್ರೇಣ | ಭವೇದಯು | ಗ್ಮಯೋಃ |

|| ೩೮ ||

ಮೊದಲನೆಯ ಮತ್ತು ಮೂರನೆಯ ಪಾದಗಳಲ್ಲಿ ಮಾತ್ರ ಎರಡನೆಯ ಲಘುವು ಮೂರನೆಯ ಲಘುವಿನೊಂದಿಗೆ ಸೇರಿರಬೇಕು. ಉಳಿದಂತೆ, ೧-೩ ನೇ ಪಾದಗಳಲ್ಲಿ ಆರು ಮಾತ್ರೆ, ರಗಣ, ಲಘು, ಗುರುಗಳೂ, ೨- ೪ ಪಾದಗಳಲ್ಲಿ ಎಂಟು ಮಾತ್ರೆ. ರಗಣ, ಲಘು ಗುರುಗಳೂ ಇರಬೇಕು. ಇಲ್ಲಿ ಒಂದನೇ ಪಾದದಲ್ಲಿ 'ದೀ' ಎಂಬಲ್ಲಿ ಎರಡನೆಯ ಲಘು ಮೂರನೆಯ ಲಘುವಿನೊಂದಿಗೆ ಸೇರಿ ಗುರುವಾಗಿದೆ.

### 6. ಪ್ರಾಚ್ಯವೃತ್ತಿಯ ಲಕ್ಷಣ

6 | ರ | ಲ ಗು | 8 | ರ | ಲ ಗು
— — U U | — U — | U — | — U — U U U | — U — | U —
**ಪೂರ್ವೇಣ ಯುತೋಽಥ ಪಂಚಮಃ ಪ್ರಾಚ್ಯವೃತ್ತಿರುದಿತೇತಿ ಯುಗ್ಮಯೋಃ ||೩೯||**

೧-೩ನೇ ಪಾದಗಳಲ್ಲಿ ಆರು ಮಾತ್ರೆ, ರಗಣ, ಲಘು, ಗುರುಗಳೂ, ೨-೪ ನೇ ಪಾದಗಳಲ್ಲಿ ಎಂಟು ಮಾತ್ರ ರಗಣ, ಲಘು, ಗುರುಗಳೂ ಇರಬೇಕು. ಆದರೆ ೨-೪ ನೇ ಪಾದಗಳಲ್ಲಿ ನಾಲ್ಕನೆಯ ಲಘುವು ಐದನೆಯ ಲಘುವಿನೊಂದಿಗೆ ಸೇರಿ ಗುರುವರ್ಣವಾಗಿರಬೇಕು. ಪ್ರಕೃತ ಈ ಲಕ್ಷಣದ ಎರಡನೆಯ ಪಾದದಲ್ಲಿ 'ವೃ' ಎಂಬುದು ನಾಲ್ಕು ಐದನೆಯ ಲಘುಗಳ ಸಂಯೋಗದಿಂದಾಗಿರುವ ಗುರುವಾಗಿದೆ.

### 7. ಪ್ರವೃತ್ತಕದ ಲಕ್ಷಣ

6 | ರ | ಲ ಗು | 8 | ರ | ಲ ಗು
U — U — | — U — | U — | — U — U U U | — U — | U —
**ಯದ್ಧಾ ಸಮಾ ವೋಜಯುಗ್ಮಕೌ ಪೂರ್ವಯೋರ್ಭವತಿ ತತ್ಪ್ರವೃತ್ತಕಮ್ || ೪೦ ||**

೧-೩ ನೇ ಪಾದಗಳಲ್ಲಿ ಉದೀಚ್ಯ ವೃತ್ತಿಯ ೧-೩ನೇ ಪಾದಗಳ ಲಕ್ಷಣವೂ, ೨-೪ ನೇ ಪಾದಗಳಲ್ಲಿ ಪ್ರಾಚ್ಯವೃತ್ತಿಯ ೨-೪ನೇ ಪಾದಗಳ ಲಕ್ಷಣವೂ ಸಂಗತವಾಗಿದ್ದರೆ ಅದು ಪ್ರವೃತ್ತಕ. ಅಂದರೆ ಒಂದು ಮತ್ತು ಮೂರನೆಯ ಪಾದಗಳಲ್ಲಿ ಆರು ಮಾತ್ರೆ, ರಗಣ, ಲಘು, ಗುರುವೂ ಎರಡು ಮತ್ತು ನಾಲ್ಕನೆಯ ಪಾದಗಳಲ್ಲಿ ಎಂಟು ಮಾತ್ರೆ, ರಗಣ, ಲಘು, ಗುರುವೂ, ಇರಬೇಕು. ಆದರೆ, ೧-೩ ನೇ ಪಾದಗಳಲ್ಲಿ ಎರಡನೆಯ ಲಘು ಮೂರನೆಯ ಲಘುವಿನೊಡನೆ ಕೂಡಿರಬೇಕು, 'ದಾ' ಎಂಬಲ್ಲಿಯಂತೆ ಮತ್ತು ೨-೪ನೇ ಪಾದಗಳಲ್ಲಿ ನಾಲ್ಕನೆಯ ಲಘು ಐದನೆಯ ಲಘುವಿನೊಡನೆ ಕೂಡಿರಬೇಕು 'ಯೋ' ಎಂಬಲ್ಲಿರುವಂತೆ. ಇದು ಪ್ರವೃತ್ತಕದ ಲಕ್ಷಣ.

### 8. ಅಪರಾಂತಿಕಾದ ಲಕ್ಷಣ

8 | ರ | ಲ ಗು
— U — U U U | — U — | U —
**ಅಸ್ಯ ಯುಗ್ಮರಚಿತಾಪರಾಂತಿಕಾ || ೪೧ ||**

ಪ್ರವೃತ್ತಕ ವೃತ್ತದ ಎರಡನೆಯ ಪಾದದ ಲಕ್ಷಣವೇ ನಾಲ್ಕೂ ಪಾದಗಳಲ್ಲಿ ಸಂಗತವಾದರೆ, ಅದು **ಅಪರಾಂತಿಕಾ** ವೃತ್ತವಾಗುತ್ತದೆ. ಅಂದರೆ, ನಾಲ್ಕೂ ಪಾದಗಳಲ್ಲಿ ಎಂಟು ಮಾತ್ರೆ, ರಗಣ, ಲಘು, ಗುರು - ಇರಬೇಕು. ಮತ್ತು ನಾಲ್ಕನೆಯ ಲಘು ಐದನೆಯ ಲಘುವಿನೊಡನೆ ಸೇರಿರಬೇಕು, 'ಯು' ಎಂಬಲ್ಲಿ ಇರುವಂತೆ. ಇದು ಅಪರಾಂತಿಕಾದ ಲಕ್ಷಣ.

### 9. ಚಾರುಹಾಸಿನೀ ವೃತ್ತದ ಲಕ್ಷಣ

```
     6     |   ರ    | ಲ ಗು
U — U —    | — U —  | U —
ಅಯುಗ್ಮವಾ   |ಚಾರುಹಾ  |ಸಿನೀ          || ೪೨ ||
```

ಪ್ರವೃತ್ತಕವೃತ್ತದ ಮೊದಲ ಪಾದದ ಲಕ್ಷಣವೇ ನಾಲ್ಕೂಪಾದಗಳಲ್ಲಿ ಸಂಗತವಾದರೆ ಅದು ಚಾರುಹಾಸಿನೀ ವೃತ್ತ. ಅಂದರೆ, ನಾಲ್ಕೂ ಪಾದಗಳಲ್ಲಿ ಆರು ಮಾತ್ರೆ, ರಗಣ, ಲಘು, ಗುರು ಇರಬೇಕು. ಮತ್ತು ಎರಡನೆಯ ಲಘು ಮೂರನೆಯ ಲಘುವಿನೊಡನೆ ಸೇರಿ ಗುರುವಾಗಿರಬೇಕು, 'ಯು' ಎಂಬಲ್ಲಿ ಇರುವಂತೆ.

ಇಲ್ಲಿಗೆ ವೈತಾಲೀಯ ಪ್ರಕರಣ ಮುಗಿದುದು.

◇◇◇◇◇

## ೪. ಅನುಷ್ಟುಪ್‌ಪ್ರಕರಣಮ್

### 1. ವಕ್ತ್ರದ ಲಕ್ಷಣ

```
            |     ಯ   |ಗು|              |     ಯ   | ಗು
— — — —     | U —   — | —| — —   —    — | — U   — | —
ವಕ್ತ್ರಂ ನಾದ್ಯಾ|ನ್ನಸೌ ಸ್ಯಾತಾ|ಮ|ಬ್ಧೇರ್ಯೋಽನು|ಷ್ಟುಭಿ ಖ್ಯಾ|ತಮ್    || ೪೩ ||
```

ಒಂದು ಪಾದದಲ್ಲಿ ಎಂಟು ಅಕ್ಷರಗಳಿದ್ದರೆ ಅದು ಅನುಷ್ಟುಪ್ ಎನಿಸುತ್ತದೆ. ಈ ಜಾತಿಯಲ್ಲಿ ವಕ್ತ್ರದ ಲಕ್ಷಣವೆಂದರೆ - ಮೊದಲ ಅಕ್ಷರದ ಬಳಿಕ ನಗಣ- ಸಗಣಗಳಿರಬಾರದು. ಮತ್ತು ನಾಲ್ಕು (ಅಬ್ಧಿ) ಅಕ್ಷರಗಳ ಬಳಿಕ ಯಗಣವಿರಬೇಕು. ಅಂತ್ಯಾಕ್ಷರವು ಸಾಮಾನ್ಯವಾಗಿ ಗುರುವೇ ಆಗಿರಬೇಕಷ್ಟೆ. ಈ ಲಕ್ಷಣವು ನಾಲ್ಕು ಪಾದಗಳಿಗೆ ಅನ್ವಯಿಸುತ್ತದೆ.

### 2. ಪಥ್ಯಾವಕ್ತ್ರದ ಲಕ್ಷಣ

```
            |   ಯ   |ಗು |         |   ಜ   |ಗು
U  —   —  U |U — —  | — | — — — — |U — U  | —
ಯುಜೋರ್ಜೇನ|ಸರಿದ್ಭ|ರ್ತುಃ|ಪಥ್ಯಾವಕ್ತ್ರಂ|ಪ್ರಕೀರ್ತಿ|ತಮ್  || ೪೪ ||
```

೧-೩ನೇ ಪಾದಗಳಲ್ಲಿ ನಾಲ್ಕು ಅಕ್ಷರಗಳ ಬಳಿಕ ಯಗಣ, ಗುರುವಿರಬೇಕು. ಹಾಗೆಯೇ ೨-೪ ನೇ ಪಾದಗಳಲ್ಲಿ ನಾಲ್ಕು ಅಕ್ಷರಗಳ ಬಳಿಕ ಜಗಣ ಗುರುವಿರಬೇಕು. ಇದು ಪಥ್ಯಾವಕ್ತ್ರದ ಲಕ್ಷಣ.

### 3. ವಿಪರೀತಪಥ್ಯಾವಕ್ತ್ರದ ಲಕ್ಷಣ

```
              |   ಜ   |ಗು|         |   ಯ   |ಗು
U  U  —   —   |U — U  | —|U — U U  |U — —  | —
ಅಯುಜೋರ್ಜೇ|ನ ವಾರಿ|ಧೇ|ಸ್ತದೇವ ವಿ|ಪರೀತಾ|ದಿ   || ೪೫ ||
```

ಪಥ್ಯಾವಕ್ತ್ರದ ಲಕ್ಷಣವೇ ವ್ಯತ್ಯಸ್ತವಾದರೆ ಅದು ವಿಪರೀತಪಥ್ಯಾವಕ್ತ್ರ ವೃತ್ತ. ಅಂದರೆ, ೧-೩ನೇ ಪಾದಗಳಲ್ಲಿ ನಾಲ್ಕು ವರ್ಣಗಳ ಬಳಿಕ ಜಗಣ, ಗುರುವೂ, ೨-೪ ನೇ ಪಾದಗಳಲ್ಲಿ ನಾಲ್ಕು ವರ್ಣಗಳ ಬಳಿಕ ಯಗಣ, ಗುರುವೂ ಇರಬೇಕು.

### 4. ಚಪಲಾವಕ್ತ್ರದ ಲಕ್ಷಣ

ನ ಗು ಯ ಗು

UU— — | U U U | — | U — — — | U — — | —

ಚಪಲಾವಕ್ತ್ರಮಯುಜೋರ್ನಕಾರಶ್ಚೇತ್ ಪಯೋರಾಶೇಃ ॥ ೪೬ ॥

೧-೩ ನೇ ಪಾದಗಳಲ್ಲಿ ನಾಲ್ಕು ಅಕ್ಷರಗಳಾದ ಬಳಿಕ ನಗಣ, ಗುರುವೂ, ೨-೪ ನೇ ಪಾದಗಳಲ್ಲಿ ನಾಲ್ಕು ಅಕ್ಷರಗಳ ಬಳಿಕ ಯಗಣ, ಗುರುವೂ ಇದ್ದಲ್ಲಿ ಅದು ಚಪಲಾವಕ್ತ್ರ ವೃತ್ತವಾಗುತ್ತದೆ.

### 5. ಯುಗ್ಮವಿಪುಲಾದ ಲಕ್ಷಣ

ಯ ಗು (ಜ) ಲ ಗು

U U — — | U — — | — | — — U U | U — U | —

ಯಸ್ಯಾಂ ಲಃ ಸಪ್ತಮೋ ಯುಗ್ಮೇ ಸಾ ಯುಗ್ಮವಿಪುಲಾ ಮತಾ ॥ ೪೩ ॥

೧-೩ ನೇ ಪಾದಗಳಲ್ಲಿ ನಾಲ್ಕು ಅಕ್ಷರಗಳ ಬಳಿಕ ಯಗಣ, ಗುರುವೂ, ೩-೪ ನೇ ಪಾದಗಳಲ್ಲಿ ಏಳನೆಯ ಅಕ್ಷರ ಲಘುವಾಗಿಯೂ ಇರಬೇಕು. ಹೀಗಿದ್ದರೆ, ಇದು ಯುಗ್ಮವಿಪುಲಾ ಎನಿಸುತ್ತದೆ. ಇಲ್ಲಿ 'ಮ' ಲಘುವಾಗಿದೆ.

### 6. ವಿಪುಲಾದ ಲಕ್ಷಣ - (ಸೈತವಾಚಾರ್ಯನ ಮತದಂತೆ) ಮತ್ತು

### 7. ಭಾದ್ವಿಪುಲಾದ ಲಕ್ಷಣ

(ಜ)ಲ ಗು ಭ ಗು

—U— — | U — U — | — — U — | — U U | —

ಸೈತವಸ್ಯಾಖಿಲೇಷ್ವಪಿ ಭೇನಾಬ್ಧಿತೋ ಭಾದ್ವಿಪುಲಾ ॥ ೪೮ ॥

1ನೇ ಪಾದ (೬)- ನಾಲ್ಕೂ ಪಾದಗಳಲ್ಲಿ ಏಳನೆಯ ಅಕ್ಷರವು ('ಷ್ವ') ಲಘುವಾಗಿದ್ದರೆ ಸೈತವಾಚಾರ್ಯನ ಮತದಂತೆ ಅದು ವಿಪುಲಾ ಎನಿಸುತ್ತದೆ. ಹಾಗೆಯೇ (3ನೇ ಪಾದ) (೭)-ನಾಲ್ಕು ಅಕ್ಷರಗಳ ಬಳಿಕ ಭಗಣ ಗುರುವಿದ್ದರೆ, ಅದು ಭಾದ್ವಿಪುಲಾ ಆಗುತ್ತದೆ. (ಪಿ-ಪಾದಾಂತವಾಗಿದ್ದು ಗುರುವಾಗಿದೆ.)

### 8. ರವಿಪುಲಾ - 9. ನವಿಪುಲಾ- ಗಳ ಲಕ್ಷಣ

ರ ಗು ನ ಗು

—U — — | — U — | — | — U — — | U U U | —

ಇತ್ಥಮನ್ಯಾ ರಶ್ಚತುರ್ಥಾನ್ನೋಽಂಬುಧೇಶ್ಚೇನ್ನವಿಪುಲಾ ॥ ೪೯ ॥

ಹೀಗೆಯೇ, ನಾಲ್ಕೂ ಪಾದಗಳಲ್ಲಿ ನಾಲ್ಕು ಅಕ್ಷರಗಳ ಬಳಿಕ ರಗಣ-ಗುರುವಿದ್ದರೆ, ಅದು (೮) ರವಿಪುಲಾ ಎಂದೂ : ನಾಲ್ಕೂ ಪಾದಗಳಲ್ಲಿ ನಾಲ್ಕು ಅಕ್ಷರಗಳ ಬಳಿಕ ನಗಣ, ಗುರುವಿದ್ದರೆ, (೯) ನವಿಪುಲಾ ಎಂದೂ ತಿಳಿಯಬೇಕು.

## 10. ತವಿಪುಲಾದ ಲಕ್ಷಣ

ತ | ಗು

— — — — | — — U | —

**ತೋಽಬ್ಧೇಸ್ತತ್ಪೂರ್ವಾನ್ಯಾ ಭವೇತ್** || ೫೦ ||

ನಾಲ್ಕೂ ಪಾದಗಳಲ್ಲಿ ನಾಲ್ಕು ಅಕ್ಷರಗಳ ಬಳಿಕ ತಗಣ- ಗುರುವಿದ್ದರೆ, ಅದು ತವಿಪುಲಾ ಎಂದು ತಿಳಿಯಬೇಕು.

ಇಲ್ಲಿಗೆ ಅನುಷ್ಟುಪ್ ಪ್ರಕರಣ ಮುಗಿದುದು.

◆◆◆◆◆◆

## ೫. ಸಮಮಾತ್ರಾಪ್ರಕರಣಮ್

### 1. ಅಚಲಧೃತಿಯ ಲಕ್ಷಣ

U U U U U U U U U U U U U U U U

**ದ್ವಿಕಗುಣಿತವಸುಲಘುರಚಲಧೃತಿರಿಹ** || ೫೧ ||

ವಸು= ಎಂಟು , ಎರಡರಿಂದ ಗುಣಿಸಲ್ಪಟ್ಟ ಎಂಟು — ಅಂದರೆ ಹದಿನಾರು, ಹದಿನಾರು ಲಘುಗಳಿಂದ ಕೂಡಿದ ಪಾದವುಳ್ಳದ್ದು ಅಚಲಧೃತಿಯಾಗುತ್ತದೆ. ಇದು ನಾಲ್ಕೂ ಪಾದಗಳಿಗೂ ಅನ್ವಯಿಸುವ ಲಕ್ಷಣ.

### 2. ಮಾತ್ರಾಸಮಕದ ಲಕ್ಷಣ

9 (15) (16) ಗು

— — U U — U U — — —

**ಮಾತ್ರಾಸಮಕಂ ನವಮೋಲ್ಗಾಂತ್ಯಃ** || ೫೨ ||

ಹದಿನಾರು ಮಾತ್ರೆಗಳ ಪೈಕಿ ಒಂಬತ್ತನೆಯ ಮಾತ್ರೆ ಲಘುವೇ ಆಗಿದ್ದು, ಅಂದರೆ ಕೇವಲ ಲಘ್ವಕ್ಷರವಿದ್ದು, ಅಂತ್ಯವರ್ಣವು (ಅಂದರೆ ೧೫-೧೬ ನೆಯ ಮಾತ್ರೆ ಸೇರಿ) ಗುರುವಾದಲ್ಲಿ ಅದು ಮಾತ್ರಾಸಮಕವಾಗುತ್ತದೆ.

### 3. ವಿಶ್ಲೋಕದ ಲಕ್ಷಣ

ಜ (15) (16) ಗು

— — | U — U | — — — —

**ಜೋ ನ್ಲಾವಥಾಂಬುಧೇರ್ವಿಶ್ಲೋಕಃ** || ೫೩ ||

ನಾಲ್ಕು ಮಾತ್ರೆಗಳ ಬಳಿಕ ಜಗಣವಾಗಲೀ, ಅಥವಾ ನಗಣವಾಗಲೀ ಇದ್ದರೆ ಅದು ವಿಶ್ಲೋಕವಾಗುತ್ತದೆ. ಮತ್ತು ಕಡೆಯಲ್ಲಿ ಗುರುವೂ (೧೫-೧೬ ಮಾತ್ರೆಗಳ ಸಂಗಮ) ಇರಬೇಕು.

### 4. ವಾನವಾಸಿಕಾದ ಲಕ್ಷಣ

ಜ ಗು
— U U — — | U — U | — —
**ತದ್ಯುಗಲಾದ್ವಾನವಾಸಿಕಾ ಸ್ಯಾತ್ ॥ ೫೪॥**

ಎಂಟು ಮಾತ್ರೆಗಳ ಬಳಿಕ ಜಗಣ ಅಥವಾ ನಗಣ ಲಘು ಇದ್ದರೆ ಮತ್ತು ಕಡೆಯಲ್ಲಿ ಗುರುವಿದ್ದರೆ ಅದು ವಾನವಾಸಿಕಾ ಆಗುತ್ತದೆ.

### 5. ಚಿತ್ರಾದ ಲಕ್ಷಣ

(5) (8) (9) ಗು
— — U U U U U U — — —
**ಬಾಣಾಷ್ಟನವಸು ಯದಿ ಲಶ್ಚಿತ್ರಾ ॥ ೫೫ ॥**

ಬಾಣ = ಐದು, ಐದನೆಯ - ಎಂಟನೆಯ - ಒಂಬತ್ತನೆಯ ಮಾತ್ರೆಗಳ ಸ್ಥಾನವು ಲಘುವೇ ಆಗಿದ್ದಲ್ಲಿ ಮತ್ತು ಅಂತ್ಯ ವರ್ಣ ಗುರುವಾಗಿದ್ದಲ್ಲಿ ಅದು ಚಿತ್ರಾ- ಎನಿಸುತ್ತದೆ.

### 6. ಉಪಚಿತ್ರಾದ ಲಕ್ಷಣ

ಭ ಗು
— U U — — | — U U | — —
**ಅಬ್ಧಿಯುಗಾದ್ಭಶ್ಚೇದುಪಚಿತ್ರಾ ॥ ೫೬ ॥**

ಅಬ್ಧಿ= ನಾಲ್ಕು, ಯುಗ = ಎರಡು. ಅಂದರೆ ಅಬ್ಧಿಯುಗಾತ್- ಎಂಟು ಮಾತ್ರೆಗಳ ಬಳಿಕ ಭಗಣ, ಕಡೆಯಲ್ಲಿ ಗುರುವಿದ್ದರೆ ಅದು ಉಪಚಿತ್ರಾ ಎಂದಾಗುತ್ತದೆ.

### 7. ಪಾದಾಕುಲಕದ ಲಕ್ಷಣ

5 8 9 ಗು ಜ ಗು
U U — U U U U U U — U U — | — — | U — U | — — U U —
**ಯದತೀತಕೃತವಿವಿಧಲಕ್ಷ್ಮಯುತೈರ್ಮಾತ್ರಾಸಮಾದಿಪಾದ್ಯೈ: ಕಲಿತಮ್**

ಜ ಗು ಜ ಗು
U U U U — U U | U — U | U U — | U U — | U — U | — — U U —
**ಅನಿಯತವೃತ್ತಪರಿಮಾಣಸಹಿತಂ ಪ್ರಥಿತಂ ಜಗತ್ಸು ಪಾದಾಕುಲಕಮ್ ॥ ೫೭ ॥**

ಈವರೆಗೆ ಹೇಳಲ್ಪಟ್ಟ ಮಾತ್ರಾಸಮಕ, ವಿಶ್ಲೋಕ, ವಾನವಾಸಿಕಾ, ಚಿತ್ರಾ, ಉಪಚಿತ್ರಾ, ಎಂಬ

ಈ ಐದು ವೃತ್ತಗಳ ಪೈಕಿ, ಯಾವುದೇ ಒಂದು ಪಾದ, ಎರಡು ಪಾದ, ಅಥವಾ ಮೂರು ಪಾದ ಅಥವಾ ನಾಲ್ಕು ಪಾದ-ಯಾವುದೇ ವೃತ್ತದಿಂದ ಮಿಶ್ರಿತವಾಗಿದ್ದರೂ, ಅದು ಪಾದಾಕುಲಕವೆನಿಸುತ್ತದೆ. ಪ್ರಸ್ತುತ ಉದಾಹರಣೆಯಲ್ಲಿ ಮೊದಲನೆಯ ಪಾದವು ಮಾತ್ರಾಸಮಕವಾಗಬಹುದು, ಒಂಬತ್ತನೆಯ ಮಾತ್ರೆ ಲಘುವಾಗಿರುವುದರಿಂದ ಮತ್ತು ಅಂತ್ಯದಲ್ಲಿ ಗುರುವಿರುವುದರಿಂದ; ಅಥವಾ ಈ ಪಾದವು ಚಿತ್ರಾವೃತ್ತವೂ ಆಗಬಹುದು, ಐದು— ಎಂಟು— ನವಮಸ್ಥಾನ ಲಘುವೂ, ಅಂತ್ಯವು ಗುರುವೂ ಆಗಿರುವುದರಿಂದ. ಎರಡನೆಯ ಪಾದವು ನಾಲ್ಕು ಮಾತ್ರೆಗಳ ಬಳಿಕ ಜಗಣವಿದ್ದು, ಕಡೆಯಲ್ಲಿ ಗುರುವಿರುವುದರಿಂದ, ವಿಶ್ಲೋಕವೃತ್ತವಾಗಿದೆ. ಮೂರನೆಯ ಪಾದವು, ಎಂಟು ಮಾತ್ರೆಯ ಬಳಿಕ ಜಗಣ ಮತ್ತು ಕಡೆಯಲ್ಲಿ ಗುರುವಿರುವುದರಿಂದ ವಾನವಾಸಿಕಾ ವೃತ್ತವಾಗಿದೆ. ಹಾಗೆಯೇ ನಾಲ್ಕನೆಯ ಪಾದವು, ನಾಲ್ಕು ಮಾತ್ರೆಗಳ ಬಳಿಕ ಜಗಣ, ಹಾಗೂ ಕಡೆಯಲ್ಲಿ ಗುರುವನ್ನೂ ಹೊಂದಿರುವುದರಿಂದ ವಿಶ್ಲೋಕವೃತ್ತವಾಗಿದೆ. ಹೀಗೆ ಇದು ಪಾದಾಕುಲಕ.

ಹೀಗೆ ಈ ಪೂರ್ವೋಕ್ತ ಐದು ವೃತ್ತಗಳ ಪೈಕಿ ಅನಿಯತವಾದ ರೀತಿಯಲ್ಲಿ ನಾಲ್ಕು ಪಾದಗಳ ಯೋಜನೆಯಿದ್ದರೆ ಅದು ಪಾದಾಕುಲಕವಾಗುತ್ತದೆ.

## ಗುರು ಲಘುಗಳ ಸಂಖ್ಯಾ ನಿಯಮ

ವೃತ್ತಸ್ಯ ಲಾ ವಿನಾ ವರ್ಣೈರ್ಗಾ ವರ್ಣಾ ಗುರುಭಿಸ್ತಥಾ ।
ಗುರವೋ ಲೈರ್ದಲೇ ನಿತ್ಯಂ ಪ್ರಮಾಣಮಿತಿ ನಿಶ್ಚಿತಮ್ ॥ ೫೮ ॥

ಈ ಹಿಂದೆ ಹೇಳಿರುವ ಪಥ್ಯಾರ್ಯಾದಿ ವೃತ್ತಗಳಲ್ಲಿ ಲಘು ವರ್ಣಗಳನ್ನು ಹೊರತಾಗಿ ಉಳಿದವು ಗುರುವರ್ಣಗಳೆಂದು ತಿಳಿಯಬೇಕು. ಹಾಗೆಯೇ ಗುರುವರ್ಣಗಳನ್ನು ಹೊರತಾಗಿ ಉಳಿದವು ಲಘುವರ್ಣಗಳೆಂದು ತಿಳಿಯಬೇಕು. ಮತ್ತೂ ಹಾಗೆಯೇ ಅದೇ ಲಘುಗಳನ್ನು ಹೊರತಾಗಿ, ದಲವನ್ನು ಅರ್ಧ ಮಾಡಿದಾಗ, ಉಳಿದವು ಗುರುಗಳೆಂದು ತಿಳಿಯಬೇಕು.ಇದರ ವಿವರವೆಂದರೆ -

ಆರ್ಯಾ - ಪಥ್ಯಾರ್ಯಾಗಳಲ್ಲಿ ಒಟ್ಟು ಐವತ್ತೇಳು ಮಾತ್ರೆಗಳಿರುತ್ತವೆ. ಹೇಗೆಂದರೆ ಪೂರ್ವಾರ್ಧದಲ್ಲಿ 4 ಮಾತ್ರೆ.x 7ಗಣ +2ಮಾತ್ರೆ (ಗುರು) = 30ಮಾತ್ರೆ; ಉತ್ತರಾರ್ಧದಲ್ಲಿ; 4 ಮಾತ್ರೆ x 6 ಗಣ +1 ಲಘು (6ನೇ ಗಣ) +2 ಮಾತ್ರೆ (ಗುರು) = 27 ಮಾತ್ರೆ —ಹೀಗೆ ಒಟ್ಟು 57ಮಾತ್ರೆಗಳು. ಇದೇ ರೀತಿ ವಿಪುಲಾ ಮತ್ತು ಚಪಲಾದ ಮೂರೂ ಭೇದಗಳಲ್ಲಿಯೂ ಸಹ ಒಂದೊಂದರಲ್ಲಿಯೂ 57-57 ಮಾತ್ರೆಗಳು. ಗೀತಿಯಲ್ಲಿ ಅರವತ್ತು ಮಾತ್ರೆಗಳು, ಉಪಗೀತಿಯಲ್ಲಿ ಐವತ್ತನಾಲ್ಕು, ಆರ್ಯಾಗೀತಿಯಲ್ಲಿ ಅರವತ್ತನಾಲ್ಕು ಮಾತ್ರೆಗಳು. ಇವುಗಳಲ್ಲಿ ಲಘುಗಳನ್ನು ಎಣಿಸಿ, ಒಟ್ಟು ಮಾತ್ರೆಗಳಲ್ಲಿ ಅದನ್ನು ಕಳೆದರೆ ಗುರುವರ್ಣದ ಸಂಖ್ಯೆ ದೊರೆಯುತ್ತದೆ. ಅಥವಾ ಗುರುವರ್ಣದ ಸಂಖ್ಯೆಯನ್ನು ಒಟ್ಟು ಮಾತ್ರೆಗಳಲ್ಲಿ ಕಳೆದರೆ ಲಘು ವರ್ಣಗಳ ಸಂಖ್ಯೆ ದೊರೆಯುತ್ತದೆ. ಗುರು- ಎಂಬುದನ್ನು ಎರಡೆರಡು ಮಾತ್ರೆ ಎಂದು ಪರಿಗಣಿಸಬೇಕಾಗಿದೆಯಷ್ಟೆ. ಆದ್ದರಿಂದ ಒಟ್ಟು ಮಾತ್ರೆಗಳಲ್ಲಿ ಲಘು ವರ್ಣಗಳ ಸಂಖ್ಯೆಯನ್ನು ಕಳೆದು,ಉಳಿದ ಮಾತ್ರಾ ಸಂಖ್ಯೆಯನ್ನು ಎರಡರಿಂದ ಭಾಗಿಸಿದರೆ ಗುರ್ವಕ್ಷರ ಸಂಖ್ಯೆ ದೊರೆಯುತ್ತದೆ. ಉದಾಹರಣೆಗೆ

'ಲಕ್ಷ್ಮೀತತ್' ಎಂಬಲ್ಲಿ ಪೂರ್ವಾರ್ಧದಲ್ಲಿ 30 ಮಾತ್ರೆಗಳೂ ಉತ್ತರಾರ್ಧದಲ್ಲಿ 27 ಮಾತ್ರೆಗಳೂ ಇವೆ. ಅಂದರೆ ಒಟ್ಟು 57 ಮಾತ್ರೆಗಳು. ಇದರಲ್ಲಿ ಒಟ್ಟು ಇಲ್ಲಿರುವ ಲಘ್ವಕ್ಷರಗಳು ಒಟ್ಟು 17. ಇದನ್ನು 57 ರಲ್ಲಿ ಕಳೆದರೆ (57-17 = 40) 40 ಬರುತ್ತದೆ. ಇದನ್ನು 2 ರಿಂದ ಭಾಗಿಸಿದರೆ (40 ÷ 2 = 20) ಬರುವ 20 ಗುರ್ವಕ್ಷರಗಳ ಸಂಖ್ಯೆಯಾಗಿರುತ್ತದೆ. ಇತ್ಯಾದಿ ತಿಳಿಯಬೇಕು.

ಇಲ್ಲಿಗೆ ಮಾತ್ರಾಸಮಪ್ರಕರಣ ಮುಗಿದುದು

*****

## ೬. ದ್ವಿಪಾತ್ಯಕರಣಂ (ಎರಡು ಪಾದಗಳ ಪ್ರಕರಣ)

### 1. ಶಿಖಾ

| | ಲ | ಗು |
|---|---|---|
| ಶಿಖಿಗುಣಿತದಶಲಘುರಚಿತಮಪಗತಲಘುಯುಗಲ — ಮಪರಮಿದಮಖಿಲಮ್ \| | 28 | + 1 |
| ಸಗುರು ಶಕಲಯುಗಲಕಮಪಿ ಸುಪರಿಘಟಿತಲಲಿತಪದವಿತತಿ ಭವತಿ ಶಿಖಾ \|\| ೫೯ \|\| | 30 | + 1 |

ಶಿಖಿ=ಮೂರು. ಮೂರರಿಂದ ಗುಣಿಸಲ್ಪಟ್ಟ ಹತ್ತು ಲಘುಗಳು ಅಂದರೆ ಒಟ್ಟು ಮುವತ್ತು ಲಘುಗಳು, ಇವುಗಳಲ್ಲಿ ಎರಡು ಲಘುಗಳನ್ನು ಕಳೆದರೆ ಒಟ್ಟು ಇಪ್ಪತ್ತೆಂಟು ಲಘುಗಳು ಮತ್ತು ಕಡೆಯಲ್ಲಿ ಒಂದು ಗುರು- ಇರಬೇಕು ಒಂದನೇ ಚರಣದಲ್ಲಿ. ಹಾಗೆಯೇ ಎರಡನೆಯ ಚರಣದಲ್ಲಿ ಸಹ ಮೂವತ್ತು ಲಘುಗಳಿರಬೇಕು, ಕಡೆಯಲ್ಲಿ ಒಂದು ಗುರುವಿರಬೇಕು. ಇದು 'ಶಿಖಾ' ಎಂಬ ವೃತ್ತವಾಗುತ್ತದೆ. ಇದಿಷ್ಟು ಶ್ಲೋಕಾರ್ಧವೆಂದು ತಿಳಿಯಬೇಕು.ಇದನ್ನು ಆವೃತ್ತಿ ಮಾಡಿಕೊಂಡರೆ ನಾಲ್ಕು ಪಾದಗಳ ಒಂದು ಶ್ಲೋಕವಾಗುತ್ತದೆ. ಇಲ್ಲಿ ಕೊಟ್ಟಿರುವ ಈ ಲಕ್ಷಣದಲ್ಲಿ ಮೊದಲ ಪಾದದಲ್ಲಿ 28 ಲಘು + 1 ಗುರುವೂ, ಎರಡನೆಯ ಪಾದದಲ್ಲಿ 30 ಲಘು + 1 ಗುರುವೂ ಇರುವುದರಿಂದ ಲಕ್ಷಣಸಂಗತಿ.

### 2. ಖಂಜಾ

| | ಲ | ಗು |
|---|---|---|
| ವಿನಿಮಯವಿಹಿತಶಕಲಯುಗಲಲಘುಲಲಿತಪದ — ವಿತತಿರಚಿತಗುಣನಿಚಯಾ \| | 30 | + 1 |
| ಶ್ರುತಿಸುಖಕೃದಿಯಮಪಿ ಜಗತಿ ಇತಿ ಜಹಿರ ಉಪಗತವತಿ ಸತಿ ಭವತಿ ಖಜಾ \|\| ೬೦ \|\| | 28 | + 1 |

ಎರಡೂ ಪಾದಗಳಲ್ಲಿ ಶಿಖಾಛಂದಸ್ಸಿನಲ್ಲಿ ಹೇಳಿರುವಂತೆ, ಲಕ್ಷಣದ ವ್ಯತ್ಯಯವು ಇರಬೇಕು. ಅಂದರೆ ಶಿಖಾದ ಮೊದಲ ಪಾದದ ಲಕ್ಷಣವು ಎರಡನೆಯ ಪಾದದಲ್ಲಿಯೂ, ಎರಡನೆಯ ಪಾದದ ಲಕ್ಷಣವು ಮೊದಲನೆಯ ಪಾದದಲ್ಲಿಯೂ ಇದ್ದಲ್ಲಿ. ಅದು ಖಂಜಾ ವೃತ್ತವೆನಿಸುತ್ತದೆ. ಅಂದರೆ

ಒಂದನೆಯ ಪಾದದಲ್ಲಿ ಮೂವತ್ತು ಲಘುಗಳು ಮತ್ತು ಕಡೆಯಲ್ಲಿ ಒಂದು ಗುರುವೂ, ಎರಡನೆಯ ಪಾದದಲ್ಲಿ ಇಪ್ಪತ್ತೆಂಟು ಲಘುಗಳು ಮತ್ತು ಕಡೆಯಲ್ಲಿ ಗುರುವೂ ಇರಬೇಕು. ಇದು ಖಂಜಾ ವೃತ್ತವಾಗುತ್ತದೆ. ಇದು ಪ್ರಥಮಾರ್ಧದ ಲಕ್ಷಣ. ಇದೇ ರೀತಿ ಉತ್ತರಾರ್ಧದಲ್ಲಿಯೂ ಅನ್ವಯಿಸಿದಲ್ಲಿ ಶ್ಲೋಕದ ನಾಲ್ಕು ಪಾದಗಳ ಲಕ್ಷಣವಾಗುತ್ತದೆ. ಪ್ರಕೃತ ಈ ಲಕ್ಷಣದ ಮೊದಲ ಪಾದದಲ್ಲಿ 30ಲಘು +1 ಗುರುವೂ, ಎರಡನೆಯ ಪಾದದಲ್ಲಿ 28ಲಘು +1ಗುರುವೂ ಇರುವುದರಿಂದ ಲಕ್ಷಣ ಸಮನ್ವಯ, ಅಂದರೆ ಖಂಜಾ ವೃತ್ತ.

### 3. ಅನಂಗಕ್ರೀಡಾ

— — — — — — — — — — — — — — — — = 16ಗುರು

ಅಷ್ಟಾವರ್ಧೇಗಾದ್ಯಭ್ಯಸ್ತಾ ಯಸ್ಯಾಃ ಸಾಽನಂಗಕ್ರೀಡೋಕ್ತಾ || ೭೧ ||

ಪಾದದ್ವಯದಲ್ಲಿ — ಎರಡರಿಂದ ಗುಣಿಸಲ್ಪಟ್ಟ ಎಂಟು ಗುರು ಅಂದರೆ ಹದಿನಾರು ಗುರ್ವಕ್ಷರಗಳಿದ್ದರೆ ಇದು ಅನಂಗಕ್ರೀಡಾವೃತ್ತ. ಇದೂ ಸಹ ಅರ್ಧಶ್ಲೋಕದ ಲಕ್ಷಣ. ಇದರ ಪುನರಾವೃತ್ತಿ ಪೂರ್ಣಶ್ಲೋಕವಾಗುತ್ತದೆ.

### 4. ಅತಿರುಚಿರಾ

ದಲಮಪರಮಪಿ ವಸುಗುಣಿತಸಲಿಲನಿಧಿಲಘು
ಕವಿರಚಿತಪದವಿತತಿ ಭವತಿ । = 32 ಲಘುಗಳು
ತ್ರಿಗುಣನವಲಘುರವಸಿತಿಗುರುರಿತಿ
ದಲಯುಗ(ಲ)ಕೃತತನುರತಿರುಚಿರಾ || ೭೨ || = 27ಲಘು + 1 ಗುರು

**ಷರಾ** : ಪಾದದಲ್ಲಿ 'ಲ' ಅಧಿಕವಾಗಿದೆ. ಇದು ಸೇರಿದರೆ 28 ಲಘು. ಆದ್ದರಿಂದ ಇದನ್ನು ಬಿಟ್ಟು ಬಿಡಬೇಕು. ಆದ್ದರಿಂದ ಆವರಣದಲ್ಲಿ ಹಾಕಿದೆ.

ವಸು = ಎಂಟು. ಸಲಿಲನಿಧಿ = ನಾಲ್ಕು, ಎಂಟರಿಂದ ಗುಣಿಸಲ್ಪಟ್ಟ ನಾಲ್ಕು - ಅಂದರೆ ಮೂವತ್ತೆರಡು ಲಘುಗಳು ಒಂದು ಮತ್ತು ಮೂರನೆಯ ಪಾದದಲ್ಲಿ; ಹಾಗೆಯೇ ಎರಡು ಮತ್ತು ನಾಲ್ಕನೆಯ ಪಾದಗಳಲ್ಲಿ ತ್ರಿಗುಣನವ 3 x 9 =27 ಲಘುಗಳೂ, ಕಡೆಯಲ್ಲಿ ಗುರುವೂ ಇರಬೇಕು. ಇದು **ಅತಿರುಚಿರಾವೃತ್ತ.**

ಕೊಟ್ಟಿರುವ ಈ ಲಕ್ಷಣದಲ್ಲಿ ಎರಡನೆಯ ಪಾದದಲ್ಲಿ ಇಪ್ಪತ್ತೆಂಟು ಲಘ್ವಕ್ಷರ ಗಳಿರುತ್ತವೆ ಆದ್ದರಿಂದ ಕಂಸದಲ್ಲಿ ಕೊಟ್ಟಿರುವ 'ಲ' ವರ್ಣವನ್ನು ತೆಗೆದು'- ದಲಯುಗಕೃತತನುರತಿರುಚಿರಾ' ಎಂದು ಹೇಳಿಕೊಳ್ಳುವುದು. ಆಗ ಇಪ್ಪತ್ತೇಳು ಲಘು, ಒಂದು ಗುರು ಆಗುತ್ತದೆ.

ಇಲ್ಲಿಗೆ ದ್ವಿಪಾತ್ ಪ್ರಕರಣ ಮುಗಿದುದು.

ಇತಿ ವೃತ್ತರತ್ನಾಕರಾಖ್ಯೇ ಛಂದಸಿ ಸಮಮಾತ್ರಾಖ್ಯೋ

ದ್ವಿತೀಯೋಽಧ್ಯಾಯಃ

◆◆◆◆◆

|| ತೃತೀಯೋಽಧ್ಯಾಯಃ || (ವರ್ಣಛಂದಸ್)

೧. ಉಕ್ತಾಯಾಮ್ (ಉಕ್ತಾಛಂದಸ್) (ಒಂದಕ್ಷರ )

1. ಶ್ರೀಃ ವೃತ್ತ

– –

ಗುಃ ಶ್ರೀಃ || ೧ ||

ಒಂದು ಪಾದದಲ್ಲಿ ಒಂದೇ ಗುರ್ವಕ್ಷರವಿದ್ದರೆ ಅದು ಶ್ರೀ (ಛಂದಸ್) ವೃತ್ತ.

೨. ಅತ್ಯುಕ್ತಾಯಾಮ್ (ಅತ್ಯುಕ್ತಾ - ಎರಡಕ್ಷರ)

1. ಸ್ತ್ರೀ ವೃತ್ತ

– –

ಗೌ ಸ್ತ್ರೀ || ೨ ||

ಪ್ರತಿಪಾದದಲ್ಲಿ ಎರಡೆರಡು ಗುರುವಿದ್ದರೆ ಅದು ಸ್ತ್ರೀ ವೃತ್ತ.

೩. ಮಧ್ಯಾಯಾಮ್ (ಮಧ್ಯಾ - ಮೂರಕ್ಷರ)

1. ನಾರೀವೃತ್ತ ಮ

– – –

ಮೋ ನಾರೀ || ೩ ||

ಪ್ರತಿ ಪಾದದಲ್ಲಿ ಮಗಣವಿದ್ದುದಾದರೆ ಅದು ನಾರೀವೃತ್ತ.

2. ಮೃಗೀ ವೃತ್ತ ರ

– U –

ರೋ ಮೃಗೀ || ೪ ||

ಪ್ರತಿ ಪಾದದಲ್ಲಿ ರಗಣವಿದ್ದರೆ, ಅದು ಮೃಗೀವೃತ್ತ.

3 . ಕೇಸಾ ವೃತ್ತ ಯ

U – –

ಯ ಕೇಸಾ || ೫ ||

ಪ್ರತಿ ಪಾದದಲ್ಲಿ ಯಗಣವಿದ್ದರೆ, ಅದು ಕೇಸಾವೃತ್ತ.

## ೪. ಪ್ರತಿಷ್ಠಾಯಾಮ್ (ನಾಲ್ಕು ಅಕ್ಷರ)

ಪ್ರತಿಷ್ಠಾ= ನಾಲ್ಕು ಅಕ್ಷರಗಳ ಪಾದ. ಇದರಲ್ಲಿ,

**1. ಕನ್ಯಾ ವೃತ್ತ**

ಮ | ಗು
– – – | –
**ಮ್ಗೌ ಚೇತ್ ಕನ್ಯಾ** || ೬ ||

ಪ್ರತಿ ಪಾದದಲ್ಲಿ ಮಗಣ, ಗುರು ಇದ್ದಲ್ಲಿ ಅದು ಕನ್ಯಾವೃತ್ತ.

**2. ವ್ರೀಡಾ ವೃತ್ತ**

ಯ | ಗು
U – – | –
ಯಗೌ ವ್ರೀಡಾ || ೭ ||

ಪ್ರತಿ ಪಾದದಲ್ಲಿ ಯಗಣ, ಗುರುವಿದ್ದರೆ ಅದು ವ್ರೀಡಾ ವೃತ್ತ.

**3. ಲಾಸಿನೀ ವೃತ್ತ**

ಜ | ಗು
U – U | –
ಜ್ಗೌ ಲಾಸಿನೀ || ೮ ||

ಪ್ರತಿಪಾದದಲ್ಲಿ ಜಗಣ, ಗುರುವಿದ್ದರೆ, ಅದು ಲಾಸಿನೀ ವೃತ್ತ.

**4. ಸುಮುಖೀ ವೃತ್ತ**

ಭ | ಗು
– U U | –
**ಭ್ಗೌ ಸುಮುಖೀ** || ೯ ||

ಪ್ರತಿಪಾದದಲ್ಲಿ ಭಗಣ, ಗುರುವಿದ್ದಲ್ಲಿ ಅದು ಸುಮುಖೀ ವೃತ್ತ.

**5. ಸುಮತಿ ವೃತ್ತ**

ಸ | ಗು
U U – | –
**ಸುಮತಿಃ ಸ್ಗೌ** || ೧೦ ||

ಪ್ರತಿ ಪಾದದಲ್ಲಿ ಸಗಣ, ಗುರುವಿದ್ದಲ್ಲಿ, ಅದು ಸುಮತಿ ವೃತ್ತ.

**6. ಸಮೃದ್ಧಿ ವೃತ್ತ**

ರ | ಗು
– U – | –
**ರ್ಗೌ ಸಮೃದ್ಧಿಃ** || ೧೧ ||

ಪ್ರತಿಪಾದದಲ್ಲಿ ರಗಣ, ಗುರುವಿದ್ದರೆ, ಅದು ಸಮೃದ್ಧಿ ವೃತ್ತ.

### (೫) ಸುಪ್ರತಿಷ್ಠಾಯಾಮ್ (ಐದು ಅಕ್ಷರ = ಸುಪ್ರತಿಷ್ಠಾ)

1. ಪಂಕ್ತಿ ವೃತ್ತ

ಭ | ಗು | ಗು
– U U | – | –
ಭ್ಗೌ ಗಿತಿ ಪಂಕ್ತಿಃ ॥ ೧ ॥

ಪ್ರತಿ ಪಾದದಲ್ಲಿ ಭಗಣ, ಗುರು, ಗುರು, ಇದ್ದಲ್ಲಿ - ಪಂಕ್ತಿ ವೃತ್ತ

2. ಪ್ರೀತಿವೃತ್ತ

ರ | ಗು ಗು
– U – | – –
ಗ್ರೌ ಗಿತಿ ಪ್ರೀತಿಃ ॥ ೨ ॥

ಪ್ರತಿಪಾದದಲ್ಲಿ ರಗಣ, ಗುರು, ಗುರು ಇದ್ದಲ್ಲಿ ಪ್ರೀತಿವೃತ್ತ.

3. ಸತೀ ವೃತ್ತ

ಜ | ಗು ಗು
U – U | – –
ಸತೀ ಜಗೌ ಗಃ ॥ ೩ ॥

ಪ್ರತಿಪಾದದಲ್ಲಿ ಜಗಣ, ಗುರು, ಗುರು ಇದ್ದಲ್ಲಿ ಸತೀ ವೃತ್ತ.

4. ಮಂದಾ ವೃತ್ತ

ತ | ಲ ಗು
– – U | U –
ಮಂದಾ ತಲಗೈಃ ॥ ೪ ॥

ಪ್ರತಿಪಾದದಲ್ಲಿ ತಗಣ, ಲಘು, ಗುರು – ಇದ್ದರೆ ಮಂದಾ ವೃತ್ತ.

### ೬. ಗಾಯತ್ರ್ಯಾಮ್ ( ಗಾಯತ್ರೀ = ಆರು ಅಕ್ಷರ)

1. ತನುಮಧ್ಯಾ ವೃತ್ತ

ತ | ಯ
– – U | U – –
ತ್ಯೌ ಸ್ತಸ್ತನುಮಧ್ಯಾ ॥ ೧ ॥

ಪ್ರತಿ ಪಾದದಲ್ಲಿ ತಗಣ, ಯಗಣಗಳಿದ್ದರೆ ತನುಮಧ್ಯಾ ವೃತ್ತ.

2. ಶಶಿವದನಾ ವೃತ್ತ

ನ | ಯ
U U U | U – –
ಶಶಿವದನಾ ನ್ಯೌ ॥ ೨ ॥

ಪ್ರತಿ ಪಾದದಲ್ಲಿ ನಗಣ, ಯಗಣಗಳಿದ್ದರೆ ಅದು ಶಶಿವದನಾ ವೃತ್ತ.

3. ಸಾವಿತ್ರೀ ವೃತ್ತ

ಮ | ಮ
– – – | – – –
ಮೌ ಸಾವಿತ್ರೀಮಾಹುಃ ॥ ೩ ॥

ಪ್ರತಿಪಾದದಲ್ಲಿ ಮಗಣ, ಮಗಣ, ಇದ್ದಲ್ಲಿ ಸಾವಿತ್ರೀ ವೃತ್ತ.

4. ನದೀ ವೃತ್ತ

| ಮ | ರ |
|---|---|
| _ _ _ | _ U _ |
| ಮ್ರೌ ಯಸ್ಯಾಃ | ಸಾ ನದೀ |

|| ೪ ||

ಪ್ರತಿಪಾದದಲ್ಲಿ ಮಗಣ, ರಗಣಗಳಿದ್ದರೆ ನದೀ ವೃತ್ತ.

5. ಮುಕುಲ ವೃತ್ತ

| ಮ | ಸ |
|---|---|
| _ _ _ | U U _ |
| ಮ್ಸೌ ಪ್ರೋಕ್ತಂ | ಮುಕುಲಮ್ |

|| ೫ ||

ಪ್ರತಿಪಾದದಲ್ಲಿ ಮಗಣ-ಸಗಣಗಳಿದ್ದಲ್ಲಿ, ಅದು ಮುಕುಲ ವೃತ್ತ.

6. ಮಾಲಿನೀ ವೃತ್ತ

| ರ | ಮ |
|---|---|
| _ U _ | _ _ _ |
| ಮಾಲಿನೀ | ರ್ಮಾಭ್ಯಾಂ ಸ್ಯಾತ್ |

|| ೬ ||

ಪ್ರತಿಪಾದದಲ್ಲಿ ರಗಣ, ಮಗಣಗಳಿದ್ದಲ್ಲಿ, ಅದು ಮಾಲಿನೀ ವೃತ್ತ.

7. ರಮಣೀ ವೃತ್ತ

| ಸ | ಸ |
|---|---|
| U U _ | UU _ |
| ಸಯುಗಂ | ರಮಣೀ |

|| ೭ ||

ಪ್ರತಿಪಾದದಲ್ಲಿ ಸಗಣ-ಸಗಣ ಇದ್ದಲ್ಲಿ ಅದು ರಮಣೀ ವೃತ್ತ

8. ವಸುಮತೀ ವೃತ್ತ

| ತ | ಸ |
|---|---|
| _ _ U | U U _ |
| ತ್ಸೌ ಚೇದ್ವ | ಸುಮತೀ |

|| ೮ ||

ಪ್ರತಿಪಾದದಲ್ಲಿ ತಗಣ, ಸಗಣ ಇದ್ದರೆ ಅದು ವಸುಮತೀ ವೃತ್ತ.

## ೭. ಉಷ್ಣಿಹಿ - (ಏಳು ಅಕ್ಷರ - ಉಷ್ಣಿಕ್)

1. ಮದಲೇಖಾ ವೃತ್ತ

| ಮ | ಸ | ಗು |
|---|---|---|
| _ _ _ | U U _ | _ |
| ಮ್ಸೌ ಗಃ ಸ್ಯಾ | ನ್ಮದಲೇ | ಖಾ |

|| ೧ ||

ಪ್ರತಿಪಾದದಲ್ಲಿ ಮಗಣ, ಸಗಣ, ಗುರು ಬಂದಲ್ಲಿ ಮದಲೇಖಾ ವೃತ್ತ.

2. ಕುಮಾರಲಲಿತಾ ವೃತ್ತ

| ಜ | ಸ | ಗು |
|---|---|---|
| U _ U | UU _ | _ |
| ಕುಮಾರ | ಲಲಿತಾ | ಜ್ಸೌಗ್ |

|| ೨ ||

ಪ್ರತಿ ಪಾದದಲ್ಲಿ ಜಗಣ, ಸಗಣ, ಗುರುವಿದ್ದಲ್ಲಿ ಕುಮಾರಲಲಿತಾ ವೃತ್ತ.

3. ಮಧುಮತೀ ವೃತ್ತ

| ನ | ಭ | ಗು |
|---|---|---|
| U U U \| _ | UU | _ |
| ಮಧುಮತೀ | ನಭಗಾಃ | |

|| ೩ ||

ಪ್ರತಿ ಪಾದದಲ್ಲಿ ನಗಣ, ಭಗಣ, ಗುರುವಿದ್ದಲ್ಲಿ ಮಧುಮತೀ ವೃತ್ತ.

4. ಹಂಸಮಾಲಾ ವೃತ್ತ

| ಸ | ರ | ಗು |
|---|---|---|
| UU _ | _ U _ | _ |
| ಸರಗಾ | ಹಂಸಮಾ | ಲಾ |

|| ೪ ||

ಪ್ರತಿ ಪಾದದಲ್ಲಿ ಸಗಣ, ರಗಣ, ಗುರುವಿದ್ದಲ್ಲಿ ಹಂಸಮಾಲಾ ವೃತ್ತ.

## ೮. ಅನುಷ್ಟುಭ್ (ಅನುಷ್ಟುಪ್ = 8 ಅಕ್ಷರ)

1. ಚಿತ್ರಪದಾ ವೃತ್ತ

| ಭ | ಭ | ಗು ಗು |
|---|---|---|
| _ U U | _ UU | _ _ |
| ಭೌಗ್ಗಿತಿ | ಚಿತ್ರಪ | ದಾ ಗಃ |

|| ೧ ||

ಹರಾ : ಗ್ಗಿ' ಎಂಬಲ್ಲಿ ಗ್+ಗ್ = ಎರಡು ಗುರು ಎಂದರ್ಥ. ಆದರೆ ಕಡೆಯಲ್ಲಿ 'ಗಃ' ಎಂದು ಕೊಟ್ಟಿರುವುದು ಮೂರು ಗುರುವಿರಬೇಕು - ಎಂದಂತಾಗುತ್ತದೆ. ಆದರೆ ಇಲ್ಲಿ ಎಂಟೇ ಅಕ್ಷರಗಳು ಇರಬೇಕಾಗಿರುವುದರಿಂದ, ಈ ಲಕ್ಷಣವನ್ನು 'ಭೌಗಿತಿ ಚಿತ್ರಪದಾ ಗಃ' ಎಂದು ಹೇಳಿಕೊಳ್ಳುವುದೇ ಸೂಕ್ತ. ಆಗ ಭ್+ಭ್, ಗ್, ಗ್ ಹೀಗೆ ಲಕ್ಷಣಸಂಗತಿ.

| ಭ | ಭ | ಗು ಗು |
|---|---|---|
| _ U U | _ UU | _ _ |
| ಭೌಗಿತಿ | ಚಿತ್ರಪ | ದಾ ಗಃ |

|| ೧ ||

ಪ್ರತಿಪಾದದಲ್ಲಿ ಭಗಣ, ಭಗಣ, ಗುರು, ಗುರು ಇದ್ದಲ್ಲಿ ಚಿತ್ರಪದಾ ವೃತ್ತ.

2. ವಿದ್ಯುನ್ಮಾಲಾ ವೃತ್ತ

| ಮ | ಮ | ಗು ಗು |
|---|---|---|
| _ _ _ | _ _ _ | _ _ |
| ಮೋ ಮೋ ಗೋ | ಗೋ ವಿದ್ಯು | ನ್ಮಾಲಾ |

|| ೨ ||

ಮಗಣ, ಮಗಣ, ಗುರು, ಗುರು ಬಂದಲ್ಲಿ ವಿದ್ಯುನ್ಮಾಲಾ ವೃತ್ತ.

3. ಮಾಣವಕವೃತ್ತ

| ಭ | ತ | ಲ ಗು |
|---|---|---|
| _ U U | _ _ U | U _ |
| ಮಾಣವ | ಕಂ ಭಾತ್ರ | ಲಗಾಃ |

|| ೩ ||

ಭಗಣ, ತಗಣ, ಲಘು, ಗುರು ಇದ್ದಲ್ಲಿ ಮಾಣವಕ ವೃತ್ತ.

4. ಹಂಸರುತ ವೃತ್ತ

| ಮ | ನ | ಗು ಗು |
|---|---|---|
| _ _ _ | UUU | _ _ |

ಮ್ನೌ ಗೌ ಹಂಸರುತಮೇತತ್ || ೪ ||

ಮಗಣ, ನಗಣ, ಗುರು, ಗುರು ಬಂದಲ್ಲಿ ಹಂಸರುತ ವೃತ್ತ.

5. ನಾಗರಕ ವೃತ್ತ

| ಭ | ರ | ಲ ಗು |
|---|---|---|
| _ UU | _ U _ | U _ |

ನಾಗರಕಂ ಭರೌಲಗೌ || ೫ ||

ಭಗಣ, ರಗಣ, ಲಘು, ಗುರು ಇದ್ದಲ್ಲಿ ನಾಗರಕ ವೃತ್ತ.

6. ನಾರಾಚಿಕಾ ವೃತ್ತ

| ತ | ರ | ಲ ಗು |
|---|---|---|
| _ _ U | _ U _ | U _ |

ನಾರಾಚಿಕಾ ತರೌ ಲಗೌ || ೬ ||

ತಗಣ, ರಗಣ, ಲಘು, ಗುರುಗಳಿದ್ದಲ್ಲಿ ನಾರಾಚಿಕಾ ವೃತ್ತ.

7. ಸಮಾನಿಕಾ ವೃತ್ತ

| ರ | ಜ | ಗು ಲ |
|---|---|---|
| _ U _ | U _ U | _ U |

ರ್ಜೌ ಸಮಾನಿಕಾ ಗಲೌ ಚ || ೭ ||

ರಗಣ, ಜಗಣ, ಗುರು, ಲಘುಗಳಿದ್ದಲ್ಲಿ ಸಮಾನಿಕಾ ವೃತ್ತ.

8. ಪ್ರಮಾಣಿಕಾ ವೃತ್ತ

| ಜ | ರ | ಲ ಗು |
|---|---|---|
| U _ U | _ U _ | U _ |

ಪ್ರಮಾಣಿಕಾ ಜರೌ ಲಗೌ || ೮ ||

ಜಗಣ, ರಗಣ, ಲಘು, ಗುರುವಿದ್ದಲ್ಲಿ ಪ್ರಮಾಣಿಕಾ ವೃತ್ತ.

9. ವಿತಾನ ವೃತ್ತ

| ಜ | ತ | ಗು ಗು |
|---|---|---|
| U _ U | _ _ U | _ _ |

ವಿತಾನಮಾಭ್ಯಾಂ ಯದನ್ಯತ್ || ೯ ||

ಸಮಾನಿಕಾ - ಪ್ರಮಾಣಿಕಾಗಳಿಂದಾದುದು ವಿತಾನ ವೃತ್ತ. ಅಂದರೆ ಜಗಣ, ತಗಣ, ಗುರು, ಗುರು ಅಥವಾ ರಗಣ, ಸಗಣ, ಲಘು, ಲಘು ಬಂದರೆ ಅದು ವಿತಾನ ವೃತ್ತ.

## ೯. ಬೃಹತ್ಯಾಮ್ (ಬೃಹತೀ = ಒಂಬತ್ತು ಅಕ್ಷರ)

1. ಹಲಮುಖೀ ವೃತ್ತ

| ರ | ನ | ಸ |
|---|---|---|
| _ U _ | UU U | UU _ |

ರಾನ್ನಸಾವಿಹ ಹಲಮುಖೀ || ೧ ||

ರಗಣ, ನಗಣ, ಸಗಣಗಳು ಬಂದಲ್ಲಿ ಹಲಮುಖೀ ವೃತ್ತ.

**2. ಭುಜಗಶಿಶುಭೃತಾ ವೃತ್ತ**

ನ | ನ | ಮ
U U U | U U U | _ _ _
ಭುಜಗಶಿಶುಭೃತಾ ನೌ ಮಃ || ೨ ||

ನಗಣ, ನಗಣ, ಮಗಣಗಳಿದ್ದರೆ ಭುಜಗಶಿಶುಭೃತಾ ವೃತ್ತ.

## ೧೦.ಪಂಕ್ತೌ (ಪಂಕ್ತಿಃ = ಹತ್ತು ಅಕ್ಷರ)

**1. ಶುದ್ಧವಿರಾಟ್ ವೃತ್ತ**

ಮ | ಸ | ಜ | ಗು
_ _ _ | U U _ | U _ U | _
ಮ್ಸೌ ಜ್ಗೌ ಶುದ್ಧವಿರಾಡಿದಂ ಮತಮ್ || ೧ ||

ಮಗಣ, ಸಗಣ, ಜಗಣ, ಗುರುವಿದ್ದಲ್ಲಿ ಶುದ್ಧವಿರಾಟ್ ವೃತ್ತ.

**2. ಪಣವ ವೃತ್ತ**

ಮ | ನ | ಯ | ಗು
_ _ _ | U U U | U _ _ | _
ಮ್ನೌ ಯ್ಗೌ ಚೇತಿ ಪಣವನಾಮೇದಮ್ || ೨ ||

ಮಗಣ, ನಗಣ, ಯಗಣ, ಗುರು- ಬಂದಲ್ಲಿ ಪಣವ ವೃತ್ತ.

**3. ಮಯೂರಸಾರಿಣೀ ವೃತ್ತ**

ರ | ಜ | ರ | ಗು
_ U _ | U _ U | _ U _ | _
ರ್ಜೌ ರಗೌ ಮಯೂರಸಾರಿಣೀ ಸ್ಯಾತ್ || ೩ ||

ರಗಣ, ಜಗಣ, ರಗಣ, ಗುರು ಇದ್ದರೆ ಮಯೂರಸಾರಿಣೀ ವೃತ್ತ.

**4. ರುಕ್ಮವತೀ ವೃತ್ತ**

ಭ | ಮ | ಸ | ಗು
_ U U | _ _ _ | U U _ | _
ಭ್ಮೌ ಸಗಯುಕ್ತೌ ರುಕ್ಮವತೀಯಮ್ || ೪ ||

ಭಗಣ, ಮಗಣ, ಸಗಣ, ಗುರುವಿದ್ದಲ್ಲಿ ರುಕ್ಮವತೀ ವೃತ್ತ.

**5. ಮತ್ತಾ ವೃತ್ತ**

ಮ | ಭ | ಸ | ಗು
_ _ _ | _ U U | U U _ | _
ಜ್ಞೇಯಾ ಮತ್ತಾ ಮಭಸಗಯುಕ್ತಾ || ೫ ||

ಮಗಣ , ಭಗಣ, ಸಗಣ, ಗುರುವಿದ್ದಲ್ಲಿ ಮತ್ತಾ ವೃತ್ತ.

**6. ಮನೋರಮಾ ವೃತ್ತ**

ನ | ರ | ಜ | ಗು
U U U | _ U _ | U _ U | _
ನರಜಗೈರ್ಭವೇನ್ಮನೋರಮಾ || ೬ ||

ನಗಣ, ರಗಣ, ಜಗಣ, ಗುರು ಬಂದಲ್ಲಿ ಮನೋರಮಾ ವೃತ್ತ.

7. **ಮೇಘವಿತಾನ ವೃತ್ತ**

| ಸ | ಸ | ಸ | ಗು |
|---|---|---|---|
| U U _ | UU _ | U U _ | _ |

ತ್ರಿಸಗಾ ಅಪಿ ಮೇಘವಿತಾನಮ್ ॥ ೭ ॥

ಸಗಣ, ಸಗಣ, ಸಗಣ, ಗುರು ಇದ್ದಲ್ಲಿ ಮೇಘವಿತಾನ ವೃತ್ತ.

8. **ಮಣಿರಾಗ ವೃತ್ತ**

| ರ | ಸ | ಸ | ಗು |
|---|---|---|---|
| _ U _ | UU_ | U U _ | _ |

ರತ್ನಸೌ ಸಗುರುರ್ಮಣಿರಾಗಃ ॥ ೮ ॥

ರಗಣ, ಸಗಣ, ಸಗಣ, ಗುರು ಇದ್ದಲ್ಲಿ ಮಣಿರಾಗ ವೃತ್ತ

9. **ಚಂಪಕಮಾಲಾ ವೃತ್ತ**

| ಭ | ಮ | ಸ | ಗು |
|---|---|---|---|
| _ U U | _ _ _ | U U _ | _ |

ಚಂಪಕಮಾಲಾ ಚೇದ್ಭಮಸಾ ಗಃ ॥ ೯ ॥

ಭಗಣ, ಮಗಣ, ಸಗಣ, ಗುರು ಬಂದಲ್ಲಿ ಚಂಪಕಮಾಲಾ ವೃತ್ತ.

10. **ತ್ವರಿತಗತಿ ವೃತ್ತ**

| ನ | ಜ | ನ | ಗು |
|---|---|---|---|
| UUU | U_U | UUU | _ |

ತ್ವರಿತಗತಿಸ್ತು ನಜನಗೈಃ ॥ ೧೦ ॥

ನಗಣ, ಜಗಣ, ನಗಣ, ಗುರುವಿದ್ದಲ್ಲಿ ತ್ವರಿತಗತಿ ವೃತ್ತ.

## ೧೧. ತ್ರಿಷ್ಟುಭಿ (ತ್ರಿಷ್ಟುಪ್= ಹನ್ನೊಂದು ಅಕ್ಷರ)

1. **ಉಪಸ್ಥಿತಾ ವೃತ್ತ**

| ತ | ಜ | ಜ | ಗು ಗು |
|---|---|---|---|
| _ _ U | U _ U | U _ U | _ _ |

ತ್ಜೌ ಜ್ಗೌ ಗುರುಣೇಯಮುಪಸ್ಥಿತೋಕ್ತಾ ॥ ೧ ॥

ತಗಣ, ಜಗಣ ಜಗಣ, ಗುರು, ಗುರು ಬಂದಲ್ಲಿ ಉಪಸ್ಥಿತಾ ವೃತ್ತ

2. **ಏಕರೂಪ ವೃತ್ತ**

| ಮ | ಸ | ಜ | ಗು ಗು |
|---|---|---|---|
| _ _ _ | U U _ | U _ U | _ _ |

ಮಃ ಸೋ ಜೋ ಗುರುಯುಗ್ಮಮೇಕರೂಪಮ್ ॥ ೨ ॥

ಮಗಣ, ಸಗಣ, ಜಗಣ, ಗುರು, ಗುರು ಬಂದಲ್ಲಿ ಏಕರೂಪ ವೃತ್ತ.

3. **ಇಂದ್ರವಜ್ರಾ ವೃತ್ತ**

| ತ | ತ | ಜ | ಗು ಗು |
|---|---|---|---|
| _ _ U | _ _ U | U _ U | _ _ |

ಸ್ಯಾದಿಂದ್ರವಜ್ರಾ ಯದಿ ತೌ ಜಗೌ ಗಃ ॥ ೩ ॥

ತಗಣ, ತಗಣ, ಜಗಣ, ಗುರು ಗುರು ಬಂದಲ್ಲಿ ಇಂದ್ರವಜ್ರಾ ವೃತ್ತ.

**4. ಉಪೇಂದ್ರವಜ್ರಾ ವೃತ್ತ**

ಜ | ತ | ಜ | ಗು ಗು
U _ U | _ _ U | U _ U | _ _
ಉಪೇಂದ್ರವಜ್ರಾ ಜತಜಾಸ್ತತೋ ಗೌ ॥ ೪ ॥

ಜಗಣ, ತಗಣ, ಜಗಣ, ಗುರು, ಗುರು ಬಂದಲ್ಲಿ ಉಪೇಂದ್ರವಜ್ರಾ ವೃತ್ತ.

**5. ಉಪಜಾತಿ ವೃತ್ತ**

ಜ | ತ | ಜ | ಗು ಗು
U _ U | _ _ U | U _ U | _ _
ಅನಂತರೋದೀರಿತಲಕ್ಷ್ಮಭಾಜೌ |

ತ | ತ | ಜ | ಗು ಗು
_ _ U | _ _ U | U _ U | _ _
ಪಾದೌ ಯದೀಯಾವುಪಜಾತಯಸ್ತಾಃ |

ತ | ತ | ಜ | ಗು ಗು
_ _ U | _ _ U | U _ U | _ _
ಇತ್ಥಂ ಕಿಲಾನ್ಯಾಸ್ವಪಿ ಮಿಶ್ರಿತಾಸು |

ಜ | ತ | ಜ | ಗು ಗು
U _ U | _ _ U | _ _ U | _ _
ಸ್ಮರಂತಿ ಜಾತಿಷ್ವಿದಮೇವ ನಾಮ ॥ ೫ ॥

ಇಂದ್ರವಜ್ರಾ ಮತ್ತು ಉಪೇಂದ್ರವಜ್ರಾ ವೃತ್ತಗಳ ಲಕ್ಷಣವೇ ಯಾವ ವೃತ್ತದ ಪಾದಗಳಲ್ಲಿ ಸಂಗತವಾಗುತ್ತದೋ, ಅದು ಉಪಜಾತಿ ವೃತ್ತವಾಗುತ್ತದೆ. ಹೀಗೆಯೇ ಇತರ ವೃತ್ತಗಳ ಸಂಸರ್ಗದಿಂದ ಈ ಉಪಜಾತಿಯಾಗುತ್ತದೆ. ಪ್ರಕೃತ ಉದಾಹರಣೆಯಲ್ಲಿ ೧-೪ನೇ ಪಾದದಲ್ಲಿ ಉಪೇಂದ್ರವಜ್ರಾವೃತ್ತದ ಲಕ್ಷಣವೂ, ೨-೩ನೇ ಪಾದದಲ್ಲಿ ಇಂದ್ರವಜ್ರಾವೃತ್ತದ ಲಕ್ಷಣವೂ ಸಂಗತವಾಗಿ ಉಪಜಾತಿಯಾಗಿದೆ.

**6. ಸುಮುಖೀ ವೃತ್ತ**

ನ | ಜ | ಜ | ಲ ಗು
UUU | U _ U | U _ U | _ _
ನಜಜಲಗೈರ್ಗದಿತಾ ಸುಮುಖೀ ॥ ೬ ॥

ನಗಣ, ಜಗಣ, ಜಗಣ, ಲಘು, ಗುರುಗಳಿದ್ದರೆ ಸುಮುಖೀ ವೃತ್ತ.

**7. ದೋಧಕ ವೃತ್ತ**

ಭ | ಭ | ಭ | ಗು ಗು
_ U U | _ U U | _ U U | _ _
ದೊಧಕವೃತ್ತಮಿದಂ ಭಭಭಾದ್ಗೌ ॥ ೭ ॥

ಭಗಣ, ಭಗಣ, ಭಗಣ, ಗುರು, ಗುರು -ಇದ್ದಲ್ಲಿ ಅದು ದೋಧಕ ವೃತ್ತ.

**8. ಶಾಲಿನೀ ವೃತ್ತ** ಮ | ತ | ತ | ಗು ಗು

_ _ _ | _ _ U | _ _ U | _ _

ಶಾಲಿನ್ಯುಕ್ತಾ ಮ್ತೌ ತಗೌ ಗೋಽಬ್ಧಿಲೋಕೈಃ || ೮ ||

ಅಬ್ಧಿ = ನಾಲ್ಕು, ಲೋಕ = ಏಳು, ಮಗಣ, ತಗಣ, ತಗಣ, ಗುರು, ಗುರು ಹೀಗೆ ಬಂದಲ್ಲಿ ಅದು ಶಾಲಿನೀವೃತ್ತವಾಗುತ್ತದೆ. ಇದರಲ್ಲಿ ನಾಲ್ಕು ಅಕ್ಷರಗಳ ಬಳಿಕ ಮತ್ತು ಏಳು ಅಕ್ಷರಗಳ ಬಳಿಕ ಯತಿಯನ್ನು ಹೇಳಬೇಕು. ಅಂದರೆ 'ಶಾಲಿನ್ಯುಕ್ತಾ' ಎಂಬಲ್ಲಿ ಮೊದಲ ಯತಿ, 'ಲೋಕೈಃ' ಎಂಬಲ್ಲಿ ಎರಡನೆಯ ಯತಿ.

**9. ವಾತೋರ್ಮೀ ವೃತ್ತ** ಮ | ಭ | ತ | ಗು ಗು

_ _ _ | _ U U | _ _ U | _ _

ವಾತೋರ್ಮೀಯಂ ಗದಿತಾ ಮ್ಭೌ ತಗೌ ಗಃ || ೯ ||

ಮಗಣ, ಭಗಣ, ತಗಣ, ಗುರು, ಗುರು -ಇದ್ದಲ್ಲಿ ವಾತೋರ್ಮೀ ವೃತ್ತ.

**10. ಭ್ರಮರವಿಲಸಿತ ವೃತ್ತ** ಮ | ಭ | ನ | ಲ ಗು

_ _ _ | _ U U | U U U | U _

ಮ್ಭೌ ನ್ಲೌ ಗಃ ಸ್ಯಾದ್ಭ್ರಮರವಿಲಸಿತಮ್ || ೧೦ ||

ಮಗಣ, ಭಗಣ, ನಗಣ, ಲಘು, ಗುರು ಬಂದಲ್ಲಿ ಭ್ರಮರವಿಲಸಿತ ವೃತ್ತ.

**11. ಶ್ರೀ ವೃತ್ತ** ಭ | ತ | ನ | ಗು ಗು

_ U U | _ _ U | U U U | _ _

ಪಂಚರಸೈಃ ಶ್ರೀ ಭ್ತನಗಗೈಃ ಸ್ಯಾತ್ || ೧೧ ||

ಭಗಣ, ತಗಣ, ನಗಣ, ಗುರು, ಗುರು ಬಂದಲ್ಲಿ ಶ್ರೀ ವೃತ್ತ. ಇದರಲ್ಲಿ, ಪಂಚ = ಐದು, ರಸ = ಆರು, ಹೀಗೆ ಐದು ಅಕ್ಷರಗಳ ಬಳಿಕ 'ಶ್ರೀ' ಎಂಬಲ್ಲಿ ಯತಿ, ಹಾಗೆಯೇ, ಆರು ಅಕ್ಷರಗಳ ಬಳಿಕ ಅಂದರೆ ಕಡೆಯಲ್ಲಿ 'ಸ್ಯಾತ್' ಎಂಬಲ್ಲಿ ಯತಿಯುಂಟು.

**12. ರಥೋದ್ಧತಾ ವೃತ್ತ** ರ | ನ | ರ | ಲ ಗು

_ U _ | U U U | _ U _ | U _

ರಾನ್ನರಾವಿಹ ರಥೋದ್ಧತಾ ಲಗೌ || ೧೨ ||

ರಗಣ, ನಗಣ, ರಗಣ, ಲಘು, ಗುರು - ಇದ್ದಲ್ಲಿ ರಥೋದ್ಧತಾ ವೃತ್ತ.

**13. ಸ್ವಾಗತಾ ವೃತ್ತ** ರ | ನ | ಭ | ಗು ಗು

_ U _ | U U U | _ U U | _ _

ಸ್ವಾಗತೇತಿ ರನಭಾದ್ಗುರುಯುಗ್ಮಮ್ || ೧೩ ||

ರಗಣ, ನಗಣ, ಭಗಣ, ಗುರು, ಗುರುಗಳಿದ್ದಲ್ಲಿ ಸ್ವಾಗತಾ ವೃತ್ತ.

**14. ಪೃಥ್ವೀ(ವೃತ್ತಾ) ವೃತ್ತ** ನ | ನ | ಸ | ಗು ಗು | ಗುಗು

UUU | UU U | UU_ | _ _ | _ || _ _

**ನನಸಗುರುರಚಿತಾ ಪೃಥ್ವೀ (ವೃತ್ತಾವಾ) || ೧೪ ||**

ನಗಣ, ನಗಣ, ಸಗಣ, ಗುರು, ಗುರು ಬಂದಲ್ಲಿ ಪೃಥ್ವೀ ವೃತ್ತ ಅಥವಾ ವೃತ್ತಾವಾಗುತ್ತದೆ

**(ತಾ ಪೃಥ್ವೀ = ವೃತ್ತಾ ವಾ)**

**15. ಸುಭದ್ರಿಕಾ (ಚಂದ್ರಿಕಾ) ವೃತ್ತ**

ನ | ನ | ರ | ಲ ಗು | | |

UUU | U U U | _ U _ | U _ | _ U | _ _ |

ನನರಲಗುರುಭಿಃ ಸುಭದ್ರಿಕಾ (ಚಂದ್ರಿಕಾ ವಾ) || ೧೫ ||

ನಗಣ, ನಗಣ, ರಗಣ, ಲಘು, ಗುರು ಇದ್ದರೆ ಸುಭದ್ರಿಕಾ ವೃತ್ತ. ಇದಕ್ಕೆ ಚಂದ್ರಿಕಾ ಎಂಬ ಹೆಸರೂ ಇರುತ್ತದೆ.

ಷರಾ : ' ಚಂದ್ರಿಕಾ ವಾ ' ಎಂಬ ಪಾಠವನ್ನು ಪರಿಗಣಿಸಿದರೆ, ಕಡೆಯ ನಾಲ್ಕು ಅಕ್ಷರಗಳಲ್ಲಿ (U _ U _) ಈ ಕ್ರಮವು ತಪ್ಪುತ್ತದೆ ಎಂಬುದು ಇಲ್ಲಿ ಗಮನಾರ್ಹ. ಆಗ ಸರಿಯಾದ ಪಾಠವೆಂದರೆ **'ನನರಲಗುರುಭಿಃ ಸುಚಂದ್ರಿಕಾ '**

**16. ವೈತಿಕಾ ವೃತ್ತ** ರ | ಜ | ರ | ಲ ಗು

_ U _ | U _ U | _ U _ | U _

**ವೈತಿಕಾ ರಜೌ ರಲೌ ಗುರುರ್ಯದಾ** || ೧೬ ||

ರಗಣ, ಜಗಣ, ರಗಣ, ಲಘು, ಗುರುವಿದ್ದಲ್ಲಿ ವೈತಿಕಾ ವೃತ್ತ.

**17. ಮೌಕ್ತಿಕಮಾಲಾ ವೃತ್ತ** ಭ | ತ | ನ | ಗು ಗು

_ U U | _ _ U | U U U | _ _

**ಮೌಕ್ತಿಕಮಾಲಾ ಯದಿ ಭತನಾದ್ಗೌ** || ೧೭ ||

ಭಗಣ, ತಗಣ, ನಗಣ, ಗುರು, ಗುರು ಬಂದಲ್ಲಿ ಮೌಕ್ತಿಕಮಾಲಾ ವೃತ್ತ.

**18. ಉಪಸ್ಥಿತ ವೃತ್ತ** ಜ | ಸ | ತ | ಗು ಗು

U _ U | U U _ | _ _ U | _ _

**ಉಪಸ್ಥಿತಮಿದಂ ಜ್ಸೌ ತಾದ್ಗಕಾರೌ** || ೧೮ ||

ಜಗಣ, ಸಗಣ, ತಗಣ, ಗುರು, ಗುರು ಇದ್ದಲ್ಲಿ ಉಪಸ್ಥಿತ ವೃತ್ತ

## ೧೨. ಜಗತ್ಯಾಮ್ (ಜಗತೀ = ಹನ್ನೆರಡು ಅಕ್ಷರ)

**1. ಚಂದ್ರವರ್ತ್ಮ ವೃತ್ತ** ರ | ನ | ಭ | ಸ

_ U _ | U UU | _ U U | U U _

**ಚಂದ್ರವರ್ತ್ಮ ಗದಿತಂ ತು ರನಭಸೈಃ ॥ ೧ ॥**

ರಗಣ, ನಗಣ, ಭಗಣ, ಸಗಣ ಇದ್ದಲ್ಲಿ ಚಂದ್ರವರ್ತ್ಮ ವೃತ್ತ.

**2. ವಂಶಸ್ಥವೃತ್ತ** ಜ | ತ | ಜ | ರ

U _ U | _ _ U | U _ U | _ U _

ಜತೌ ತು ವಂಶಸ್ಥಮುದೀರಿತಂ ಜರೌ ॥ ೨ ॥

ಜಗಣ, ತಗಣ, ಜಗಣ , ರಗಣ, ಬಂದಲ್ಲಿ ವಂಶಸ್ಥವೃತ್ತ.

**3. ಇಂದ್ರವಂಶಾವೃತ್ತ** ತ | ತ | ಜ | ರ

_ _ U | _ _ U | U _ U | _ U _

ಸ್ಯಾದಿಂದ್ರವಂಶಾ ತತಜೈರಸಂಯುತೈಃ ॥ ೩ ॥

ತಗಣ, ತಗಣ, ಜಗಣ, ರಗಣಗಳಿದ್ದಲ್ಲಿ ಇಂದ್ರವಂಶಾ ವೃತ್ತ.

**4. ತೋಟಕವೃತ್ತ** ಸ | ಸ | ಸ | ಸ

U U _ | U U _ | U U _ | U U _

**ಇಹ ತೋಟಕಮಂಬುಧಿಸೈಃ ಪ್ರಮಿತಮ್ ॥ ೪ ॥**

ಸಗಣ, ಸಗಣ, ಸಗಣ, ಸಗಣಗಳು ಬಂದಲ್ಲಿ ತೋಟಕ ವೃತ್ತ (ಅಂಬುಧಿ = 4).

**5. ದ್ರುತವಿಲಂಬಿತ ವೃತ್ತ** ನ | ಭ | ಭ | ರ

U UU | _ U U | _ U U | _ U _

**ದ್ರುತವಿಲಂಬಿತಮಾಹ ನಭೌ ಭರೌ ॥ ೫ ॥**

ನಗಣ , ಭಗಣ, ಭಗಣ, ರಗಣಗಳು ಬಂದರೆ ದ್ರುತವಿಲಂಬಿತ ವೃತ್ತ.

**6. ಪುಟವೃತ್ತ** ನ | ನ | ಮ | ಯ

UU U | UUU | _ _ _ | U _ _

**ವಸು ಯುಗವಿರತಿರ್ನೌ ಮ್ಯೌ ಪುಟೋಽಯಮ್ ॥ ೬ ॥**

ನಗಣ , ನಗಣ, ಮಗಣ, ಯಗಣ, ಬಂದಲ್ಲಿ ಪುಟ ವೃತ್ತ.

ವಸು = ಎಂಟು, ಯುಗ = ನಾಲ್ಕು, ಎಂಟನೆಯ ಅಕ್ಷರದ ಬಳಿಕ ಅಂದರೆ 'ನೌ' ಎಂಬಲ್ಲಿ ಮೊದಲ ಯತಿ, ಬಳಿಕ 'ಯಮ್' ಎಂಬಲ್ಲಿ ಎರಡನೆಯ ಯತಿ.

**7. ಪ್ರಮುದಿತವದನಾ ವೃತ್ತ**

ನ | ನ | ರ | ರ
U U U | U U U | _ U _ | _ U _

ಪ್ರಮುದಿತವದನಾ ಭವೇನ್ನೌ ರರೌ || ೭ ||

ನಗಣ, ನಗಣ, ರಗಣ, ರಗಣಗಳು ಬಂದಲ್ಲಿ ಪ್ರಮುದಿತವದನಾ ವೃತ್ತ.

**8. ಕುಸುಮವಿಚಿತ್ರಾ ವೃತ್ತ**

ನ | ಯ | ನ | ಯ
U U U | U _ _ | U U U | U _ _

ನಯಸಹಿತೌ ನ್ಯೌ ಕುಸುಮವಿಚಿತ್ರಾ || ೮ ||

ನಗಣ, ಯಗಣ, ನಗಣ, ಯಗಣಗಳಿದ್ದಲ್ಲಿ ಕುಸುಮವಿಚಿತ್ರಾ ವೃತ್ತ.

**9. ಉಜ್ಜ್ವಲಾ ವೃತ್ತ**

ನ | ನ | ಭ | ರ
U U U | U U U | _ U U | _ U _

ನನಭರಸಹಿತಾಭಿಹಿತೋಜ್ಜ್ವಲಾ || ೯ ||

ನಗಣ, ನಗಣ, ಭಗಣ, ರಗಣಗಳಿದ್ದಲ್ಲಿ ಉಜ್ಜ್ವಲಾ ವೃತ್ತ.

**10. ವೈಶ್ವದೇವೀ ವೃತ್ತ**

ಮ | ಮ | ಯ | ಯ
_ _ _ | _ _ _ | U _ _ | U _ _

ಪಂಚಾಶ್ವೈಶ್ಛಿನ್ನಾ ವೈಶ್ವದೇವೀ ಮಮೌ ಯೌ || ೧೦ ||

ಮಗಣ, ಮಗಣ, ಯಗಣ, ಯಗಣಗಳಿದ್ದಲ್ಲಿ ವೈಶ್ವದೇವಿ ವೃತ್ತ. ಪಂಚ = ಐದು, ಅಶ್ವ = ಏಳು, ಐದು ಅಕ್ಷರಗಳ ಬಳಿಕ 'ಶ್ಛಿನ್ನಾ' ಎಂಬಲ್ಲಿ ಮೊದಲ ಯತಿ, ಬಳಿಕ ಏಳು ಅಕ್ಷರಗಳ ಕಡೆಯಲ್ಲಿ 'ಯೌ' ಎಂಬಲ್ಲಿ ಯತಿ.

**11. ಜಲಧರಮಾಲಾ ವೃತ್ತ**

ಮ | ಭ | ಸ | ಮ
_ _ _ | _ U U | U U _ | _ _ _

ಅಬ್ಧ್ಯಷ್ಟಾಭಿರ್ಜಲಧರಮಾಲಾ ಮ್ಭೌ ಸ್ಮೌ || ೧೧ ||

ಮಗಣ,ಭಗಣ, ಸಗಣ, ಮಗಣಗಳಿದ್ದರೆ ಜಲಧರಮಾಲಾ ವೃತ್ತ. ಅಬ್ಧಿ=ನಾಲ್ಕು. ನಾಲ್ಕನೆಯ ಅಕ್ಷರಕ್ಕೆ 'ಭಿರ್' ಎಂಬಲ್ಲಿ ಮತ್ತು ಎಂಟನೆಯ ಅಕ್ಷರ 'ಸ್ಮೌ' ಎಂಬಲ್ಲಿ ಯತಿಯುಂಟು.

**12. ನವಮಾಲಿನೀ ವೃತ್ತ**

ನ | ಜ | ಭ | ಯ
U U U | U _ U | _ U _ | _ | U _ _

ಇಹ ನವಮಾಲಿನೀ ನಜಾಭ್ಯಾಂ ಪರೌ ಭ್ಯೌ || ೧೨ ||

ಷರಾ :- ಈ ಲಕ್ಷಣದಲ್ಲಿ ಹನ್ನೆರಡು ಅಕ್ಷರಗಳಿರಬೇಕಾಗಿತ್ತು. ಆದರೆ ಇಲ್ಲಿ ಹದಿಮೂರು ಅಕ್ಷರಗಳಿರುವುದರಿಂದ ತೊಡಕಾಗಿದೆ. ವಸ್ತುತಃ ಈ ವೃತ್ತದಲ್ಲಿ 'ನಗಣ, ಜಗಣ, ಭಗಣ, ಯಗಣ' ಗಳಿರಬೇಕು. 'ಇಹನ' ನಗಣ, ವಮಾಲಿ - ಜಗಣ - ಇಲ್ಲಿಯವರೆಗೆ ಸರಿಯಿದೆ. ಮುಂದೆ ಭಗಣ ( – UU) ಬರಬೇಕು. ಆದರೆ 'ನೀನಜಾಭ್ಯಾಂ' ಎಂದು ನಾಲ್ಕು ಅಕ್ಷರಗಳಿವೆ. 'ಪರೌ ಭ್ಯೌ'

ಎಂಬಲ್ಲಿ 'ಯಗಣ' ಏದೆ. ಸರಿಯಾಗಿದೆ. 'ನಗಣ, ಜಗಣ, ಭಗಣ, ಯಗಣ ಗಳಿದ್ದರೆ ಅದು **ನವಮಾಲಿನೀ ವೃತ್ತ'.**

ಆದ್ದರಿಂದ ಪಾಠ ಹೀಗಿರಬೇಕು.

| ನ | ಜ | ಭ | ಯ |
|---|---|---|---|
| UUU | U _ U | _UU | U _ _ |
| **ಇಹ ನವ** | **ಮಾಲಿನೀ ನಜ** | **ಭಯೈಃ ಸ್ಯಾತ್** | ॥ ೧೨ ॥ |

**13. ಪ್ರಭಾವೃತ್ತ**

| ನ | ನ | ನ | ರ |
|---|---|---|---|
| UUU | UUU | _ U _ | _ U _ |
| ಸ್ವರಶರ | ವಿರತಿ | ರ್ನನೌ | ರೌ ಪ್ರಭಾ ॥ ೧೩ ॥ |

ನಗಣ, ನಗಣ, ರಗಣ, ರಗಣಗಳಿದ್ದಲ್ಲಿ ಪ್ರಭಾ ವೃತ್ತವಾಗುತ್ತದೆ. ಸ್ವರ = ಏಳು, ಶರ = ಐದು. ಏಳು ವರ್ಣಗಳ ಬಳಿಕ 'ವಿರತಿರ್' ಎಂಬಲ್ಲಿ ಮೊದಲ ಯತಿ, ಬಳಿಕ ಐದು ವರ್ಣಗಳ ಕಡೆಯಲ್ಲಿ 'ಭಾ' ಎಂಬಲ್ಲಿ ಯತಿ.

**14. ಮಾಲತೀ ವೃತ್ತ**

| ನ | ಜ | ಜ | ರ |
|---|---|---|---|
| UUU | U _ U | U _ U | _ U _ |
| ಭವತಿ | ನಜಾವಥ | ಮಾಲ | ತೀ ಜರೌ ॥ ೧೪ ॥ |

ನಗಣ, ಜಗಣ, ಜಗಣ, ರಗಣಗಳಿದ್ದಲ್ಲಿ ಮಾಲತೀ ವೃತ್ತ.

**15. ತಾಮರಸ ವೃತ್ತ**

| ನ | ಜ | ಜ | ಯ |
|---|---|---|---|
| U U U | U _ U | U _ U | U _ _ |
| **ಇತಿ ವ** | **ದ ತಾಮ** | **ರಸಂ ನ** | **ಜಜಾದ್ ಯಃ** ॥ ೧೫ ॥ |

ನಗಣ, ಜಗಣ, ಜಗಣ, ಯಗಣಗಳಿದ್ದಲ್ಲಿ ತಾಮರಸ ವೃತ್ತ.

**16. ಜಲೋದ್ಧತಗತಿ ವೃತ್ತ**

| ಜ | ಸ | ಜ | ಸ |
|---|---|---|---|
| U _U | UU _ | U _ U | UU_ |
| **ರಸೈರ್ಜ** | **ಸಜಸಾ** | **ಜಲೋದ್ಧ** | **ತಗತಿಃ** ॥ ೧೬ ॥ |

ಜಗಣ, ಸಗಣ, ಜಗಣ, ಸಗಣಗಳಿದ್ದಲ್ಲಿ ಜಲೋದ್ಧತಗತಿ ವೃತ್ತ.

ರಸ = ಆರು. ಆರು ಅಕ್ಷರಗಳ ಬಳಿಕ 'ಜಸಾಃ' ಎಂಬಲ್ಲಿ ಯತಿ, ಪುನಃ ಕಡೆಯಲ್ಲಿ ಯತಿ.

**17. ಭುಜಂಗಪ್ರಯಾತ ವೃತ್ತ**

| ಯ | ಯ | ಯ | ಯ |
|---|---|---|---|
| U _ _ | U _ _ | U _ _ | U _ _ |
| **ಭುಜಂಗ** | **ಪ್ರಯಾತಂ** | **ಭವೇದ್ಯೈ** | **ಶ್ಚತುರ್ಭಿಃ** ॥ ೧೭ ॥ |

ಯಗಣ, ಯಗಣ, ಯಗಣ, ಯಗಣ ಗಳಿದ್ದಲ್ಲಿ ಭುಜಂಗಪ್ರಯಾತ ವೃತ್ತ.

**18. ಸ್ರಗ್ವಿಣೀ ವೃತ್ತ**

| ರ | ರ | ರ | ರ |
|---|---|---|---|
| _ U _ | _ U _ | _ U _ | _ U _ |

ರೈಶ್ಚತುರ್ಭಿರ್ಯುತಾ ಸ್ರಗ್ವಿಣೀ ಸಂಮತಾ || ೧೮ ||

ರಗಣ, ರಗಣ, ರಗಣ, ರಗಣಗಳಿದ್ದಲ್ಲಿ ಸ್ರಗ್ವಿಣೀ ವೃತ್ತ.

**19. ಪ್ರಿಯಂವದಾ ವೃತ್ತ**

| ನ | ಭ | ಜ | ರ |
|---|---|---|---|
| U U U | _ U U | U _ U | _ U _ |

ಭುವಿ ಭವೇನ್ನಭಜರೈಃ ಪ್ರಿಯಂವದಾ || ೧೯ ||

ನಗಣ, ಭಗಣ, ಜಗಣ, ರಗಣಗಳಿದ್ದಲ್ಲಿ ಪ್ರಿಯಂವದಾ ವೃತ್ತ.

**20. ಮಣಿಮಾಲಾ ವೃತ್ತ**

| ತ | ಯ | ತ | ಯ |
|---|---|---|---|
| _ _ U | U _ _ | _ _ U | U _ _ |

ತ್ಯೌ ತ್ಯೌ ಮಣಿಮಾಲಾ ಛಿನ್ನಾ ಗುಹವಕ್ತ್ರೈಃ || ೨೦ ||

ತಗಣ, ಯಗಣ, ತಗಣ, ಯಗಣಗಳಿದ್ದರೆ ಮಣಿಮಾಲಾ ವೃತ್ತ. ಗುಹ = ಷಣ್ಮುಖ ಅವನ, ವಕ್ತ್ರ = ಮುಖ. ಅಂದರೆ ಆರನೆಯ ಅಕ್ಷರದಲ್ಲಿ 'ಮಾಲಾ' ಎಂಬಲ್ಲಿ ಯತಿ, ಹಾಗೆಯೇ ಕಡೆಯಲ್ಲಿ ಯತಿ.

**21. ಲಲಿತಾ ವೃತ್ತ**

| ತ | ಭ | ಜ | ರ |
|---|---|---|---|
| _ _ U | _ U U | U _ U | _ U _ |

ಧೀರೈರಭಾಣಿ ಲಲಿತಾ ತಭೌ ಜರೌ || ೨೧ ||

ತಗಣ, ಭಗಣ, ಜಗಣ, ರಗಣಗಳಿದ್ದಲ್ಲಿ ಅದು ಲಲಿತಾ ವೃತ್ತ.

**22. ಪ್ರಮಿತಾಕ್ಷರಾ ವೃತ್ತ**

| ಸ | ಜ | ಸ | ಸ |
|---|---|---|---|
| U U _ | U _ U | U U _ | U U _ |

ಪ್ರಮಿತಾಕ್ಷರಾ ಸಜಸಸೈರುದಿತಾ || ೨೨ ||

ಸಗಣ, ಜಗಣ, ಸಗಣ, ಸಗಣಗಳಿದ್ದರೆ ಪ್ರಮಿತಾಕ್ಷರಾ ವೃತ್ತ.

## ೧೩. ಅತಿಜಗತ್ಯಾಮ್ (ಅತಿಜಗತೀ = ಹದಿಮೂರು ಅಕ್ಷರ)

**1. ಕ್ಷಮಾ ವೃತ್ತ**

| ನ | ನ | ತ | ತ | ಗು |
|---|---|---|---|---|
| U U U | U U U | _ _ U | _ _ U | _ |

ತುರಗರಸಯತಿರ್ನೌ ತತೌ ಗಃ ಕ್ಷಮಾ || ೧ ||

ನಗಣ, ನಗಣ, ತಗಣ, ತಗಣ, ಗುರುವಿದ್ದರೆ ಕ್ಷಮಾ ವೃತ್ತ. ತುರಗ = ಏಳು , ರಸ = ಆರು,

ಅಂದರೆ ಏಳನೆಯ ಅಕ್ಷರದ ಬಳಿಕ 'ಯತಿರ್' ಎಂಬಲ್ಲಿ ಮೊದಲನೆಯ ಯತಿ. ಬಳಿಕ ಆರನೆಯ ಅಕ್ಷರದ ಕಡೆಯಲ್ಲಿ 'ಮಾ' ಎಂಬಲ್ಲಿ ಯತಿ.

**2. ಪ್ರಹರ್ಷಿಣೀ ವೃತ್ತ**

| ಮ | ನ | ಜ | ರ | ಗು |
|---|---|---|---|---|
| _ _ _ | U UU | U _ U | _ U _ | _ |

ಮ್ನೌ ಜ್ರೌ ಗಸ್ತ್ರಿದಶಯತಿಃ ಪ್ರಹರ್ಷಿಣೀಯಮ್ ‖ ೨ ‖

ಮಗಣ, ನಗಣ, ಜಗಣ, ರಗಣ, ಗುರುವಿದ್ದಲ್ಲಿ ಪ್ರಹರ್ಷಿಣೀ ವೃತ್ತ. ಮೂರನೆಯ ಅಕ್ಷರದ ಬಳಿಕ 'ಗಸ್' ಎಂಬಲ್ಲಿ ಮೊದಲ ಯತಿ. ಬಳಿಕ ಹತ್ತನೆಯ ಅಕ್ಷರದ ಕಡೆಯಲ್ಲಿ 'ಯಮ್' ಎಂಬಲ್ಲಿ ಯತಿ.

**3. ರುಚಿರಾ ವೃತ್ತ**

| ಜ | ಭ | ಸ | ಜ | ಗು |
|---|---|---|---|---|
| U _ U | _ U U | U U _ | U _ U | _ |
| ಚತುರ್ಗ್ರ | ಹೈರ್ಯತಿ | ರುಚಿರಾ | ಜಭೌ ಸ್ಜ | ಗಾಃ ‖ ೩ ‖ |

ಜಗಣ, ಭಗಣ, ಸಗಣ, ಜಗಣ, ಗುರುವಿದ್ದರೆ ರುಚಿರಾ ವೃತ್ತ. ನಾಲ್ಕನೆಯ ಅಕ್ಷರದ ಬಳಿಕ 'ಹೈರ್' ಎಂಬಲ್ಲಿ ಯತಿ, ಮತ್ತು ಗ್ರಹ = ಒಂಬತ್ತು 'ಗಾಃ' ಎಂಬಲ್ಲಿ ಯತಿ.

**4. ಮತ್ತಮಯೂರ ವೃತ್ತ**

| ಮ | ತ | ಯ | ಸ | ಗು |
|---|---|---|---|---|
| _ _ _ | _ _ U | U _ _ | U U _ | _ |

ವೇದೈರಂಧ್ರೈರ್ಮ್ತೌ ಯಸಗಾ ಮತ್ತಮಯೂರಮ್ ‖ ೪ ‖

ಮಗಣ, ತಗಣ, ಯಗಣ, ಸಗಣ, ಗುರುವಿದ್ದರೆ ಮತ್ತಮಯೂರ ವೃತ್ತ. ವೇದ = ನಾಲ್ಕು, ರಂಧ್ರ = ಒಂಭತ್ತು. ನಾಲ್ಕನೆಯ ಅಕ್ಷರದ ಬಳಿಕ 'ದ್ರೈರ್' ಎಂಬಲ್ಲಿ, ಹಾಗೂ ಒಂಬತ್ತನೆಯ ಅಕ್ಷರದ ಕಡೆಯಲ್ಲಿ 'ರಮ್' ಎಂಬಲ್ಲಿ ಯತಿ.

**5. ಚಂಚರೀಕಾವಲೀ ವೃತ್ತ**

| ಯ | ಮ | ರ | ರ | ಗು |
|---|---|---|---|---|
| U _ _ | _ _ _ | _ U _ | _ U _ | _ |
| ಯಮೌ ರೌ | ವಿಖ್ಯಾತಾ | ಚಂಚರೀ | ಕಾವಲೀ | ಗಃ ‖ ೫ ‖ |

ಯಗಣ , ಮಗಣ, ರಗಣ, ರಗಣ, ಗುರುವಿದ್ದರೆ ಚಂಚರೀಕಾವಲೀ ವೃತ್ತ.

**6. ಮಂಜುಭಾಷಿಣೀ ವೃತ್ತ**

| ಸ | ಜ | ಸ | ಜ | ಗು |
|---|---|---|---|---|
| UU _ | U _ U | U U _ | U _ U | _ |
| ಸಜಸಾ | ಜಗೌ ಭ | ವತಿ ಮಂ | ಜುಭಾಷಿ | ಣೀ ‖ ೬ ‖ |

ಸಗಣ, ಜಗಣ, ಸಗಣ, ಜಗಣ, ಗುರು ಬಂದರೆ ಮಂಜುಭಾಷಿಣೀ ವೃತ್ತ.

7. ಚಂದ್ರಿಕಾ ವೃತ್ತ

| ನ | ನ | ತ | ರ | ಗು |
|---|---|---|---|---|
| UUU | UUU | _ _ U | _ U _ | _ |

ನನತರಗುರುಭಿಶ್ಚಂದ್ರಿಕಾಶ್ವಷಡ್ಭಿಃ ॥ ೭ ॥

ನಗಣ, ನಗಣ, ತಗಣ, ರಗಣ, ಗುರುವಿದ್ದರೆ ಚಂದ್ರಿಕಾ ವೃತ್ತ.
ಅಶ್ವ = ಏಳು. ಏಳನೆಯ ಅಕ್ಷರದ ಬಳಿಕ 'ಭಿಶ್' ಎಂಬಲ್ಲಿ, ಹಾಗೂ ಆರನೆಯ ಅಕ್ಷರದ ಕಡೆಯಲ್ಲಿ 'ಡ್ಭಿಃ' ಎಂಬಲ್ಲಿ ಯತಿ.

## ೧೪. ಶಕ್ವರ್ಯಾಮ್ (ಶಕ್ವರೀ = ಹದಿನಾಲ್ಕು)

1. ಅಸಂಬಾಧಾ ವೃತ್ತ

| ಮ | ತ | ನ | ಸ | ಗು ಗು |
|---|---|---|---|---|
| _ _ _ | _ _ U | UUU | UU _ | _ _ |

ಮ್ತೌ ನ್ಸೌ ಗಾವಕ್ಷಗ್ರಹವಿರತಿರಸಂಬಾಧಾ ॥ ೧ ॥

ಮಗಣ, ತಗಣ, ನಗಣ, ಸಗಣ, ಗುರು, ಗುರುವಿದ್ದರೆ ಅಸಂಬಾಧಾ ವೃತ್ತ. ಅಕ್ಷ = ಐದು, ಗ್ರಹ = ಒಂಭತ್ತು, ಐದನೆಯ ಅಕ್ಷರದ ಬಳಿಕ 'ಕ್ಷ' ಎಂಬಲ್ಲಿ ಮತ್ತು ಒಂಭತ್ತನೆಯ ಅಕ್ಷರದ ಬಳಿಕ 'ಧಾ' ಎಂಬಲ್ಲಿ ಯತಿ.

2. ಅಪರಾಜಿತಾ ವೃತ್ತ

| ನ | ನ | ರ | ಸ | ಲ ಗು |
|---|---|---|---|---|
| UUU | UU U | _ U _ | UU _ | U _ |

ನನರಸಲಘುಗ್ಯೈಃ ಸ್ವರೈರಪರಾಜಿತಾ ॥ ೨ ॥

ನಗಣ, ನಗಣ, ರಗಣ, ಸಗಣ, ಲಘು , ಗುರುವಿದ್ದರೆ ಅಪರಾಜಿತಾ ವೃತ್ತ. ಸ್ವರ = ಸಪ್ತ. ಏಳನೆಯ ಅಕ್ಷರದ ಬಳಿಕ ' –ಗ್ಯೈಃ ' ಎಂಬಲ್ಲಿ ಹಾಗೂ ಕಡೆಯಲ್ಲಿ ಯತಿ.

3. ಪ್ರಹರಣಕಲಿಕಾ ವೃತ್ತ

| ನ | ನ | ಭ | ನ | ಲಗು |
|---|---|---|---|---|
| UUU | UUU | _ U U | UUU | U _ |

ನನಭನಲಗಿತಿ ಪ್ರಹರಣಕಲಿಕಾ ॥ ೩ ॥

ನಗಣ, ನಗಣ, ಭಗಣ, ನಗಣ, ಲಘು, ಗುರುವಿದ್ದರೆ ಪ್ರಹರಣಕಲಿಕಾ ವೃತ್ತ.

4. ವಸಂತತಿಲಕಾ ವೃತ್ತ

| ತ | ಭ | ಜ | ಜ | ಗು ಗು |
|---|---|---|---|---|
| _ _ U | _ UU | U _ U | U _ U | _ _ |

ಉಕ್ತಾ ವಸಂತತಿಲಕಾ ತಭಜಾಜಗೌ ಗಃ ॥ ೪ ॥

ತಗಣ, ಭಗಣ, ಜಗಣ, ಜಗಣ, ಗುರು, ಗುರುವಿದ್ದರೆ ವಸಂತತಿಲಕಾ ವೃತ್ತ.

5. ಸಿಂಹೋನ್ನತಾ ವೃತ್ತ

| ತ | ಭ | ಜ | ಜ | ಗು ಗು |
|---|---|---|---|---|
| _ _ U | _ U U | U _ U | U _ U | _ _ |

ಸಿಂಹೋನ್ನತೇತಿ ಗದಿತಾ ಮುನಿಕಾಶ್ಯಪೇನ || ೫ ||

ಈ ಮೇಲ್ಕಂಡ ವಂಸತತಿಲಕಾವೃತ್ತವನ್ನೇ ಕಾಶ್ಯಪಮುನಿಯು 'ಸಿಂಹೋನ್ನತಾ' ಎಂದು ಕರೆದಿದ್ದಾನೆ.

6. ಇಂದುವದನಾ ವೃತ್ತ

| ಭ | ಜ | ಸ | ನ | ಗು ಗು |
|---|---|---|---|---|
| _ U U | U _ U | U U _ | U U U | _ _ |

ಇಂದುವದನಾ ಭಜಸನೈಃ ಸಗುರುಯುಗ್ಮೈಃ || ೬ ||

ಭಗಣ, ಜಗಣ, ಸಗಣ, ನಗಣ, ಗುರು, ಗುರು ಇದ್ದರೆ ಇಂದುವದನಾ ವೃತ್ತ

7. ಅಲೋಲಾ ವೃತ್ತ

| ಮ | ಸ | ಮ | ಭ | ಗು ಗು |
|---|---|---|---|---|
| _ _ _ | U U _ | _ _ _ | _ U U | _ _ |

ದ್ವಿಃ ಸಪ್ತಚ್ಛಿದಲೋಲಾ ಮ್ಸೌ ಮ್ಭೌ ಗೌ ಚರಣೇ ಚೇತ್ || ೭ ||

ಮಗಣ, ಸಗಣ, ಮಗಣ, ಭಗಣ, ಗುರು , ಗುರುವಿದ್ದಲ್ಲಿ ಅಲೋಲಾ ವೃತ್ತ. ಏಳು – ಏಳು ಅಕ್ಷರಗಳ ಕಡೆಯಲ್ಲಿ ಯತಿ. ' –ಲಾ ' ಚೇತ್ ' – ಎಂಬಲ್ಲಿ ಯತಿ.

## ೧೫. ಅತಿಶಕ್ವರ್ಯಾಮ್ (ಅತಿಶಕ್ವರೀ = ಹದಿನೈದು)

1. ಶಶಿಕಲಾ ವೃತ್ತ

| ನ | ನ | ನ | ನ | ಸ |
|---|---|---|---|---|
| U U U | U U U | U U U | U U U | U U _ |

ದ್ವಿಹತಹಯಲಘುರಥಗಿತಿ ಶಶಿಕಲಾ || ೮ ||

ಹಯ= ಏಳು, ದ್ವಿಹತ= ದ್ವಿಗುಣಿತ, ಹದಿನಾಲ್ಕು ಲಘುಗಳು ಮತ್ತು ಕಡೆಯಲ್ಲಿ ಗುರುವೂ ಇದ್ದಲ್ಲಿ ಶಶಿಕಲಾ ವೃತ್ತ.

2. ಸ್ರಗ್‌ವೃತ್ತ

| ನ | ನ | ನ | ನ | ಸ |
|---|---|---|---|---|
| U U U | U U U | U U U | U U U | U U _ |

ಸ್ರಗಿತಿ ಭವತಿ ರಸನವಕಯತಿರಿಯಮ್ || ೨ ||

ಇದೇ ಶಶಿಕಲಾವೃತ್ತದಲ್ಲಿ, ರಸ = ಆರು, ನವ = ಒಂಬತ್ತು, ಅಂದರೆ ಆರನೆಯ ಅಕ್ಷರದ ಬಳಿಕ '-ತಿ' ಎಂಬಲ್ಲಿ, ಹಾಗೂ ಒಂಭತ್ತನೆಯ ಅಕ್ಷರದ ಬಳಿಕ '-ಯಮ್' ಎಂಬಲ್ಲಿ ಯತಿ- ಬಂದಲ್ಲಿ, ಅದನ್ನು 'ಸ್ರಗ್‌ವೃತ್ತ' ಎಂದು ಹೇಳಲಾಗುತ್ತದೆ.

**3. ಮಣಿಗಣಕಿರಣ ವೃತ್ತ**

| ನ | ನ | ನ | ನ | ಸ |
|---|---|---|---|---|
| U U U | U U U | U U U | U U U | U U _ |

ವಸು ಮುನಿಯತಿರಿಹ ಮಣಿಗಣಕಿರಣಃ ॥ ೩ ॥

ಇದೇ ಶಶಿಕಲಾವೃತ್ತದಲ್ಲಿ ವಸು= ಎಂಟು, ಮುನಿ = ಏಳು, ಅಂದರೆ ಎಂಟನೆಯ ಅಕ್ಷರದ ಬಳಿಕ '_ ರಿಹ ' ಎಂಬಲ್ಲಿ, ಹಾಗೂ ಏಳನೆಯ ಅಕ್ಷರದ ಬಳಿಕ 'ಕಿರಣಃ' ಎಂಬಲ್ಲಿ ಯತಿಯನ್ನು ಹೇಳಿಕೊಂಡರೆ, ಅದು ಮಣಿಗಣಕಿರಣ ವೃತ್ತವೆನಿಸುತ್ತದೆ.

**4. ಮಾಲಿನೀ ವೃತ್ತ**

| ನ | ನ | ಮ | ಯ | ಯ |
|---|---|---|---|---|
| UUU | U U U | _ _ _ | U _ _ | U _ _ |

ನನಮಯಯಯುತೇಯಂ ಮಾಲಿನೀ ಭೋಗಿಲೋಕೈಃ ॥ ೪ ॥

ನಗಣ, ನಗಣ, ಮಗಣ, ಯಗಣ, ಯಗಣವಿದ್ದರೆ ಅದು ಮಾಲಿನೀ ವೃತ್ತ. ಭೋಗಿ = (ಅಷ್ಟ) ಎಂಟು, ಲೋಕ = ಏಳು, ಅಂದರೆ ಎಂಟನೆಯ ಅಕ್ಷರದ ಬಳಿಕ '-ಯಂ' ಎಂಬಲ್ಲಿ, ಮತ್ತು ಏಳನೆಯ ಅಕ್ಷರದ ಬಳಿಕ '-ಕೈಃ' ಎಂಬಲ್ಲಿ ಯತಿ.

**5. ಪ್ರಭದ್ರಕ ವೃತ್ತ**

| ನ | ಜ | ಭ | ಜ | ರ |
|---|---|---|---|---|
| UUU | U _ U | _ UU | U _ U | _ U _ |

ಭವತಿ ನಜೌ ಭಜೌರಸಹಿತೌ ಪ್ರಭದ್ರಕಮ್ ॥ ೫ ॥

ನಗಣ, ಜಗಣ, ಭಗಣ, ಜಗಣ, ರಗಣವಿದ್ದಲ್ಲಿ ಪ್ರಭದ್ರಕ ವೃತ್ತ.

**6. ಅತಿರೇಖಾ ವೃತ್ತ**

| ಸ | ಜ | ನ | ನ | ಯ |
|---|---|---|---|---|
| UU _ | U _ U | UUU | UUU | U _ _ |

ಸಜನಾನಯೌ ಶರದಶಯತಿರತಿರೇಖಾ ॥ ೬ ॥

ಸಗಣ, ಜಗಣ, ನಗಣ, ನಗಣ, ಯಗಣಗಳಿದ್ದಲ್ಲಿ ಅತಿರೇಖಾ ವೃತ್ತ. ಶರ = ಪಂಚ, ದಶ = ಹತ್ತು. ಐದನೆಯ ಅಕ್ಷರದ ಬಳಿಕ '-ಯೌ' ಎಂಬಲ್ಲಿ ಮತ್ತು ಹತ್ತನೆಯ ಅಕ್ಷರದ ಬಳಿಕ '- ಖಾ' ಎಂಬಲ್ಲಿ ಯತಿ.

7. ಚಂದ್ರಲೇಖಾ ವೃತ್ತ

| ಮ | ರ | ಮ | ಯ | ಯ |
|---|---|---|---|---|
| _ _ _ | _ U _ | _ _ _ | U _ _ | U _ _ |

ಮ್ರೌ ಮ್ಯೌ ಯಾಂತೌ ಭವೇತಾಂ ಸಪ್ತಾಷ್ಟಭಿಶ್ಚಂದ್ರಲೇಖಾ || ೩ ||

ಮಗಣ, ರಗಣ, ಮಗಣ, ಯಗಣ, ಯಗಣಗಳು ಇದ್ದಲ್ಲಿ ಚಂದ್ರಲೇಖಾ ವೃತ್ತ. ಸಪ್ತ = ಏಳು, ಅಷ್ಟ = ಎಂಟು. ಏಳನೆಯ ಅಕ್ಷರದ ಬಳಿಕ 'ತಾಂ' ಎಂಬಲ್ಲಿ ಮತ್ತು ಎಂಟನೆಯ ಅಕ್ಷರದ ಬಳಿಕ 'ಖಾ' ಎಂಬಲ್ಲಿ ಯತಿ.

## ೧೬. ಅಷ್ಟೌ - (ಅಷ್ಟಿಃ = ಹದಿನಾರು ಅಕ್ಷರ)

1. ಋಷಭಗಜವಿಲಸಿತ ವೃತ್ತ

| ಭ | ರ | ನ | ನ | ನ | ಗು |
|---|---|---|---|---|---|
| _ U U | _ U _ | U U U | U U U | U U U | _ |

ಭ್ರೌ ತ್ರಿನಗಾಃ ಸ್ವರಾಃ ಋಷ್ಯಷಭಗಜವಿಲಸಿತಮ್ || ೧ ||

ಭಗಣ, ರಗಣ, ನಗಣ, ನಗಣ, ನಗಣ, ಗುರುವಿದ್ದರೆ ಅದು ಋಷಭಗಜವಿಲಸಿತ ವೃತ್ತ. ಸ್ವರ = ಏಳು, ಋ = (ಗ್ರಹ) ನವ. ಏಳನೆಯ ಅಕ್ಷರದ ಬಳಿಕ- ಋ (ಮ್) ಎಂಬಲ್ಲಿ, ಒಂಬತ್ತನೆಯ ಅಕ್ಷರದ ಬಳಿಕ '- ತಮ್ ' ಎಂಬಲ್ಲಿ ಯತಿ.

2. ವಾಣಿನೀ ವೃತ್ತ

| ನ | ಜ | ಭ | ಜ | (ತ) (ರ) | ಗು |
|---|---|---|---|---|---|
| U U U | U _ U | _ U U | U _ U | _ _ U | _ |

ನಜಭಜತ್ಕೈಃ ಸದಾ ಭವತಿ ವಾಣಿನೀ ಗಾನ್ವಿತ್ಕೈಃ (ಗಯುಕ್ಕೈಃ) || ೨ ||

**ಷರಾ** :- ಈ ಲಕ್ಷಣದಲ್ಲಿ ಐದನೆಯ ಗಣವು 'ರಗಣ' ವಾಗಿರಬೇಕೆಂದು 'ರೈಃ' ಎಂಬ ಅಕ್ಷರದಿಂದ ಸೂಚಿಸಲಾಗಿದೆ. ಆದರೆ ಇಲ್ಲಿಯ ಐದನೇ ಗಣವು 'ತಗಣ' ವಾಗಿದೆ. 'ನಜಭಜರೈಃ' ಎಂಬಲ್ಲಿ 'ನಜಭಜತ್ಕೈಃ' ಎಂಬ ಪಾಠಾಂತರವಿರುತ್ತದೆ. ಆದ್ದರಿಂದ (೧) ರಗಣ ಅಥವಾ (೨) ತಗಣ ಈ ಎರಡು ಗಣಗಳ ಪೈಕಿ ಯಾವುದಾದರೂ ಗಣವಿರಬಹುದೆಂದು ಊಹಿಸಬಹುದಾಗಿದೆ. **ಗಯುಕ್ಕೈಃ** ಎಂಬ ಪಾಠಾಂತರದಿಂದ ರಗಣವಾಗುತ್ತದೆ. ನಗಣ, ಜಗಣ, ಭಗಣ, ಜಗಣ, ರಗಣ (ತಗಣ) ಗುರುವಿದ್ದಲ್ಲಿ ವಾಣಿನೀ ವೃತ್ತ.

## (೧೭) ಅತ್ಯಷ್ಟೌ (ಅತ್ಯಷ್ಟಿ= ಹದಿನೇಳು ಅಕ್ಷರ)

1. ಶಿಖರಿಣೀ ವೃತ್ತ

| ಯ | ಮ | ನ | ಸ | ಭ | ಲಗು |
|---|---|---|---|---|---|
| U _ _ | _ _ _ | U U U | U U _ | _ U U | U _ |

ರಸೈರುದ್ರೈಶ್ಛಿನ್ನಾ ಯಮನಸಭಲಾಗಃ ಶಿಖರಿಣೀ || ೩ ||

ಯಗಣ, ಮಗಣ, ನಗಣ, ಸಗಣ, ಭಗಣ, ಲಘು, ಗುರುವಿದ್ದರೆ ಶಿಖರಿಣೀ ವೃತ್ತ. ರಸ = ಆರು, ರುದ್ರ = ಏಕಾದಶ. ಆರನೆಯ ಅಕ್ಷರದ '–ನ್ನಾ' ಎಂಬಲ್ಲಿ, ಹನ್ನೊಂದನೆಯ ಅಕ್ಷರದ ಬಳಿಕ '-ಣೀ' ಎಂಬಲ್ಲಿ ಯತಿ.

**2. ಪೃಥ್ವೀ ವೃತ್ತ**

| ಜ | ಸ | ಜ | ಸ | ಯ | ಲ ಗು |
|---|---|---|---|---|---|
| U _ U | U U _ | U _ U | U U _ | U _ _ | U _ |

ಜಸೌ ಜಸಯಲಾ ವಸುಗ್ರಹಯತಿಶ್ಚ ಪೃಥ್ವೀ ಗುರುಃ ॥ ೨ ॥

ಜಗಣ, ಸಗಣ, ಜಗಣ, ಸಗಣ, ಯಗಣ, ಲಘು, ಗುರು ಬಂದಲ್ಲಿ ಪೃಥ್ವೀ ವೃತ್ತ. ವಸು = ಎಂಟು, ಗ್ರಹ = ಒಂಭತ್ತು, ಎಂಟನೆಯ ಅಕ್ಷರದ ಬಳಿಕ '- ವಸು' ಎಂಬಲ್ಲಿ, ಬಳಿಕ ಒಂಭತ್ತನೆಯ ಅಕ್ಷರದ ಬಳಿಕ '- ಗುರುಃ' ಎಂಬಲ್ಲಿ ಯತಿ.

**3. ವಂಶಪತ್ರಪತಿತ ವೃತ್ತ**

| ಭ | ರ | ನ | ಭ | ನ | ಲ ಗು |
|---|---|---|---|---|---|
| _ U U | _ U _ | U U U | _ U U | U U U | U _ |

ದಿಙ್ಮುನಿ ವಂಶಪತ್ರಪತಿತಂ ಭರನಭನಲಗೈಃ ॥ ೩ ॥

ಭಗಣ, ರಗಣ, ನಗಣ, ಭಗಣ, ನಗಣ, ಲಘು, ಗುರುಗಳಿದ್ದಲ್ಲಿ ವಂಶಪತ್ರಪತಿತ ವೃತ್ತ. ದಿಕ್ = ಹತ್ತು, ಮುನಿ = ಏಳು. ಹತ್ತು ಅಕ್ಷರಗಳ ಬಳಿಕ '- ತಂ' ಎಂಬಲ್ಲಿ, ಪುನಃ ಏಳನೆಯ ಅಕ್ಷರದ ಬಳಿಕ '-ಗೈಃ' ಎಂಬಲ್ಲಿ ಯತಿ.

**4. ಹರಿಣೀ ವೃತ್ತ**

| ನ | ಸ | ಮ | ರ | ಸ | ಲಗು |
|---|---|---|---|---|---|
| U U U | U U _ | _ _ _ | _ U _ | U U _ | U _ |

ರಸಯುಗಹಯೈರ್ನ್ಸೌ ಮ್ರೌ ಸ್ಲೌಗೋ ಯದಾ ಹರಿಣೀ ತದಾ ॥ ೪ ॥

ನಗಣ, ಸಗಣ, ಮಗಣ, ರಗಣ, ಸಗಣ, ಲಘು, ಗುರುಗಳಿದ್ದರೆ ಅದು ಹರಿಣೀ ವೃತ್ತ. ರಸ = ಆರು, ಯುಗ= ನಾಲ್ಕು, ಹಯ = ಏಳು, ಆರನೆಯ ಅಕ್ಷರದ ಬಳಿಕ '- ಯೈರ್' ಎಂಬಲ್ಲಿ, ನಾಲ್ಕನೆಯ ಅಕ್ಷರದ ನಂತರ '- ಗೋ' ಎಂಬಲ್ಲಿ, ಮತ್ತು ಏಳನೆಯ ಅಕ್ಷರದ ಬಳಿಕ '- ದಾ' ಎಂಬಲ್ಲಿ ಹೀಗೆ, ಮೂರು ಯತಿ.

**5. ಮಂದಾಕ್ರಾಂತಾ ವೃತ್ತ**

| ಮ | ಭ | ನ | ತ | ತ | ಗು ಗು |
|---|---|---|---|---|---|
| _ _ _ | _ U U | U U U | _ _ U | _ _ U | _ _ |

ಮಂದಾಕ್ರಾಂತಾ ಜಲಧಿಷಡಗೈರ್ಮ್ಭೌ ನತೌ ತಾದ್ಗುರೂ ಚೇತ್ ॥ ೫ ॥

ಮಗಣ, ಭಗಣ, ನಗಣ, ತಗಣ, ತಗಣ, ಗುರು, ಗುರುಗಳಿದ್ದರೆ ಮಂದಾಕ್ರಾಂತಾ ವೃತ್ತ. ಜಲಧಿ = ನಾಲ್ಕು, ಷಟ್= ಆರು, ಅಗ = ಏಳು, ನಾಲ್ಕನೆಯ ಅಕ್ಷರದ ಬಳಿಕ '-ತಾ', ನಂತರ ಆರನೆಯ ಅಕ್ಷರದ ಬಳಿಕ '-ಸ್ಯೈರ್' ಮತ್ತು ಏಳನೆಯ ಅಕ್ಷರದ ಬಳಿಕ '- ಚೇತ್' ಎಂಬಲ್ಲಿ ಯತಿ.

**6. ಕುಟಕ ವೃತ್ತ**

| ನ | ಜ | ಭ | ಜ | ಜ | ಲ ಗು |
|---|---|---|---|---|---|
| U U U | U _ U | _ U U | U _ U | U _ U | U _ |

ಹಯದಶಭಿರ್ನಜೌ ಭಜಜಲಾಗುರು ತತ್ಕುಟಕಮ್ ॥ ೬ ॥

ನಗಣ, ಜಗಣ, ಭಗಣ, ಜಗಣ, ಜಗಣ, ಲಘು, ಗುರುವಿದ್ದರೆ ಕುಟಕ ವೃತ್ತ. ಹಯ = ಏಳು, ದಶ = ಹತ್ತು, ಏಳನೆಯ ಅಕ್ಷರದ ಬಳಿಕ '- ಜೌ' ಎಂಬಲ್ಲಿ, ಮತ್ತು ಹತ್ತನೆಯ ಅಕ್ಷರದ ಬಳಿಕ '-ಕಮ್' ಎಂಬಲ್ಲಿ ಯತಿ.

**7. ಕೋಕಿಲಕ ವೃತ್ತ**

| ನ | ಜ | ಭ | ಜ | ಜ | ಲ ಗು |
|---|---|---|---|---|---|
| U U U | U _ U | _ U U | U _ U | U _ U | U _ |

**ಮುನಿಗುಹಕಾರ್ಣವೈಃ ಕೃತಯತಿಂ ವದ ಕೋಕಿಲಕಮ್** ॥ ೭ ॥

ನಗಣ, ಜಗಣ, ಭಗಣ, ಜಗಣ, ಜಗಣ, ಲಘು, ಗುರುಗಳನ್ನುಳ್ಳ ಈ ಮೇಲಿನ ಕುಟಕವೇ, ಮುನಿ = ಏಳು, ಗುಹಕ = ಆರು, ಅರ್ಣವ = ನಾಲ್ಕು, ಈ ಸ್ಥಾನಗಳಲ್ಲಿ ಅಂದರೆ, '-ವೈ' 'ವದ', 'ಕಮ್' ಎಂಬಲ್ಲಿ ಯತಿಯನ್ನು ಹೇಳಿಕೊಂಡರೆ ಅದು ಕೋಕಿಲಕ ವೃತ್ತವಾಗುತ್ತದೆ.

## ೧೮. ಧೃತೌ ( ಧೃತಿಃ= ಹದಿನೆಂಟು ಅಕ್ಷರಗಳು)

**1. ಕುಸುಮಿತಲತಾವೇಲ್ಲಿತಾ ವೃತ್ತ**

| ಮ | ತ | ನ | ಯ | ಯ | ಯ |
|---|---|---|---|---|---|
| _ _ _ | _ _ U | U U U | U _ _ | U _ _ | U _ _ |

**ಸ್ಯಾದ್ಭೂತರ್ತ್ವಶ್ವೈಃ ಕುಸುಮಿತಲತಾವೇಲ್ಲಿತಾ ಮ್ತೌ** ನಯೌ ಯೌ ॥ ೧ ॥

ಮಗಣ, ತಗಣ, ನಗಣ, ಯಗಣ, ಯಗಣ, ಯಗಣಗಳಿದ್ದಲ್ಲಿ ಅದು **ಕುಸುಮಿತಲತಾವೇಲ್ಲಿತಾ ವೃತ್ತ.** ಭೂತ = ಐದು, ಋತು = ಆರು, ಅಶ್ವ= ಏಳು, ಐದನೆಯ ಅಕ್ಷರದ ಬಳಿಕ '- ಶ್ವೈ' ಆನಂತರ ಆರು ಅಕ್ಷರಗಳ ಬಳಿಕ '- ತಾ ', ಏಳು ಅಕ್ಷರಗಳ ಬಳಿಕ '-ಯೌ' ಎಂಬಲ್ಲಿ ಯತಿ.

### 2. ಹರನರ್ತಕ ವೃತ್ತ

| ರ | ಸ | ಜ | ಜ | ಭ | ರ |
|---|---|---|---|---|---|
| _ U _ | UU_ | U _ U | U _ U | _ U U | _U _ |

ರ್ಸೌ ಜಜೌ ಭರಸಂಯುತೌ ಕರಿಬಾಣಕೈರ್ಹರನರ್ತಕಮ್ ॥ ೨ ॥

ರಗಣ, ಸಗಣ, ಜಗಣ, ಜಗಣ, ಭಗಣ, ರಗಣಾಗಳಿದ್ದರೆ ಅದು ಹರನರ್ತಕ ವೃತ್ತ.
ಕರಿ = ಅಷ್ಟ, ಬಾಣ= ಐದು. ಎಂಟನೆಯ ಅಕ್ಷರದ ಬಳಿಕ ' –ತೌ ' ಎಂಬಲ್ಲಿ, ಐದನೆಯ ಅಕ್ಷರದ ಬಳಿಕ ' –ಕೈರ್ ' ಎಂಬಲ್ಲಿ ಮತ್ತು ಕಡೆಯಲ್ಲಿ ಯತಿ.
ಷರಾ:- ಪಾದದ ಅಂತ್ಯದಲ್ಲಿ ಯತಿಯನ್ನು ಹೇಳದೇ ಇದ್ದರೂ ಅದು ಸಿದ್ಧವೇ ಆಮದು.

### 3. ಸಿಂಹವಿಕ್ರೀಡಿತ ವೃತ್ತ

| ಸ | ನ | ರ | ರ | ರ | ರ |
|---|---|---|---|---|---|
| UUU | U U U | _ U_ | _ U _ | _ U_ | _U _ |

ಕಥಿತಮಿಹ ನಸೌ ರರೌಚೇದ್ರರೌ ಸಿಂಹವಿಕ್ರೀಡಿತಮ್ ॥ ೩ ॥

ನಗಣ, ನಗಣ, ರಗಣ, ರಗಣ, ರಗಣ, ರಗಣಾಗಳು ಬಂದಲ್ಲಿ ಸಿಂಹವಿಕ್ರೀಡಿತ ವೃತ್ತ.

## ೧೯. ಅತಿಧೃತೌ (ಅತಿಧೃತಿ: = ಹತ್ತೊಂಭತ್ತು ಅಕ್ಷರಗಳು)

### 1. ಮೇಘವಿಸ್ಫೂರ್ಜಿತಾ ವೃತ್ತ

| ಯ | ಮ | ನ | ಸ | ರ | ರ | ಗು |
|---|---|---|---|---|---|---|
| U _ _ | _ _ _ | UUU | U U _ | _ U _ | _ U _ | _ |

ರಸರ್ತ್ವಶ್ವೈರ್ಯ್ಮೌ ನ್ಸೌ ರರಗುರುಯುತೌ ಮೇಘವಿಸ್ಫೂರ್ಜಿತಾ ಸ್ಯಾತ್ ॥ ೧ ॥

ಯಗಣ, ಮಗಣ, ನಗಣ, ಸಗಣ, ರಗಣ, ರಗಣ, ಗುರುವಿದ್ದರೆ ಮೇಘವಿಸ್ಫೂರ್ಜಿತಾ ವೃತ್ತ.
ರಸ = ಆರು, ಋತು = ಆರು, ಅಶ್ವ = ಏಳು, ಆರನೆಯ ಅಕ್ಷರದ ಬಳಿಕ '-ನ್ಸೌ, ಎಂಬಲ್ಲಿ, ಆರು ಅಕ್ಷರಗಳ ನಂತರ '-ತೌ, ಎಂಬಲ್ಲಿ, ಮತ್ತು ಏಳನೆಯ ಅಕ್ಷರದ ಬಳಿಕ ' ಸ್ಯಾತ್ ' ಎಂಬಲ್ಲಿ ಯತಿ.

### 2. ಶಾರ್ದೂಲವಿಕ್ರೀಡಿತ ವೃತ್ತ

| ಮ | ಸ | ಜ | ಸ | ತ | ತ | ಗು |
|---|---|---|---|---|---|---|
| _ _ _ | U U _ | U _ U | U U _ | _ _ U | _ _ U | _ |

ಸೂರ್ಯಾಶ್ವೈರ್ಮಸಜಸ್ತತಾಃ ಸಗುರವಃ ಶಾರ್ದೂಲವಿಕ್ರೀಡಿತಮ್ ॥ ೨ ॥

ಮಗಣ, ಸಗಣ, ಜಗಣ, ಸಗಣ, ತಗಣ, ತಗಣ, ಗುರುಗಳಿದ್ದಲ್ಲಿ ಅದು **ಶಾರ್ದೂಲವಿಕ್ರೀಡಿತ ವೃತ್ತ**. ಸೂರ್ಯ = ಹನ್ನೆರಡು, ಅಶ್ವ = ಏಳು. ಹನ್ನೆರಡನೆಯ ಅಕ್ಷರದ ಬಳಿಕ ' – ರವಃ' ಎಂಬಲ್ಲಿ , ಮತ್ತು ಏಳನೆಯ ಅಕ್ಷರದ ಬಳಿಕ '-ತಮ್' ಎಂಬಲ್ಲಿ ಯತಿ.

## ೨೦. ಕೃತೌ (ಕೃತಿಃ = ಇಪ್ಪತ್ತು ಅಕ್ಷರಗಳು)

### 1. ಮತ್ತೇಭವಿಕ್ರೀಡಿತ ವೃತ್ತ

| ಸ | ಭ | ರ | ನ | ಮ | ಯ | ಲ ಗು |
|---|---|---|---|---|---|---|
| U U _ | _ U U | _ U _ | U U U | _ _ _ | U _ _ | U _ |

**ಸಭರಾನಮ್ಯ್ಲಗಿತಿ ತ್ರಯೋದಶಯತಿರ್ಮತ್ತೇಭವಿಕ್ರೀಡಿತಮ್** ॥ ೧ ॥

ಸಗಣ, ಭಗಣ, ರಗಣ, ನಗಣ, ಮಗಣ, ಯಗಣ, ಲಘು , ಗುರುವಿದ್ದರೆ ಅದು **ಮತ್ತೇಭವಿಕ್ರೀಡಿತ ವೃತ್ತ.** ತ್ರಯೋದಶ = ಹದಿಮೂರು. ಹದಿಮೂರನೆಯ ಅಕ್ಷರದ ಬಳಿಕ '-ತಿರ್ ' ಎಂಬಲ್ಲಿ ಮತ್ತು ಕಡೆಯಲ್ಲಿ ಯತಿ.

### 2. ಸುವದನಾ ವೃತ್ತ

| ಮ | ರ | ಭ | ನ | ಯ | ಭ | ಲಗು |
|---|---|---|---|---|---|---|
| _ _ _ | _ U _ | _ U U | U U U | U _ _ | _ U U | U _ |

**ಜ್ಞೇಯಾ ಸಪ್ತಾಶ್ವಷಡ್ಭಿರ್ಮರಭನಯಭಯುತೌ ಭ್ಲೌ ಗಃ ಸುವದನಾ** ॥ ೨ ॥

ಮಗಣ, ರಗಣ, ಭಗಣ, ನಗಣ, ಯಗಣ, ಭಗಣ, ಲಘು, ಗುರುವಿದ್ದರೆ ಸುವದನಾ ವೃತ್ತ. ಸಪ್ತ= ಏಳು, ಅಶ್ವ = ಏಳು, ಷಟ್= ಆರು. ಮೊದಲ ಏಳು ಅಕ್ಷರದ ಬಳಿಕ **' ಡ್ಭಿರ್ '** ಎಂಬಲ್ಲಿ ಮೊದಲ ಯತಿ, ಪುನಃ ಏಳು ಅಕ್ಷರಗಳ ಬಳಿಕ **' ತೌ '** ಎಂಬಲ್ಲಿ ಎರಡನೆಯ ಯತಿ, ಹಾಗೆಯೇ ಆರು ಅಕ್ಷರಗಳ ಬಳಿಕ ಅಂದರೆ ಕಡೆಯ **' ನಾ '** ಎಂಬಲ್ಲಿ ಯತಿ.

### 3. ವೃತ್ತ ವೃತ್ತ

| ರ | ಜ | ರ | ಜ | ರ | ಜ | ಗು ಲ |
|---|---|---|---|---|---|---|
| _ U _ | U _ U | _ U _ | U _ U | _ U _ | U _ U | _ U |

**ತ್ರೀರಜೌ ಗಲೌ ಭವೇದಿಹೇದೃಶೇನ ಲಕ್ಷಣೇನ ವೃತ್ತ ನಾಮ** ॥ ೩ ॥

ರಗಣ, ಜಗಣ, ರಗಣ, ಜಗಣ, ರಗಣ, ಜಗಣ, ಗುರು, ಲಘುವಿದ್ದರೆ , ಅದು ವೃತ್ತವೆಂಬ **ಹೆಸರಿನವೃತ್ತ.** 'ತ್ರೀರಜೌ = ರ–ಜಗಣಗಳ ಮೂರಾವರ್ತ'

### 4. ಪ್ರಮದಾನನ ವೃತ್ತ

| ಸ | ಜ | ಜ | ಭ | ರ | ಸ | ಲ ಗು |
|---|---|---|---|---|---|---|
| U U _ | U _ U | U _ U | _ U U | _ U _ | U U _ | U _ |

**ಸಜಜಾ ಭರೌ ಸಲಗಾಶ್ಚ ಚೇದುದಿತಂ ತದಾ ಪ್ರಮದಾನನಮ್** ॥ ೪ ॥

ಸಗಣ, ಜಗಣ, ಜಗಣ, ಭಗಣ, ರಗಣ, ಸಗಣ, ಲಘು, ಗುರುವಿದ್ದರೆ ಪ್ರಮದಾನನ ವೃತ್ತ.

## ೨೧. ಪ್ರಕೃತೌ ( ಪ್ರಕೃತಿಃ = ಇಪ್ಪತ್ತೊಂದು ಅಕ್ಷರ)

### 1. ಸ್ರಗ್ಧರಾ ವೃತ್ತ

ಮ | ರ | ಭ | ನ | ಯ | ಯ

_ _ _ | _ U _ | _ U U | U U U | U _ _ | U _

ಮ್ರಭ್ನೈರ್ಯಾ|ಣಾಂ ತ್ರಯೇ|ಣ ತ್ರಿಮು|ನಿಯತಿ|ಯುತಾ ಸ್ರಗ್ಧರಾ

ಯ

_ | U _ _

ಕೀ|ರ್ತಿತೇಯಮ್ ॥ ೧ ॥

ಮಗಣ, ರಗಣ, ಭಗಣ, ನಗಣ, ಯಗಣ, ಯಗಣ, ಯಗಣಗಳಿದ್ದರೆ ಸ್ರಗ್ಧರಾ ವೃತ್ತ. ಮುನಿ = ಏಳು. ಏಳು - ಏಳು ಅಕ್ಷರಗಳಲ್ಲಿ ಯತಿ. ಅಂದರೆ (೧) '-ಣಾ' ೨'-ತಾ' (೩) -ಯಮ್' ಹೀಗೆ ಯತಿ.

### 2. ಮತ್ತವಿಲಾಸಿನೀ ವೃತ್ತ

ಭ | ಭ | ಭ | ಭ | ಭ | ಭ | ರ

_ U U | _ U U | _ U U | _ U U | _ U U | _ U U | _ U _

ಭೌ ಭಭ|ಭಾಶ್ಚ ಭ|ರೌ ಯದಿ |ಕೀರ್ತ್ಯಯ |ಪುತ್ರಕ |ಮತ್ತವಿ|ಲಾಸಿನೀಮ್ ॥ ೨ ॥

ಭಗಣ, ಭಗಣ, ಭಗಣ, ಭಗಣ, ಭಗಣ, ಭಗಣ (ಆರು ಭಗಣ) ರಗಣಗಳು ಬಂದರೆ ಮತ್ತವಿಲಾಸಿನೀ ವೃತ್ತ.

## ೨೨. ಆಕೃತೌ ( ಆಕೃತಿಃ= ಇಪ್ಪತ್ತೆರಡು ಅಕ್ಷರಗಳು)

### 1. ಪ್ರಭದ್ರಕ ವೃತ್ತ

ಭ | ರ | ನ | ರ | ನ | ರ | ನ | ಗು

_ U U | _ U _ | U U U | _ U _ | U U U | _ U _ | U U U | _

ಭ್ರೌ ನ|ರನಾರ|ನಾವಥ |ಗುರುರ್ದಿ|ಗರ್ಕವಿ|ರಮಂ ಪ್ರ|ಭದ್ರಕಮಿ|ದಮ್ ॥ ೧ ॥

ಭಗಣ, ರಗಣ, ನಗಣ, ರಗಣ, ನಗಣ, ರಗಣ, ನಗಣ, ಗುರುವಿದ್ದರೆ ಪ್ರಭದ್ರಕ ವೃತ್ತ. ದಿಕ್ = ದಶ, ಅರ್ಕ = ಹನ್ನೆರಡು, ಹತ್ತನೆಯ ಅಕ್ಷರದ ಕಡೆಯಲ್ಲಿ '-ರುರ್' ಎಂಬಲ್ಲಿ , ಬಳಿಕ ಹನ್ನೆರಡನೆಯ ಅಕ್ಷರದ ಕಡೆಯಲ್ಲಿ '-ದಮ್' ಎಂಬಲ್ಲಿ ಯತಿ.

## ೨೩. ವಿಕೃತೌ (ವಿಕೃತಿಃ = ಇಪ್ಪತ್ಮೂರು ಅಕ್ಷರಗಳು)

### 1. ಅಶ್ವಲಲಿತ ವೃತ್ತ

ನ | ಜ | ಭ | ಜ | ಭ | ಜ | ಭ | ಲ ಗು

U U U | U _ U | _ U U | U _ U | _ U U | U _ U | _ U U | U _

ಯದಿಹ|ನಜೌ ಭ|ಜೌ ಭಜ|ಭಲಗ್ ತ|ದಾಶ್ವಲ|ಲಿತಂ ಹ|ರಾರ್ಕಯ|ತಿಮತ್ ॥ ೧ ॥

ನಗಣ, ಜಗಣ, ಭಗಣ, ಜಗಣ, ಭಗಣ, ಜಗಣ, ಭಗಣ, ಲಘು, ಗುರುಗಳಿದ್ದರೆ **ಅಶ್ವಲಲಿತ ವೃತ್ತ**. ಹರ = ಹನ್ನೊಂದು, ಅರ್ಕ = ಹನ್ನೆರಡು. ಮೊದಲ ಹನ್ನೊಂದು ಅಕ್ಷರಗಳ ಬಳಿಕ '-ಲಗ್' ಎಂಬಲ್ಲಿ, ಬಳಿಕ ಹನ್ನೆರಡು ಅಕ್ಷರಗಳ ಕಡೆಯಲ್ಲಿ '-ಮತ್' ಎಂಬಲ್ಲಿ ಯತಿ.

## 2. ಮತ್ತಾಕ್ರೀಡಾ ವೃತ್ತ

| ಮ | ಮ | ತ | ನ | ನ | ನ | ನ | ಲ ಗು |
|---|---|---|---|---|---|---|---|
| _ _ _ | _ _ _ | _ _ U | UUU | UUU | UUU | UUU | U _ |

ಮತ್ತಾಕ್ರೀಡಾ ಮೌ ತ್ನೌ ನೌ ನಲ್ಗಿತಿ ಭವತಿ ವಸುಶರದಶಯತಿಯುತಾ ॥ ೨ ॥

ಮಗಣ, ಮಗಣ, ತಗಣ, ನಗಣ, ನಗಣ, ನಗಣ, ನಗಣ, ಲಘು, ಗುರುವಿದ್ದರೆ **ಮತ್ತಾಕ್ರೀಡಾ ವೃತ್ತ**, ವಸು = ಎಂಟು, ಶರ = ಐದು, ದಶ= ಹತ್ತು, ಮೊದಲ ಎಂಟು ಅಕ್ಷರಗಳ ಬಳಿಕ '-ನಲ್' ಎಂಬಲ್ಲಿ , ಅನಂತರ ಐದು ಅಕ್ಷರಗಳ ಬಳಿಕ '- ವತಿ; ಮತ್ತು ಹತ್ತು ಅಕ್ಷರಗಳ ಬಳಿಕ '-ತಾ' ಎಂಬಲ್ಲಿ ಯತಿ.

## 3. ಮಯೂರಗತಿ ವೃತ್ತ

| ಭ | ಭ | ಭ | ಭ | ಭ | ಭ | ಭ | ಗು ಗು |
|---|---|---|---|---|---|---|---|
| _UU | _UU | _UU | _ U U | _ UU | _ U U | _ UU | _ _ |

ಭೈರಥಸಪ್ತಭಿರತ್ರ ಕೃತಾ ಗುರುಣಾ ಗುರುಣಾ ಚ ಮಯೂರಗತಿಃ ಸ್ಯಾತ್ ॥ ೩ ॥

ಸಪ್ತಭಿಃಭೈಃ- ಏಳು ಭಗಣಗಳೂ, ಕಡೆಯಲ್ಲಿ ಎರಡು ಗುರುಗಳೂ ಇದ್ದಲ್ಲಿ ಮಯೂರಗತಿ ವೃತ್ತ.

### ೨೪. ಸಂಕೃತೌ (ಸಂಕೃತಿಃ = ಇಪ್ಪತ್ತನಾಲ್ಕು ಅಕ್ಷರಗಳು)

## 1. ತನ್ವೀ ವೃತ್ತ

| ಭ | ತ | ನ | ಸ | ಭ | ಭ | ನ | ಯ |
|---|---|---|---|---|---|---|---|
| _ U U | _ _ U | UUU | UU _ | _ UU | _ U U | UUU | U_ _ |

ಭೂತ ಮುನೀನೈರ್ಯತಿರಿಹಭತನಾಃ ಸ್ಭೌ ಭನಯಾಶ್ಚ ಯದಿ ಭವತಿ ತನ್ವೀ ॥ ೧॥

ಭಗಣ, ತಗಣ, ನಗಣ, ಸಗಣ, ಭಗಣ, ಭಗಣ, ನಗಣ, ಯಗಣವಿದ್ದರೆ ತನ್ವೀ ವೃತ್ತ. ಭೂತ = ಐದು, ಮುನಿ = ಏಳು, ಇನ = ಸೂರ್ಯ = ಹನ್ನೆರಡು. ಐದನೆಯ ಅಕ್ಷರದ ಬಳಿಕ '- ನೈರ್', ಅನಂತರ ಏಳನೆಯ ಅಕ್ಷರದ ಬಳಿಕ '-ತನಾಃ', ಕಡೆಗೆ ಹನ್ನೆರಡನೆಯ ಅಕ್ಷರದ ಬಳಿಕ '- ನ್ವೀ' ಎಂಬಲ್ಲಿ ಯತಿ.

## ೨೫. ಅತಿಕೃತೌ (ಅತಿಕೃತಿಃ = ಇಪ್ಪತ್ತೈದು ಅಕ್ಷರಗಳು)

### 1. ಕ್ರೌಂಚಪದಾ ವೃತ್ತ

| ಭ | ಮ | ಸ | ಭ | ನ | ನ | ನ | ನ | ಗು |
|---|---|---|---|---|---|---|---|---|
| _ UU | _ _ _ | UU _ | _ UU | UUU | UUU | UUU | UUU | _ |

**ಕ್ರೌಂಚಪದಾ ಭ್ಮೌ ಸ್ಭೌ ನನನಾನ್ಗಾವಿಷುಶರವಸುಮುನಿವಿರತಿರಿಹ ಭವೇತ್ ||೧||**

ಭಗಣ, ಮಗಣ, ಸಗಣ, ಭಗಣ, ನಗಣ, ನಗಣ, ನಗಣ, ನಗಣ, ಗುರು ಬಂದಲ್ಲಿ ಕ್ರೌಂಚಪದಾ ವೃತ್ತ. ಇಷು = ಬಾಣ = ಐದು, ಶರ = ಐದು, ವಸು = ಎಂಟು , ಮುನಿ = ಏಳು. ಐದನೆಯ ಅಕ್ಷರದ ಬಳಿಕ 'ಭ್ಮೌ' ಎಂಬಲ್ಲಿ, ಪುನಃ ಐದು ಅಕ್ಷರಗಳ ಬಳಿಕ 'ನ್ಗಾ' ಎಂಬಲ್ಲಿ ಬಳಿಕ ಎಂಟು ಅಕ್ಷರಗಳ ಬಳಿಕ 'ಮುನಿ' ಎಂಬಲ್ಲಿ, ಅನಂತರ ಕಡೆಯಲ್ಲಿ ಏಳು ಅಕ್ಷರಗಳ ಬಳಿಕ '-ವೇತ್' ಎಂಬಲ್ಲಿ ಹೀಗೆ ಈ ವೃತ್ತದಲ್ಲಿ ನಾಲ್ಕು ಕಡೆ ಯತಿಯುಂಟು.

## ೨೬. ಉತ್ಕೃತೌ (ಉತ್ಕೃತಿಃ = ಇಪ್ಪತ್ತಾರು ಅಕ್ಷರಗಳು)

### 1. ಭುಜಂಗವಿಜೃಂಭಿತ ವೃತ್ತ

| ಮ | ಮ | ತ | ನ | ನ | ನ | ರ | ಸ | ಲ ಗು |
|---|---|---|---|---|---|---|---|---|
| _ _ _ | _ _ _ | _ _ U | UUU | UUU | UUU | _ U _ | UU _ | U _ |

**ವಸ್ವೀಶಾಶ್ವೈಚ್ಛೇದೋಪೇತಂ ಮಮತನಯುಗನರಸಲಗೈರ್ಭುಜಂಗವಿಜೃಂಭಿತಮ್ ||೧||**

ಮಗಣ, ಮಗಣ, ತಗಣ, ನಗಣ, ನಗಣ, ನಗಣ, ರಗಣ, ಸಗಣ, ಲಘು, ಗುರುವಿದ್ದರೆ **ಭುಜಂಗವಿಜೃಂಭಿತ ವೃತ್ತ**. ವಸು+ ಈಶ+ ಅಶ್ವ. ವಸು=ಎಂಟು, ಈಶ = ಏಕಾದಶ = ಹನ್ನೊಂದು, ಅಶ್ವ= ಏಳು. ಎಂಟನೆಯ ಅಕ್ಷರದ ಬಳಿಕ '-ತಂ' ಎಂಬಲ್ಲಿ , ಆನಂತರ ಹನ್ನೊಂದು ಅಕ್ಷರಗಳ ಬಳಿಕ '- ಗೈರ್' ಎಂಬಲ್ಲಿ, ಮತ್ತು ಕಡೆಯ ಏಳನೆಯ ಅಕ್ಷರ ಬಳಿಕ '-ತಂ' ಎಂಬಲ್ಲಿ ಯತಿ.

### 2. ಅಪವಾಹ ವೃತ್ತ

| ಮ | ನ | ನ | ನ | ನ | ನ | ನ | ಸ | ಗು | ಗು |
|---|---|---|---|---|---|---|---|---|---|
| _ _ _ | UUU | UUU | UUU | UUU | UUU | UUU | UU _ | _ | _ |

**ಮೋನಾಃ ಷಟ್ ಸಗಗಾ ಯದಿ ನವರಸಶರಯತಿಯುತಮಪವಾಹಾಖ್ಯಮ್ ||೨||**

ಮಗಣ, ಆರು ನಗಣಗಳು, ಸಗಣ, ಗುರು, ಗುರು ಬಂದಲ್ಲಿ ಅದು ಅಪವಾಹ ವೃತ್ತ. ನವ = ಒಂಭತ್ತು, ರಸ = ಆರು, ಶರ = ಐದು. ಮೊದಲ ಒಂಭತ್ತು ಅಕ್ಷರಗಳ ಬಳಿಕ '-ದಿ' ಎಂಬಲ್ಲಿ , ಆನಂತರ ಆರು ಅಕ್ಷರಗಳ ಬಳಿಕ '- ರಸ' ಎಂಬಲ್ಲಿ, ಆನಂತರ ಆರು ಅಕ್ಷರಗಳ ಬಳಿಕ '-ಯುತ' ಎಂಬಲ್ಲಿ, ಕಡೆಗೆ ಐದು ಅಕ್ಷರಗಳ ಬಳಿಕ '-ಖ್ಯಮ್' ಎಂಬಲ್ಲಿ ಯತಿ.

|| ಇತಿ ಷಡ್ವಿಂಶತಿಶ್ಛಂದಾಂಸಿ ||

|| ಇಲ್ಲಿಗೆ ಇಪ್ಪತ್ತಾರು ಛಂದಸ್ಸುಗಳು ಮುಗಿದವು ||

## ೨೭. ಅಥ ದಂಡಕಾಃ (ದಂಡಕಗಳು)

### 1. ಚಂಡವೃಷ್ಟಿಪ್ರಯಾತ ದಂಡಕ

ನ | ನ | ರ | ರ | ರ | ರ | ರ |

U U U | U U U | _ U _ | _ U _ | _ U _ | _ U _ | _ U _ | _

ಯದಿಹ ನಯುಗಲಂ ತತಃ ಸಪ್ತರೇಫಾಸ್ತದಾ ಚಂಡವೃಷ್ಟಿಪ್ರಯಾತೋ

ರ | ರ

U _ | _ U _

ಭವೇದ್ದಂಡಕಃ || ೧ ||

ಎರಡು ನಗಣಗಳು, ಏಳು ರಗಣಗಳು ಬಂದಲ್ಲಿ ಚಂಡವೃಷ್ಟಿಪ್ರಯಾತ ದಂಡಕ.

### 2. ಇತರ ದಂಡಕಪ್ರಕಾರಗಳು

ನ | ನ | ರ | ರ | ರ | ರ | ರ |

UUU | UUU | _ U _ | _ U _ | _ U _ | _ U _ | _ U _ | _

ಪ್ರತಿಚರಣವಿವೃದ್ಧರೇಫಾಃ ಸ್ಯುರರ್ಣಾರ್ಣವವ್ಯಾಲಜೀಮೂತಲೀಲಾ

ರ | ರ | ರ

U _ | _ U _ | _ U _

ಕರೋದ್ದಾಮಶಖಾದಯಃ || ೨ ||

ಎರಡು ನಗಣಗಳ ಮುಂದೆ ಒಂದೊಂದು ರಗಣ ಹೆಚ್ಚಿದಂತೆ ಭಿನ್ನ ಭಿನ್ನ ದಂಡಕವಾಗುತ್ತದೆ. ಹೇಗೆಂದರೆ

೧. ಎರಡು ನಗಣಗಳ ಮುಂದೆ ಎಂಟು ರಗಣಗಳಿದ್ದರೆ ' ಅರ್ಣ ದಂಡಕ '

೨. ಎರಡು ನಗಣಗಳ ಮುಂದೆ ಒಂಬತ್ತು ರಗಣವಿದ್ದರೆ ' ಅರ್ಣವ ದಂಡಕ '

೩. ಎರಡು ನಗಣಗಳ ಬಳಿಕ ಹತ್ತು ರಗಣವಿದ್ದರೆ ' ವ್ಯಾಲ ದಂಡಕ '

೪. ಎರಡು ನಗಣಗಳ ಬಳಿಕ ಹನ್ನೊಂದು ರಗಣವಿದ್ದರೆ ' ಜೀಮೂತ ದಂಡಕ '

೫. ಎರಡು ನಗಣಗಳ ಬಳಿಕ ಹನ್ನೆರಡು ರಗಣವಿದ್ದರೆ ' ಲೀಲಾಕರದಂಡಕ '

೬. ಎರಡು ನಗಣಗಳ ಬಳಿಕ ಹದಿಮೂರು ರಗಣವಿದ್ದರೆ ' ಉದ್ದಾಮ ದಂಡಕ '

೭. ಎರಡು ನಗಣಗಳ ನಂತರ ಹದಿನಾಲ್ಕು ರಗಣವಿದ್ದರೆ, ' ಶಂಖ ದಂಡಕ '

'ಆದಯಃ' ಎಂಬಲ್ಲಿ ಸಿಂಹದಂಡಕ, ಸಮುದ್ರದಂಡಕ, ಭುಜಂಗದಂಡಕಾದಿಗಳನ್ನು, ಪ್ರಯೋಗವನ್ನನುಸರಿಸಿ ತಿಳಿಯಬೇಕು.

**3. ಪ್ರಚಿತಕ ದಂಡಕ**

| ನ | ನ | ಯ | ಯ | ಯ | ಯ | ಯ | ಯ |
|---|---|---|---|---|---|---|---|
| UUU | UUU | U _ _ | U _ _ | U _ _ | U _ _ | U _ _ | U _ |
| ಪ್ರಚಿತ | ಕಸಮ | ಭಿಧೋ ಧೀರಧೀಭಿಃ | ಸ್ಮೃತೋ ದಂಡ | ಕೋ ನಷ್ಟ್ಯಾದು | ತ್ತರೈಃ | | |

| ಯ |
|---|
| _ U _ _ |
| ಸಪ್ತಭಿರ್ಯೈಃ ‖ ೩ ‖ |

ಎರಡು ನಗಣಗಳ ಬಳಿಕ ಏಳು ಯಗಣಗಳಿದ್ದಲ್ಲಿ ಅದು ಪ್ರಚಿತಕವೆಂಬ ದಂಡಕ.

**4. ಈ ದಂಡಕದ ಇತರ ಭೇದಗಳು**

_ U _ UU_U _ _ _ _ U _ _ U _ U _ _

ನ ವೃಯಾತ್ಪರತಸ್ತಕಾರೇಣಾಪಿ ಕೃಚಿದ್ದಂಡಕಾ ದೃಶ್ಯಂತೇ ‖ ೪ ‖

ಷರಾ : ಇಲ್ಲಿ ಲಕ್ಷಣ ಸಮನ್ವಯವೇನೂ ಇರುವುದಿಲ್ಲ. ಕೇವಲ ಭೇದಗಳ ಸೂಚನೆಯನ್ನು ಈ ವಾಕ್ಯದಲ್ಲಿ ನೀಡಲಾಗಿದೆ. ಏನೆಂದರೆ ' ಎರಡು ನಗಣಗಳ ಬಳಿಕ ಏಳು ತಗಣಗಳುಳ್ಳ ದಂಡಕಭೇದಾದಿಗಳೂ ಕೆಲವೆಡೆ ಕಂಡು ಬರುತ್ತವೆ. '

**5. ಇದರ ಇತರ ವೈಲಕ್ಷಣ್ಯಗಳು**

ಏವಮೇಕೋನಸಹಸ್ರಾಕ್ಷರವೃದ್ಧಿರ್ಭವತಿ ದಂಡಕಂ ವೃತ್ತಮ್ ‖ ೫ ‖

ಹೀಗೆ ಎರಡು ನಗಣಗಳ ಮುಂದೆ ರಗಣ, ಯಗಣ, ತಗಣಗಳ ವೃದ್ಧಿಯಿಂದಾಗಿ ದಂಡಕ ವೃತ್ತವು ಏಕ – ಊನ – ಸಹಸ್ರಾಕ್ಷರ = ಒಂಬೈನೂರ ತೊಂಭತ್ತೊಂಭತ್ತು ಅಕ್ಷರವುಳ್ಳದ್ದಾಗುತ್ತದೆ.

ಇತಿ ವೃತ್ತರತ್ನಾಕರಾಖ್ಯೇ ಛಂದಃಶಾಸ್ತ್ರೇ ವರ್ಣವೃತ್ತಕಥನಂ ನಾಮ
‖ ತೃತೀಯೋಽಧ್ಯಾಯಃ ‖

‖ ಇಲ್ಲಿಗೆ ಮೂರನೆಯ ಅಧ್ಯಾಯ ಮುಗಿದುದು ‖

ಶ್ರೀ

# || ಚತುರ್ಥೋಽಧ್ಯಾಯಃ ||

## || ನಾಲ್ಕನೆಯ ಅಧ್ಯಾಯ ||

(ಅರ್ಧಸಮವೃತ್ತಗಳ ವಿವರಣೆ)

### ೧. ಉಪಚಿತ್ರ

| ಸ | ಸ | ಸ | ಲ ಗು | |
|---|---|---|---|---|
| U U — | U U — | UU— | U — | |
| ವಿಷಮೇ | ಯದಿ ಸೌ | ಸಲಗಾ | ದಲೇ \| | (೯) |

| ಭ | ಭ | ಭ | ಗು ಗು | |
|---|---|---|---|---|
| — U U | — U U | — U U | — — | |
| ಭೌ ಯುಜಿ | ಭಾದ್ ಗುರು | ಕಾವುಪ | ಚಿತ್ರಮ್ ‖ ೧ ‖ | (೧೧) |

ವಿಷಮ ಪಾದಗಳಾದ ೧-೩ನೇ ಪಾದಗಳಲ್ಲಿ ಮೂರು ಸಗಣಗಳು, ಲಘು, ಗುರು ಇದ್ದಲ್ಲಿ, ಮತ್ತು ಸಮಪಾದಗಳಾದ ೨-೪ನೇ ಪಾದಗಳಲ್ಲಿ ಮೂರು ಭಗಣಗಳು, ಗುರು, ಗುರು ಇದ್ದಲ್ಲಿ ಅದು ಉಪಚಿತ್ರ ವೃತ್ತ.

### ೨. ದ್ರುತಮಧ್ಯಾ

| ಭ | ಭ | ಭ | ಗು ಗು | |
|---|---|---|---|---|
| — U U | — U U | — U U | — — | |
| ಭತ್ರಯ | ಮೋಜಗ | ತಂ ಗುರು | ಣೀ ಚೇತ್ \| | (೧೧) |

| ನ | ಜ | ಜ | ಯ | |
|---|---|---|---|---|
| U U U | U — U | U — U | U — — | |
| ಯುಜಿ ಚ | ನಜೌ ಜ್ಯ | ಯುತೌ ದ್ರು | ತಮಧ್ಯಾ ‖ ೨ ‖ | (೧೨) |

೧-೩ನೇ ಪಾದಗಳಲ್ಲಿ ಮೂರು ಭಗಣಗಳು, ಎರಡು ಗುರು ಇರಬೇಕು, ೨-೪ನೇ ಪಾದಗಳಲ್ಲಿ ನಗಣ, ಜಗಣ, ಜಗಣ, ಯಗಣಗಳು ಇರಬೇಕು. ಆಗ ಅದು ದ್ರುತಮಧ್ಯಾ ವೃತ್ತವೆನಿಸುತ್ತದೆ.

### ೩. ವೇಗವತೀ

| ಸ | ಸ | ಸ | ಗು | |
|---|---|---|---|---|
| U U — | U U — | U U — | — | |
| ಸಯುಗಾ | ತ್ಸಗುರೂ | ವಿಷಮೇ | ಚೇದ್ \| | (೧೦) |

| ಭ | ಭ | ಭ | ಗು ಗು | |
|---|---|---|---|---|
| — U U | — U U | — U U | — — | |
| ಭಾವಿಹ | ವೇಗವ | ತೀ ಯುಜಿ | ಭಾದ್ಗೌ ‖ ೩ ‖ | (೧೧) |

೧-೩ನೇ ಪಾದಗಳಲ್ಲಿ ಮೂರು ಸಗಣ, ಗುರು ಇದ್ದು, ೨-೪ನೇ ಪಾದಗಳಲ್ಲಿ ಮೂರು

ಭಗಣ, ಎರಡು ಗುರು ಇದ್ದಲ್ಲಿ ವೇಗವತೀ ವೃತ್ತ.

### ೪. ಭದ್ರವಿರಾಟ್

| ತ | ಜ | ರ | ಗು |
|---|---|---|---|
| — — U | U — U | — U — | — |

ಓಜೇ ತಪರೌ ಜರೌ ಗುರುಶ್ಚೇನ್ - | (೧೦)

| ಮ | ಸ | ಜ | ಗು ಗು |
|---|---|---|---|
| — — — | U U — | U — U | — — |

ಮ್ಸೌ ಜ್ಗೌಗ್ ಭದ್ರವಿರಾಡ್ ಭವೇದನೋಜೇ || ೪ || (೧೧)

೧-೩ನೇ ಪಾದಗಳಲ್ಲಿ ತಗಣ, ಜಗಣ, ರಗಣ, ಗುರುವಿದ್ದು, ೨-೪ನೇ ಪಾದಗಳಲ್ಲಿ ಮಗಣ, ಸಗಣ, ಜಗಣ, ಗುರು, ಗುರು ಇದ್ದಲ್ಲಿ ಅದು ಭದ್ರವಿರಾಟ್ ವೃತ್ತ.

### ೫. ಕೇತುಮತೀ

| ಸ | ಜ | ಸ | ಗು |
|---|---|---|---|
| U U — | U — U | U U — | — |

ಅಸಮೇ ಸಜೌ ಸಗುರುಯುಕ್ತೌ | (೧೦)

| ಭ | ರ | ನ | ಗು ಗು |
|---|---|---|---|
| — U U | — U — | U U U | — — |

ಕೇತುಮತೀ ಸಮೇ ಭರನಗಾದ್ಗಃ || ೫ || (೧೧)

೧-೩ನೇ ಪಾದಗಳಲ್ಲಿ ಸಗಣ, ಜಗಣ, ಸಗಣ, ಗುರುವೂ, ೨-೪ ನೇ ಪಾದಗಳಲ್ಲಿ ಭಗಣ, ರಗಣ, ನಗಣ, ಗುರು, ಗುರುವೂ ಇದ್ದಲ್ಲಿ ಅದು ಕೇತುಮತೀ ವೃತ್ತ.

### ೬. ಲಲಿತಾ

| ಸ | ಸ | ಜ | ಗು |
|---|---|---|---|
| U U — | U U — | U — U | — |

ಸಸಜಾ ವಿಷಮೇ ಯದಾ ಗುರುಃ | (೧೦)

| ಸ | ಭ | ರ | ಲ ಗು |
|---|---|---|---|
| U U — | — U U | — U — | U — |

ಸಭರಾ ಸ್ಯಾಲ್ಲಲಿತಾ ಸಮೇ ಲಗೌ || ೬ || (೧೧)

೧-೩ ನೇ ಪಾದಗಳಲ್ಲಿ ಸಗಣ, ಸಗಣ, ಜಗಣ, ಗುರುವಿದ್ದು, ೨-೪ನೇ ಪಾದಗಳಲ್ಲಿ ಸಗಣ, ಭಗಣ, ರಗಣ, ಲಘು, ಗುರು ಇದ್ದಲ್ಲಿ ಲಲಿತಾ ವೃತ್ತ.

**೭. ಆಖ್ಯಾತಕೀ**

ತ | ತ | ಜ | ಗು ಗು
— — U | — — U | U — U | — —
**ಆಖ್ಯಾತಕೀ ತೌ ಜಗುರೂ ಗ ಓಜೇ ।** (೧೧)

ಜ | ತ | ಜ | ಗು ಗು
U — U | — — U | U — U | — —
**ಜತಾವನೋಜೇ ಜಗುರೂ ಗುರುಶ್ಚೇತ್ ॥ ೭ ॥** (೧೧)

೧-೩ನೇ ಪಾದಗಳಲ್ಲಿ ತಗಣ, ತಗಣ, ಜಗಣ, ಗುರು, ಗುರು ಇದ್ದು, ೨-೪ನೇ ಪಾದಗಳಲ್ಲಿ ಜಗಣ, ತಗಣ, ಜಗಣ, ಗುರು, ಗುರು ಇದ್ದಲ್ಲಿ ಆಖ್ಯಾತಕೀ.

೮. ವಿಪರೀತಪೂರ್ವಾ (ವಿಪರೀತಾಖ್ಯಾತಕೀ)

ಜ | ತ | ಜ | ಗು ಗು
U — U | — — U | U — U | — —
**ಜತೌ ಜಗೌ ಗೋ ವಿಷಮೇ ಸಮೇ ಚೇತ್ ।** (೧೧)

ತ | ತ | ಜ | ಗು ಗು
— — U | — — U | U — U | — —
**ತೌ ಜ್ಗೌ ಗ ಏಷಾ ವಿಪರೀತಪೂರ್ವಾ ॥ ೮ ॥** (೧೧)

**ಆಖ್ಯಾತಕೀವೃತ್ತದ ಲಕ್ಷಣವು ವ್ಯತ್ಯಸ್ತವಾದಲ್ಲಿ ವಿಪರೀತಪೂರ್ವಾ (ವಿಪರೀತಾಖ್ಯಾತಕೀ) ವೃತ್ತ. ಅಂದರೆ, ೧-೩ನೇ ಪಾದಗಳಲ್ಲಿ ಜಗಣ, ತಗಣ, ಜಗಣ, ಗುರು, ಗುರು ಇದ್ದು, ೨-೪ನೇ ಪಾದಗಳಲ್ಲಿ ತಗಣ, ತಗಣ, ಜಗಣ, ಗುರು, ಗುರು, ಇದ್ದಲ್ಲಿ ವಿಪರೀತಾಖ್ಯಾತಕೀ.**

**೯. ಹರಿಣಪ್ಲುತಾ**

ಸ | ಸ | ಸ | ಲ ಗು
U U — | U U — | U U — | U —
**ಸಯುಗಾತ್ ಸಲಘೂ ವಿಷಮೇ ಗುರುರ್ ।** (೧೧)

ನ | ಭ | ಭ | ರ
U U U | — U U | — U U | — U —
**ಯುಜಿ ನಭೌ ಚಭರೌ ಹರಿಣಪ್ಲುತಾ ॥ ೯ ॥** (೧೨)

೧-೩ನೇ ಪಾದಗಳಲ್ಲಿ ಸಗಣ, ಸಗಣ, ಸಗಣ, ಲಘು, ಗುರುವಿದ್ದು, ೨-೪ನೇಪಾದಗಳಲ್ಲಿ ನಗಣ, ಭಗಣ, ಭಗಣ, ಲಘು, ರಗಣಗಳಿದ್ದರೆ ಹರಿಣಪ್ಲುತಾ.

೧೦. ಅಪರವಕ್ತ್ರ

ನ | ನ | ರ | ಲಗು
U U U | UUU | — U — | U —
ಅಯುಜಿ | ನನರಲಾ ಗುರುಃ | ಸಮೇ | (೧೧)

ನ | ಜ | ಜ | ರ
U U U | U — U | U — U — U —
ತ್ವಮಪರವಕ್ತ್ರಮಿದಂ ತತೋ ಜರೌ || ೧೦ || (೧೨)

೧-೩ನೇ ಪಾದಗಳಲ್ಲಿ ನಗಣ, ನಗಣ, ರಗಣ, ಲಘು, ಗುರುವೂ ೨-೪ನೇ ಪಾದಗಳಲ್ಲಿ ನಗಣ, ಜಗಣ, ಜಗಣ, ರಗಣವೂ ಇದ್ದಲ್ಲಿ ಅಪರವಕ್ತ್ರ.

೧೧. ಪುಷ್ಪಿತಾಗ್ರಾ

ನ | ನ | ರ | ಯ
U U U | U U U | — U — | U — —
ಅಯುಜಿ | ನಯುಗರೇಫತೋ | ಯಕಾರೋ (೧೩)

ನ | ಜ | ಜ | ರ | ಗು
U U U | U — U | U — U | U — U | —
ಯುಜಿ ಚ | ನಜೌ ಜರಗಾಶ್ಚ | ಪುಷ್ಪಿತಾಗ್ರಾ || ೧೧ || (೧೪)

೧-೩ನೇ ಪಾದಗಳಲ್ಲಿ ನಗಣ, ನಗಣ, ರಗಣ, ಯಗಣಗಳಿದ್ದು ೨-೪ನೇ ಪಾದಗಳಲ್ಲಿ ನಗಣ, ಜಗಣ, ಜಗಣ, ರಗಣ, ಗುರುವಿದ್ದಲ್ಲಿ ಪುಷ್ಪಿತಾಗ್ರಾ.

೧೨. ಅಪರವಕ್ತ್ರ - ವೈತಾಲೀಯ, ಪುಷ್ಪಿತಾಗ್ರಾ - ಔಪಚ್ಛಂದಸಿಕ - ಇವುಗಳ ಅಭಿನ್ನತ -

ವದಂತ್ಯಪರವಕ್ತ್ರಾಖ್ಯಂ ವೈತಾಲೀಯಂ ವಿಪಶ್ಚಿತಃ |
ಪುಷ್ಪಿತಾಗ್ರಾಭಿಧಂ ಕೇಚಿದೌಪಚ್ಛಂದಸಿಕಂ ತಥಾ ||

ಕೆಲವು ಮಂದಿ ವಿದ್ವಾಂಸರು, ಅಪರವಕ್ತ್ರವನ್ನು ವೈತಾಲೀಯವೆಂದೂ ಪುಷ್ಪಿತಾಗ್ರಾವನ್ನು ಔಪಚ್ಛಂದಸಿಕವೆಂದೂ ಕರೆಯುತ್ತಾರೆ.

ಅ) ವೈತಾಲೀಯ

6 | ರ | ಲಗು
— UU — | — U — | U —
ಷಡ್ವಿಷಮೇಽಷ್ಟೌ ಸಮೇ | ಕಲಾಃ |

8 | ರ | ಲಗು
— U U — — | — U — | U —
ಷಟ್ ಚ ಸಮೇ ಸ್ಯುರ್ನೋ ನಿರಂ | ತರಾಃ |

೧-೩ರಲ್ಲಿ - ಆರುಮಾತ್ರೆ, ರಗಣ, ಲಘು, ಗುರುವೂ, ೨-೪ರಲ್ಲಿ - ಎಂಟುಮಾತ್ರೆ, ರಗಣ, ಲಘು, ಗುರುವೂ ಇರುವುದು ವೈತಾಲೀಯ. ಇದು ಮಾತ್ರಾವೃತ್ತ. ಈ ಲಕ್ಷಣವು ಮೇಲ್ಕಂಡ ವರ್ಣವೃತ್ತವಾದ ಅಪರವಕ್ತ್ರದಲ್ಲಿಯೂ ಸಂಗತವಾಗುತ್ತದೆ.

**ಆ) ಔಪಚ್ಛಂದಸಿಕ**

6 | ರ | ಯ
— — — | — U — | U — —
ಪರ್ಯಂತೇ | ರ್ಯೌ ತಥೈ | ವ ಶೇಷಂ |

8 | ರ | ಯ
— — — UU | — U — | U — —
ಔಪಚ್ಛಂದಸಿಕಂ | ಸುಧೀ | ಭಿರುಕ್ತಮ್ ||

೧-೩ರಲ್ಲಿ - ಆರುಮಾತ್ರೆ, ರಗಣ, ಯಗಣಗಳೂ, ೨-೪ ರಲ್ಲಿ ಎಂಟು-ಮಾತ್ರೆ, ರಗಣ, ಯಗಣಗಳು ಇರುವುದು ಔಪಚ್ಛಂದಸಿಕ. ಇದೂ ಸಹ ಮಾತ್ರಾವೃತ್ತ. ಈ ಲಕ್ಷಣವು ವರ್ಣಛಂದಸ್ಸಾದ ಪುಷ್ಪಿತಾಗ್ರಾದಲ್ಲಿಯೂ ಸಂಗತವಾಗುತ್ತದೆ.

**೧೩. ಯವಮತೀ**

ರ | ಜ | ರ | ಜ
— U — | U — U | — U — | U — — U
ಸ್ಯಾದಯು | ಗ್ಮಕೇ ರಜೌ | ರಜೌ | ಸಮೇ{ಚೇತ್}ತು |

ಜ | ರ | ಜ | ರ | ಗು
U — — | U — U | U — U | — U — | —
ಜರೌ ಜ | ರೌ ಗುರು | ರ್ಯವಾತ್ ಪ | ರಾಮತೀ | ಯಮ್ ||

೧-೩ನೇ ಪಾದಗಳಲ್ಲಿ ರಗಣ, ಜಗಣ, ರಗಣ, ಜಗಣಗಳು, ೨-೪ನೇ ಪಾದಗಳಲ್ಲಿ ಜಗಣ, ರಗಣ,ಜಗಣ, ರಗಣ, ಗುರುವೂ ಇದ್ದರೆ ಯವಮತೀ.

**ಪಠಾ :** 'ಸಮೇ ಚೇತ್'-ಎಂಬ ಪಾಠವು ಸರಿಯಲ್ಲ, 'ತು' ಎಂಬ ಪಾಠ ಸರಿ. ಏಕೆಂದರೆ 'ಸಮೇ ತು' ಎಂಬುದು 'ಜಗಣ'ವಾಗಬೇಕು. 'ಸಮೇ ಚೇತ್' ಎಂಬುದು 'ಯಗಣ'ವಾಗುತ್ತದೆ. ಆದ್ದರಿಂದ ಮೊದಲನೆಯ ಪಾದದ ಯುಕ್ತಪಾಠವೆಂದರೆ -'ಸ್ಯಾದಯುಗ್ಮಕೇ ರಜೌ ರಜೌ ಸಮೇ ತು'.

ಇತಿ ವೃತ್ತರತ್ನಾಕರಾಖ್ಯೇ ಛಂದಃಶಾಸ್ತ್ರೇಽರ್ಧಸಮವರ್ಣವೃತ್ತಕಥನಂ ನಾಮ

|| ಚತುರ್ಥೋಽಧ್ಯಾಯಃ ||

ಇಲ್ಲಿಗೆ ಅರ್ಧಸಮವರ್ಣವೃತ್ತಗಳ ವಿವರಣೆಯ ನಾಲ್ಕನೆಯ ಅಧ್ಯಾಯ ಮುಗಿದುದು.

## || ಪಂಚಮೋಽಧ್ಯಾಯಃ ||

### || ಐದನೆಯ ಅಧ್ಯಾಯ ||

(ವಿಷಮವೃತ್ತಗಳ ವಿವರಣೆ) (ಪದಚತುರೂರ್ಧ್ವಪ್ರಕರಣ)

೧. ಪದಚತುರೂರ್ಧ್ವ

ಸ | ರ | ಗು ಗು
U U— | — U — | — —
ಮುಖಪಾದೋಽಷ್ಟಭಿರ್ವರ್ಣೈಃ | (8 ವರ್ಣ)

ಯ | ಸ | ಜ | ಮ
U— — | U U— | U— U | — — —
ಪರೇಽಸ್ಮಾನ್ನಕ್ಕರಾಧಿಕ್ಯೈಃ ಕ್ರಮಾದ್ವೃದ್ಧಾಃ | (8+4=12)

ಸ | ಭ | ಮ | ಮ | ಯ | ಗು
UU— | —U U | — — — | — — — | U — — | —
ಸತತಂ ಯಸ್ಯ ವಿಚಿತ್ರೈಃ ಪಾದೈಃ ಸಂಪನ್ನ ಸೌಂದರ್ಯಮ್ | (12+4=16)

ನ | ನ | ಸ | ಭ | ಸ | ರ | ಗು ಗು
UUU | U U U | U U — | — U U | U U — | — U — | — —
ತದಭಿಹಿತಮಮಲಧೀಭಿಃ ಪದಚತುರೂರ್ಧ್ವಾಭಿಧಂ ವೃತ್ತಮ್ || ೧ || (16+4=20)

ಮೊದಲನೆಯ ಪಾದದಲ್ಲಿ ಎಂಟು ವರ್ಣಗಳಿರಬೇಕು. ಆನಂತರದ ಪಾದಗಳಲ್ಲಿ ಕ್ರಮವಾಗಿ ನಾಲ್ಕು, ನಾಲ್ಕು ಅಕ್ಷರಗಳು ಹೆಚ್ಚಾಗುತ್ತಾ ಹೋಗಬೇಕು. ಅಂದರೆ, ಮೊದಲನೆಯ ಪಾದದಲ್ಲಿ ಎಂಟು ಅಕ್ಷರಗಳು, ಎರಡನೆಯ ಪಾದದಲ್ಲಿ (8+4=12) ಹನ್ನೆರಡು ಅಕ್ಷರಗಳು, ಮೂರನೆಯ ಪಾದದಲ್ಲಿ 12+4=16)ಹದಿನಾರು ಅಕ್ಷರಗಳು, ಮತ್ತು ನಾಲ್ಕನೆಯ ಪಾದದಲ್ಲಿ (16+4=20)ಇಪ್ಪತ್ತು ಅಕ್ಷರಗಳು-ಹೀಗೆ ಯೋಜಿತವಾಗಿರಬೇಕು. ಹೀಗಿದ್ದರೆ, ಇದು **ಪದಚತುರೂರ್ಧ್ವ ವೃತ್ತ.**

ಮಕರಾಲಯಃ = ಸಮುದ್ರ = ನಾಲ್ಕು. ಈ ವೃತ್ತದಲ್ಲಿ ಲಘು, ಗುರು, ಗಣಾದಿಗಳ ನಿರ್ದಿಷ್ಟನಿಯಮವೇನೂ ಇರುವುದಿಲ್ಲ. ಕೇವಲ ವರ್ಣಗಳ ವೃದ್ಧಿ ಇಲ್ಲಿ ಪ್ರಧಾನ.

೨. ಆಪೀಡ

ಗು ಗು
U U U U U U — —
ಪ್ರಥಮಮುದಿತವೃತ್ತೇ | (8=6+ಗು. ಗು)

ಗು ಗು
UUUUU U U UU U — —
ವಿಚರಿತ ವಿಷಮಚರಣಭಾಜಿ | (12=10+ಗು.ಗು.)

ಗು ಗು
U UU U UU UUU UU U UU— —
ಗುರುಕಯುಗಲನಿಧನ ಇಹ ಕಲಿತ ಆಪೀ | (16=14+ಗು.ಗು.)

ಗು ಗು
U UU U UU UUU UU U UUU UUU — —
ವಿಧೃತರುಚಿರಪದವಿತತಿಯತಿರಿತಿ ಭವತಿ ಪೀಡಃ || ೨ || (20=18+ಗು.ಗು.)

ಪದಚತುರೂರ್ಧ್ವದಲ್ಲಿ ಹೇಳಿದಂತೆಯೇ ಇಲ್ಲಿಯೂ ಪ್ರತಿಪಾದವಲ್ಲಿ ವರ್ಣಗಳ ವೃದ್ಧಿಯುಂಟು. ಆದರೆ, ಪ್ರತಿಪಾದದ ಕಡೆಯಲ್ಲಿ ಎರಡು ಗುರುವರ್ಣಗಳು ಇರಬೇಕು. ಇದು ಆಪೀಡ ವೃತ್ತ.

೩. ಕಲಿಕಾ

ಗು ಗು
U U U U UUUUU U— —
ಪ್ರಥಮಮಿತರಚರಣಸಮುತ್ಥಂ | (12= 10+ಗು.ಗು.)

ಗು ಗು
U U U UUU — —
ಶ್ರಯತಿ ಜಗತಿ ಲಕ್ಷ್ಮ | (8=6+ಗು.ಗು.)

ಗು ಗು
UUUUUUU UUU U U U U — —
ಇತರದಿತರಜನಿತಮಪಿ ಯದಿ ಚತುರ್ಥಂ | (16=14+ಗು.ಗು.)

ಗು ಗು
UU U U UUUU UUU U UUU UUU— —
ಚರಣಯುಗಲಕಮವಿಕೃತಮಪರಮಿತಿ ಕಲಿಕಾ ಸಾ || ೩ || (20=18+ಗು.ಗು.)

ಆಪೀಡವೃತ್ತದ ಎರಡನೆಯ ಪಾದವು ಮೊದಲನೆಯ ಪಾದವಾಗಿ ಪರಿವರ್ತನೆ ಹೊಂದಿದ್ದು, ಉಳಿದ ಮೂರು-ನಾಲ್ಕನೆಯ ಪಾದಗಳು ಯಥವತ್ತಾಗಿ ಇದ್ದಲ್ಲಿ, ಕಲಿಕಾ ವೃತ್ತ.

೪. ಲವಲೀ

ಗು ಗು
U U U U UUUUUU— —
ದ್ವಿಗುರುಯುತಸಕಲಚರಣಾಂತಾ | (12=10+ಗು.ಗು.)

ಗು ಗು
U UUUUUU U U UUU U U — —
ಮುಖಚರಣಗತಮನುಭವತಿ ಚ ತೃತೀಯಃ | (16=14+ಗು. ಗು.)

ಗು ಗು
UUU UU U — —
ಚರಣ ಇಹ ಚ ಲಕ್ಷ್ಯ | (8=6+ಗು. ಗು.)

ಗು ಗು
U U UU U UU U UU U U U UUU UU— —
ಪ್ರಕೃತಮಪರಮಖಿಲಮಪಿ ಯದಿ ಭವತಿ ಲವಲೀ ಸಾ || ೪ || (20=18+ಗು. ಗು.)

ಆಪೀಡವೃತ್ತದ ಮೊದಲಪಾದವು ಮೂರನೆಯ ಪಾದವಾಗಿರಬೇಕು. ಅಂದರೆ ಎಂಟು ವರ್ಣವುಳ್ಳದ್ದಾಗಿರಬೇಕು; ಮೊದಲ ಪಾದವು ಹನ್ನೆರಡು ವರ್ಣವುಳ್ಳದ್ದಾಗಿಯೂ, ಎರಡನೆಯ ಪಾದವು ಹದಿನಾರು ವರ್ಣವುಳ್ಳದ್ದಾಗಿಯೂ, ನಾಲ್ಕನೆಯ ಪಾದವು ಇಪ್ಪತ್ತುವರ್ಣವುಳ್ಳದ್ದಾಗಿಯೂ ಆಗಿರಬೇಕು. ಮತ್ತು ಪ್ರತಿ ಪಾದದ ಕಡೆಯ ಎರಡು ವರ್ಣಗಳು ಗುರುವೇ ಆಗಿರಬೇಕು. ಹೀಗಿದ್ದರೆ ಲವಲೀ ವೃತ್ತ.

೫. ಅಮೃತಧಾರಾ

ಗು ಗು
U U U U UUUU U U — —
ತೃತೀಯಮಧಿವಸತಿ ಯದಿ ತುರ್ಯಂ | (12=10+ಗು.ಗು.)

ಗು ಗು
UU U U UUUU U U UU U U — —
ಚರಮಚರಣಪದಮವಸಿತಿ ಗುರುಯುಗ್ಮಾ | (16=14+ಗು.ಗು.)

ಗು ಗು
U UU U U U U UUUUUU U U UUU— —
ನಿಖಿಲಮಪರಮುಪರಿತನಸಮಮಿಹ ಲಲಿತಪಾದಾ |

(20=18+ಗು.ಗು.)

ಗು ಗು
U U U U U U— —
ತ್ರಿತಯಮಮೃತಧಾರಾ || ೫ || (8=6+ಗು.ಗು.)

ಆಪೀಡವೃತ್ತದ ಪ್ರಥಮಪಾದವು ನಾಲ್ಕನೆಯ ಪಾದವಾಗಿರಬೇಕು. ಅಂದರೆ-ಮೊದಲ ಪಾದದಲ್ಲಿ ಹನ್ನೆರಡು ವರ್ಣಗಳು, ಎರಡನೆಯಪಾದದಲ್ಲಿ ಹದಿನಾರು ವರ್ಣಗಳು, ಮೂರನೆಯಪಾದದಲ್ಲಿ ಇಪ್ಪತ್ತು ವರ್ಣಗಳು, ನಾಲ್ಕನೆಯ ಪಾದದಲ್ಲಿ ಎಂಟು ವರ್ಣಗಳು ಇರಬೇಕು. ಆದರೆ, ಪ್ರತಿಪಾದದಲ್ಲಿ ಕಡೆಯ ಎರಡು ವರ್ಣಗಳು ಗುರುವೇ ಆಗಿರಬೇಕು. ಹೀಗಿದ್ದರೆ ಅಮೃತಧಾರಾ ವೃತ್ತ.

|| ಇತಿ ಪದಚತುರೂರ್ಧ್ವಪ್ರಕರಣಮ್ ||
ಇಲ್ಲಿಗೆ ಪದಚತುರೂರ್ಧ್ವಪ್ರಕರಣ ಮುಗಿದುದು.

## ೧. ಉದ್ಗತಾಪ್ರಕರಣ

೧.ಉದ್ಗತಾ ವೃತ್ತ

ಸ | ಜ | ಸ | ಲ
UU— | U—U | UU— | U
ಸಜಮಾದಿಮೇ ಸಲಘುಕೌ ಚ |

ನ | ಸ | ಜ | ಗು
UUU | UU— | U—U | —
ನಸಜಗುರುಕೇಷ್ವಥೋದ್ಗತಾ |

ಭ | ನ | ಜ | ಲ ಗು
—UU | UUU | U—U | U —
ತ್ರ್ಯಂಘ್ರಿಗತಭನಜಲಾಗಯುತಾಃ |

ಸ | ಜ | ಸ | ಜ | ಗು
UU— | U—U | UU— | U—U | —
ಸಜಸಾಜಗೌ ಚರಮ ಏಕತಃ ಪಠೇತ್ || ೧ ||

ಮೊದಲ ಪಾದದಲ್ಲಿ ಸಗಣ, ಜಗಣ, ಸಗಣ, ಲಘುವೂ, ಎರಡನೆಯ ಪಾದದಲ್ಲಿ ನಗಣ, ಸಗಣ, ಜಗಣ, ಗುರುವೂ, ಮೂರನೆಯ ಪಾದದಲ್ಲಿ ಭಗಣ, ನಗಣ,ಜಗಣ, ಲಘು, ಗುರುವೂ, ನಾಲ್ಕನೆಯ ಪಾದದಲ್ಲಿ ಸಗಣ, ಜಗಣ, ಸಗಣ, ಜಗಣ, ಗುರುವೂ ಇದ್ದಲ್ಲಿ ಉದ್ಗತಾ ವೃತ್ತ.

೨. ಸೌರಭಕ

ಸ | ಜ | ಸ | ಲ
UU— | U—U | UU— | U
ಚರಣತ್ರಯಂ ಭಜತಿ ಲಕ್ಷ್ಮ |

ನ | ಸ | ಜ | ಗು
UUU | UU— | U—U | —
ಯದಿ ನಿಖಿಲಮುದ್ಗತಾಗತಮ್ |

ರ | ನ | ಭ | ಗು
— U — | UUU | — UU | —
ರ್ನೌ ಭಗೌ | ಭವತಿ | ಸೌರಭ | ಕಂ |

ಸ | ಜ | ಸ | ಜ | ಗು
.UU— | U — U | UU— | U— U | —
ಚರಣೇ | ಯದೀಹ | ಭವತ | ಸ್ತೃತೀಯ | ಕೇ ॥ ೨ ॥

ಉದ್ಗತಾವೃತ್ತದ ಮೊದಲನೆಯ, ಎರಡನೆಯ ಮತ್ತು ನಾಲ್ಕನೆಯ ಪಾದಗಳ ಲಕ್ಷಣವೇ ಈ ಸೌರಭಕವೃತ್ತದ ಮೊದಲನೆಯ, ಎರಡನೆಯ ಮತ್ತು ನಾಲ್ಕನೆಯ ಪಾದಗಳಲ್ಲಿ ಕ್ರಮವಾಗಿ ಇರಬೇಕು. ಮತ್ತು ಮೂರನೆಯ ಪಾದದಲ್ಲಿ ರಗಣ, ನಗಣ, ಭಗಣ, ಗುರುವಿರಬೇಕು. ಇದು ಸೌರಭಕ ವೃತ್ತ. ಅಂದರೆ ಮೊದಲನೆಯ ಪಾದದಲ್ಲಿ-ಸಗಣ, ಜಗಣ, ಸಗಣ, ಲಘು, ಎರಡನೆಯ ಪಾದದಲ್ಲಿ - ನಗಣ, ಸಗಣ, ಜಗಣ, ಗುರು, ಮೂರನೆಯ ಪಾದದಲ್ಲಿ-ರಗಣ, ನಗಣ, ಭಗಣ, ಗುರು, ಮತ್ತು ನಾಲ್ಕನೆಯ ಪಾದದಲ್ಲಿ ಸಗಣ, ಜಗಣ, ಸಗಣ,ಜಗಣ, ಗುರು-ಹೀಗೆ ಇರುವುದು ಸೌರಭಕ.

೩. ಲಲಿತ

ಸ | ಜ | ಸ | ಲ
U U — | U—U | U U — | U
ನಯುಗಂ | ಸಕಾರ | ಯುಗಲಂ | ಚ |

ನ | ಸ | ಜ | ಗು
UUU | UU — | U — U | —
ಭಜತಿ | ಚರಣಂ | ತೃತೀಯ | ಕಮ್ |

ನ | ನ | ಸ | ಸ
UU U | UU U | UU— | U U—
ತದುದಿ | ತಗುರು | ಮತಿಭಿ | ರ್ಲಲಿತಂ |

ಸ | ಜ | ಸ | ಜ | ಗು
U U — | U —U | U U — | U — U | —
ಯದಿ ಶೇ | ಷಮಸ್ಯ | ಖಲು ಪೂ | ರ್ವತುಲ್ಯ | ಕಮ್ ॥ ೩ ॥

ಮೂರನೆಯ ಪಾದದಲ್ಲಿ ನಗಣ, ನಗಣ, ಸಗಣ, ಸಗಣಗಳಿರಬೇಕು. ಉಳಿದ ಒಂದು, ಎರಡು, ನಾಲ್ಕನೆಯ ಪಾದಗಳಲ್ಲಿ ಮೇಲೆ ಹೇಳಿದ ಉದ್ಗತಾವೃತ್ತದ ಲಕ್ಷಣವಿರಬೇಕು. ಹೀಗಿದ್ದರೆ ಅದು ಲಲಿತ ವೃತ್ತ.

॥ ಇತ್ಯುದ್ಗತಾಪ್ರಕರಣಮ್ ॥

ಇಲ್ಲಿಗೆ ಉದ್ಗತಾಪ್ರಕರಣ ಮುಗಿದುದು.

# ಉಪಸ್ಥಿತ ಪ್ರಚುಪಿತ ಪ್ರಕರಣ

## ೧. ಉಪಸ್ಥಿತ ಪ್ರಚುಪಿತ

ಮ | ಸ | ಜ | ಭ | ಗು ಗು
— — — | U U — | U — U | — U U | — —
ಮ್ಸೌ ಜ್ಭೌ ಗೌ ಪ್ರಥಮಾಂಘ್ರಿರೇಕತಃ ಪೃಥಗನ್ಯತ್ |

ಸ | ನ | ಜ | ರ | ಗು
U U — | U U U | U — U | — U — | —
ತ್ರಿತಯಂ ಸನಜರಗಾಸ್ತಥಾ ನನೌ ಸಃ |

ನ | ನ | ಸ
U U U | U U U | U U —
ತ್ರಿನಪರಿಕಲಿತಜಯೌ |

ನ | ನ | ನ | ಜ | ಯ
U U U | U U U | U U U | U — U | U — —
ಪ್ರಚುಪಿತಮಿದಮುದಿತಮುಪಸ್ಥಿತಪೂರ್ವಮ್ ||೧||

ಮೊದಲನೆಯ ಪಾದದಲ್ಲಿ ಮಗಣ, ಸಗಣ, ಜಗಣ, ಭಗಣ, ಗುರು, ಗುರು ಇರಬೇಕು; ಎರಡನೆಯ ಪಾದದಲ್ಲಿ ಸಗಣ, ನಗಣ, ಜಗಣ, ರಗಣ, ಗುರು ಇರಬೇಕು; ಮೂರನೆಯ ಪಾದದಲ್ಲಿ ನಗಣ, ನಗಣ, ಸಗಣ ಇರಬೇಕು; ಹಾಗೆಯೇ ನಾಲ್ಕನೆಯ ಪಾದದಲ್ಲಿ ನಗಣ, ನಗಣ, ನಗಣ, ಜಗಣ, ಯಗಣ, ಇರಬೇಕು. ಇದು ಉಪಸ್ಥಿತ ಪ್ರಚುಪಿತ ವೃತ್ತ.

## ೨. ಪ್ರವರ್ಧಮಾನ

ಮ | ಸ | ಜ | ಭ | ಗು ಗು
— — — | U U — | U — U | — U U | — —
ನೌ ಪಾದೇಽಥ ತೃತೀಯಕೇ ಸನೌ ನಸಯುಕ್ತೌ |

ಸ | ನ | ಜ | ರ | ಗು
U U — | U U U | U — U | — U — | —
ಪ್ರಥಮಾಂಘ್ರಿಕೃತಯತಿಃ ಪ್ರವರ್ಧಮಾನಮ್ |

ನ | ನ | ಸ | ನ | ನ | ಸ
U U U | U U U | U U — | U U U | U U U | U U —
ತ್ರಿತಯಮಪರಮಪಿ ಪೂರ್ವಸದೃಶಮಿಹ ಭವತಿ |

ನ | ನ | ನ | ಜ | ಯ
U U U | U U U | U U U | U — U | U — —
ಪ್ರತತಮತಿಭಿರಿತಿ ಗದಿತಂ ಖಲು ವೃತ್ತಮ್ ||೨||

ಮೇಲ್ಕಂಡ ಉಪಸ್ಥಿತ ಪ್ರಚುಪಿತವೃತ್ತದ ಲಕ್ಷಣವು ಮೊದಲನೆಯ ಪಾದ, ಎರಡನೆಯ ಪಾದ ಮತ್ತು ನಾಲ್ಕನೆಯ ಪಾದಗಳಲ್ಲಿ ಇದ್ದು, ಮೂರನೆಯ ಪಾದದಲ್ಲಿ ಮಾತ್ರ ನಗಣ, ನಗಣ, ಸಗಣ ನಗಣ, ನಗಣ, ಸಗಣ-ಇದ್ದಲ್ಲಿ, ಅದು ಪ್ರವರ್ಧಮಾನ ವೃತ್ತ. ಮೊದಲ ಪಾದದ ಕಡೆಯಲ್ಲಿ ಯತಿಯನ್ನು ಹೇಳಿಕೊಳ್ಳಬಹುದು.

೩. ಶುದ್ಧವಿರಾಡಾರ್ಷಭ

ಮ | ಸ | ಜ | ಭ | ಗು ಗು
— — — | U U — | U — U | — U U | — —
ಅಸ್ಮಿನ್ನೇ|ವ ತೃತೀ|ಯಪಾದ|ಕೇ ತಜ|ರಾಃ ಸ್ಯುಃ |

ಸ | ನ | ಜ | ರ | ಗು
U U — | U U U | U — U | — U — | —
ಪ್ರಥಮೇ| ಚ ವಿರ|ತಿರಾರ್ಷ|ಭಂ ಬ್ರುವ|ತಿ |

ತ | ಜ | ರ
— — U | U — U | — U —
ತಚ್ಛುದ್ಧ|ವಿರಾಟ್ಪು|ರಃಸ್ಥಿತಂ |

ನ | ನ | ಸ | ಸ | ಗು
U U U | U U U | U U — | U U — | —
ತ್ರಿತಯ|ಮಪರ|ಮಪಿ ಪೂ|ರ್ವಸಮಂ | ಸ್ಯಾತ್ || ೩ ||

ಪಠಾ : ಈ ಲಕ್ಷಣದ ನಾಲ್ಕನೆಯ ಪಾದದಲ್ಲಿ ವಾಸ್ತವವಾಗಿ ನಗಣ, ನಗಣ, ನಗಣ, ಜಗಣ, ಯಗಣ-ಹೀಗೆ ಗಣಗಳಿರಬೇಕು. ಆದರೆ ಇಲ್ಲಿ ನಗಣ, ನಗಣ, ಸಗಣ, ಸಗಣ, ಗುರು -ಇರುತ್ತವೆ. ಆದ್ದರಿಂದ ಈ ಪಾಠದಲ್ಲಿ ದೋಷವಿದೆಯೆಂದು ತಿಳಿಯಬಹುದು.

ನ | ನ | ನ | ಜ | ಯ
U U U | U U U | U U U | U — U | U — —
ತ್ರಿತಯ|ಮಪರ|ಮಪಿ ಯದಿ| ಪೂರ್ವ|ಸಮಂ ಸ್ಯಾತ್ ||

ಎಂಬ ಈ ಪಾಠವು ನಾಲ್ಕನೆಯ ಪಾದದ ಪಾಠವಿರಬೇಕೆಂದು ತಿಳಿಯುವುದು.

ಈಗ ಈ 'ಶುದ್ಧವಿರಾಡಾರ್ಷಭ ವೃತ್ತ'ದ ಲಕ್ಷಣವೆಂದರೆ-ಒಂದು -ಎರಡು-ನಾಲ್ಕನೆಯ ಪಾದಗಳಲ್ಲಿ ಉಪಸ್ಥಿತಪ್ರಚುಪಿತವೃತ್ತದ ಲಕ್ಷಣವೇ ಇರಬೇಕು. ಮತ್ತು ಮೂರನೆಯ ಪಾದದಲ್ಲಿ ತಗಣ, ಜಗಣ, ರಗಣ, ಇರಬೇಕು ಇದು ಶುದ್ಧವಿರಾಡಾರ್ಷಭ.

|| ಇತ್ಯುಪಸ್ಥಿತಪ್ರಚುಪಿತಪ್ರಕರಣಮ್ ||

ಇಲ್ಲಿಗೆ ಉಪಸ್ಥಿತಪ್ರಚುಪಿತ ಪ್ರಕರಣ ಮುಗಿದುದು

ಅಹಿ

೧. ಗಾಥಾ

**ವಿಷಮಾಕ್ಷರಪಾದತ್ವಾತ್ ಪಾದೈರಸಮಂಜಸಂ ಧರ್ಮವತ್ |**
**ಯಚ್ಛಂದಸಿ ನೋಕ್ತಮತ್ರ ಗಾಥೇತಿ ತತ್ ಸೂರಿಭಿಃ ಪ್ರೋಕ್ತಮ್ || ೧ ||**

ಈ ಛಂದಶಾಸ್ತ್ರದಲ್ಲಿ ಸಾಮಾನ್ಯಲಕ್ಷಣ, ವಿಶೇಷಲಕ್ಷಣಗಳ ಮುಖಾಂತರ ಹೇಳದೇ ಇರುವ ವೃತ್ತವನ್ನು ಛಂದಶ್ಶಾಸ್ತ್ರಜ್ಞರು ಗಾಥಾ -ಎಂದು ಕರೆದಿದ್ದಾರೆ. ಇದಕ್ಕೆ ಕಾರಣವೆಂದರೆ-ಈ ವೃತ್ತದಲ್ಲಿ ನಿಯತವಾದ ಪಾದಸಂಖ್ಯೆ ಇರುವುದಿಲ್ಲ, ಏಕೆಂದರೆ, ಇದರಲ್ಲಿ ವಿಷಮಾಕ್ಷರ ಪಾದಗಳಿರುವುದರಿಂದ, ಅಥವಾ ವಿಷಮವರ್ಣತ್ವವಿರುವುದರಿಂದ, ಅಂದರೆ ಪ್ರಾಯಃ ಈ ಗಾಥಾವೃತ್ತವು ಪುರಾಣಾದಿಗಳಲ್ಲಿ, ಧರ್ಮಶಾಸ್ತ್ರಾದಿಗಳಲ್ಲಿ ಮಾತ್ರವೇ ಹೆಚ್ಚು ಪ್ರಚುರವಾಗಿದ್ದು, ಕಾವ್ಯಾದಿಗಳಲ್ಲಿ ಅಷ್ಟಾಗಿ ಪ್ರಚುರವಾಗಿರುವುದಿಲ್ಲ.

ಇತಿ ವೃತ್ತರತ್ನಕರಾಖ್ಯೇ ಛಂದಸಿ ವಿಷಮವೃತ್ತಕಥನಂ ನಾಮ
|| ಪಂಚಮೋಽಧ್ಯಾಯಃ ||
ಇಲ್ಲಿಗೆ ವಿಷಮವೃತ್ತವರ್ಣನಾತ್ಮಕವಾದ ಐದನೆಯ ಅಧ್ಯಾಯ ಮುಗಿದುದು.

---

## || ಷಷ್ಠೋಽಧ್ಯಾಯಃ ||

### || ಆರನೆಯ ಅಧ್ಯಾಯ ||
### ( ಷಟ್‌ಪ್ರತ್ಯಯಾಧ್ಯಾಯ )

**ಪ್ರಸ್ತಾರೋ ನಷ್ಟಮುದ್ದಿಷ್ಟಮೇಕದ್ವ್ಯಾದಿಲಗಕ್ರಿಯಾ |**
**ಸಂಖ್ಯಾನಮಧ್ವಯೋಗಶ್ಚ ಷಡೇತೇ ಪ್ರತ್ಯಯಾಃ ಸ್ಮೃತಾಃ || ೧ ||**
**ಪಾದೇ ಸರ್ವಗುರಾವಾದ್ಯಾಲ್ಲಘುಂ ನ್ಯಸ್ಯ ಗುರೋರಧಃ |**
**ಯಥೋಪರಿ ತಥಾ ಶೇಷಂ ಭೂಯಃ ಕುರ್ಯಾದಮುಂ ವಿಧಿಮ್ || ೨ ||**
**ಊನೇ ದದ್ಯಾದ್ಗುರೂನೇವ ಯಾವತ್ಸರ್ವಲಘುರ್ಭವೇತ್ |**
**ಪ್ರಸ್ತಾರೋಽಯಂ ಸಮಾಖ್ಯಾತಶ್ಛಂದೋವಿಚಿತಿವೇದಿಭಿಃ || ೩ ||**
**(ಯುಗ್ಮಮ್)**

೧. ಈಗ ಷಟ್‌ಪ್ರತ್ಯಯಗಳನ್ನು ಹೇಳಲಾಗುತ್ತದೆ. ಅವುಗಳೆಂದರೆ —
೧. ಪ್ರಸ್ತಾರಃ ೨. ನಷ್ಟಮ್ ೩. ಉದ್ದಿಷ್ಟಮ್ ೪. ಏಕದ್ವ್ಯಾದಿಲಗಕ್ರಿಯಾ ೫. ಸಂಖ್ಯಾನಮ್ ಮತ್ತು ೬. ಅಧ್ವಯೋಗಃ - ಈ ಆರನ್ನು ಛಂದಶ್ಶಾಸ್ತ್ರಪಂಡಿತರು 'ಷಟ್‌ಪ್ರತ್ಯಯಗಳು' ಎಂದು ಕರೆದಿದ್ದಾರೆ. ಕ್ರಮವಾಗಿ ಇವುಗಳ ವಿವರಣೆಯೆಂದರೆ —

೧. ಪ್ರಸ್ತಾರವಿಧಿ (ಕಾರಿಕಾ ೨ + ೩ ಏಕಾನ್ವಯ)

ಸರ್ವಗುರುವುಳ್ಳ ಮೂರು ಅಕ್ಷರದ ಒಂದು ಪಾದವನ್ನು ಉದಾಹರಣೆಗೆ ತೆಗೆದುಕೊಳ್ಳೋಣ. ಮೂರು ಅಕ್ಷರಗಳ ಜಾತಿ - ಎಂದರೆ 'ಮಧ್ಯಾ.' ಇದರಲ್ಲಿ ಮಗಣ ಅಂದರೆ ಮೂರು ಗುರುವುಳ್ಳ ವೃತ್ತವೆಂದರೆ 'ಮೋ ನಾರೀ ' ನಾರೀವೃತ್ತ '. ಇದರ ಮೂರು ಅಕ್ಷರಗಳ ಗುರು ಚಿಹ್ನೆಯನ್ನು

ಮೊದಲು ಬರೆದುಕೊಳ್ಳಬೇಕು. ಅಂದರೆ —

| — | — | — | (ಮಗಣ) ಇದು ಮೊದಲ ಭೇದ |
|---|---|---|---|
| U | — | — | (ಯಗಣ) ಎರಡನೆಯ ಭೇದ |
| — | U | — | (ರಗಣ) ಮೂರನೆಯ ಭೇದ |
| U | U | — | (ಸಗಣ) ನಾಲ್ಕನೆಯ ಭೇದ |
| — | — | U | (ತಗಣ) ಐದನೆಯ ಭೇದ |
| U | — | U | (ಜಗಣ) ಆರನೆಯ ಭೇದ |
| — | U | U | (ಭಗಣ) ಏಳನೆಯ ಭೇದ |
| U | U | U | (ನಗಣ) ಎಂಟನೆಯ ಭೇದ |

ಮೊದಲ ಗುರುವಿನ ಕೆಳಗೆ ಎರಡನೆಯ ಸಾಲಿನಲ್ಲಿ ಲಘುವನ್ನು ಬರೆದು, ಉಳಿದವನ್ನು ಗುರುವಾಗಿಯೇ ಇಡಬೇಕು. ಮೂರನೆಯ ಸಾಲಿನಲ್ಲಿ ಮೊದಲ ಲಘುವಿನ ಕೆಳಗೆ ಗುರುವನ್ನು ಬರೆದು ಗುರುವಿನ ಕೆಳಗೆ ಲಘುವನ್ನು ಬರೆದು, ಕಡೆಯ ಗುರುವಿನ ಕೆಳಗೆ ಗುರುವನ್ನೇ ಬರೆಯಬೇಕು. ನಾಲ್ಕನೆಯ ಸಾಲಿನಲ್ಲಿ ಗುರುವಿನ ಕೆಳಗೆ ಲಘು, ಲಘುವಿನ ಕೆಳಗೆ ಲಘು, ಕಡೆಯ ಗುರುವಿನ ಕೆಳಗೆ ಗುರು-ಹೀಗೆ ಗುರುತಿಸಬೇಕು.

ಐದನೆಯ ಸಾಲಿನಲ್ಲಿ ಮೊದಲ ಲಘುವಿನ ಕೆಳಗೆ ಗುರು, ಎರಡನೆಯ ಲಘುವಿನ ಕೆಳಗೆ ಗುರು ಮತ್ತು ಕಡೆಯ ಗುರುವಿನ ಕೆಳಗೆ ಲಘು ಹೀಗೆ ಗುರುತಿಸಬೇಕು. ಆರನೆಯ ಸಾಲಿನಲ್ಲಿ ಮೊದಲನೆಯ ಗುರುವಿನ ಕೆಳಗೆ ಲಘುವನ್ನು, ಎರಡನೆಯ ಗುರುವಿನ ಕೆಳಗೆ ಪುನಃ ಗುರುವನ್ನೂ, ಕಡೆಯ ಲಘುವಿನ ಕೆಳಗೆ ಲಘುವನ್ನೂ ಗುರುತಿಸಬೇಕು. ಏಳನೆಯ ಸಾಲಿನಲ್ಲಿ ಮೊದಲ ಲಘುವಿನ ಕೆಳಗೆ ಗುರುವನ್ನೂ, ಎರಡನೆಯ ಗುರುವಿನ ಕೆಳಗೆ ಲಘುವನ್ನೂ, ಮತ್ತು ಕಡೆಯ ಲಘುವಿನ ಕೆಳಗೆ ಲಘುವನ್ನೂ ಗುರುತಿಸಬೇಕು. ಎಂಟನೆಯ ಸಾಲಿನಲ್ಲಿ ಮೊದಲ ಗುರುವಿನ ಕೆಳಗೆ ಲಘುವನ್ನೂ, ಎರಡನೆಯ ಲಘುವಿನ ಕೆಳಗೆ ಲಘುವನ್ನೂ, ಮತ್ತು ಕಡೆಯ ಲಘುವಿನ ಕೆಳಗೆ ಲಘುವನ್ನೂ ಗುರುತಿಸಬೇಕು. ಅಂದರೆ ಕಡೆಯ ಸಾಲಿನಲ್ಲಿ ಎಲ್ಲವೂ ಕೇವಲ ಲಘುಗಳಿರುವಂತೆ ಗುರುತಿಸಬೇಕು. ಇದರ ಇನ್ನೂ ಸುಲಭದ ರೀತಿಯೆಂದರೆ, ಮೊದಲನೆಯ ಕಂಬಸಾಲಿನಲ್ಲಿ ಗುರು, ಲಘು, ಗುರು, ಲಘು, ಗುರು, ಲಘು, ಗುರು, ಲಘು -ಹೀಗೆ ವ್ಯತ್ಯಯವಾಗುತ್ತದೆ. ಎರಡನೆಯ ಕಂಬಸಾಲಿನಲ್ಲಿ ಎರಡು ಗುರು, ಬಳಿಕ ಎರಡು ಲಘು, ಅನಂತರ ಎರಡು ಗುರು, ಬಳಿಕ ಎರಡು ಲಘು -ಹೀಗೆ ವ್ಯತ್ಯಯವಾಗುತ್ತದೆ. ಮೂರನೆಯ ಅಥವಾ ಕಡೆಯ ಸಾಲಿನಲ್ಲಿ ಮೊದಲ ನಾಲ್ಕು ಗುರು, ಅನಂತರ ಕಡೆಯ ನಾಲ್ಕು ಲಘು-ಹೀಗೆ ಪ್ರಸ್ತಾರ ರೀತಿ ಉಂಟಾಗುತ್ತದೆ. ಈ ಮಧ್ಯಾಛಂದಸ್ಸಿನಲ್ಲಿ ಮೇಲೆ ಕಾಣಿಸಿದಂತೆ ಗಣಗಳನ್ನುಳ್ಳ ಎಂಟು ವೃತ್ತ ಭೇದಗಳಾಗುತ್ತವೆ—ಎಂದು ತಿಳಿಯಬೇಕು. ಇದನ್ನೇ ಛಂದಶ್ಶಾಸ್ತ್ರವಿಶಾರದರು "ಪ್ರಸ್ತಾರ' ಎಂದು ಕರೆದಿದ್ದಾರೆ.

ನಾಲ್ಕು ಅಕ್ಷರದ ವೃತ್ತವಾದರೆ

ಎಲ್ಲ ಗುರುಗಳಿಂದ ಪ್ರಾರಂಭ,
ಕಡೆಯಲ್ಲಿ ಎಲ್ಲ ಲಘು
ಗಳಿಂದ ಅಂತ್ಯ — ಹೀಗೆ
ಇರುವಂತೆ ಪ್ರಸ್ತಾರ
ಹಾಕುವ ಕ್ರಮವಾಗಿರುತ್ತದೆ.
ಅಂದರೆ ನಾಲ್ಕು ಅಕ್ಷರದ
ಪ್ರತಿಷ್ಠಾಛಂದಸ್ಸು ಒಟ್ಟು
ಹದಿನಾರು ಭೇದಗಳನ್ನುಳ್ಳದ್ದು
ಎಂದು ಮೊತ್ತಾಗಿ
ತಿಳಿಯಬೇಕು

| | | | | |
|---|---|---|---|---|
| — | — | — | — | (1) |
| U | — | — | — | (2) |
| — | U | — | — | (3) |
| U | U | — | — | (4) |
| — | — | U | — | (5) |
| U | — | U | — | (6) |
| — | U | U | — | (7) |
| U | U | U | — | (8) |
| — | — | — | U | (9) |
| U | — | — | U | (10) |
| — | U | — | U | (11) |
| U | U | — | U | (12) |
| — | — | U | U | (13) |
| U | — | U | U | (14) |
| — | U | U | U | (15) |
| U | U | U | U | (16) |

## ೨. ನಷ್ಟವೃತ್ತವಿಧಿ (ಕಾರಿಕೆ - ೪)

**ನಷ್ಟಸ್ಯ ಯೋ ಭವೇದಂಕಸ್ತಸ್ಯಾರ್ಧೇऽರ್ಧೇ ಸಮೇ ಚ ಲಃ |**
**ವಿಷಮೇ ಚೈಕಮಾಧಾಯ ತಸ್ಯಾರ್ಧೇऽರ್ಧೇಗುರುರ್ಭವೇತ್ || ೪ ||**

ಯಾವುದಾದರೂ ನಷ್ಟಗೊಂಡಿರುವ ವೃತ್ತದ ಲಕ್ಷಣವನ್ನು ತಿಳಿಯಬೇಕಾದರೆ, ಆ ನಷ್ಟವೃತ್ತದ ಸಂಖ್ಯೆಯು ಸಮಸಂಖ್ಯೆಯಾಗಿದ್ದಲ್ಲಿ ಮೊದಲು ಲಘುವನ್ನು ಇಟ್ಟುಕೊಳ್ಳಬೇಕು. ಅನಂತರ ಈ ಸಂಖ್ಯೆಯನ್ನು ಅರ್ಧಮಾಡಿಕೊಳ್ಳಬೇಕು. ಈ ಅರ್ಧಸಂಖ್ಯೆಯು ಸಮಸಂಖ್ಯೆಯಾದರೆ ಪುನಃ, ಹಿಂದಿನ ಲಘುವಿನ ಮುಂದೆ ಲಘುಚಿಹ್ನೆಯನ್ನು ಬರೆಯಬೇಕು; ಆ ಸಂಖ್ಯೆಯು ಬೆಸಸಂಖ್ಯೆಯಾದರೆ, ಗುರುಚಿಹ್ನೆಯನ್ನು ಇಟ್ಟುಕೊಳ್ಳಬೇಕು. ಹಾಗೆ ಉಳಿದ ಸಂಖ್ಯೆಯು ಸಮಸಂಖ್ಯೆಯೇ ಆಗಿರಲಿ, ಅಥವಾ ಬೆಸಸಂಖ್ಯೆಯೇ ಆಗಿರಲಿ, ಪುನಃ ಅರ್ಧಿಸಲು ಅಸಾಧ್ಯವಾಗಿದ್ದಲ್ಲಿ ಆ ಸಂಖ್ಯೆಗೆ ಒಂದು ಸಂಖ್ಯೆಯನ್ನು ಸೇರಿಸಿ ಅದನ್ನು ಅರ್ಧಿಸಿದರೆ, ಬರುವ ಸಂಖ್ಯೆಯು ವಿಷಮವಾದರೆ ಗುರು ಚಿಹ್ನೆಯನ್ನೂ, ಸಮವಾದರೆ ಲಘು ಚಿಹ್ನೆಯನ್ನೂ, ಬರೆಯಬೇಕು. ಹೀಗೆ ವೃತ್ತದ ಸಂಖ್ಯೆಯು ಪೂರ್ಣಗೊಳ್ಳುವವರೆಗೆ ಈ ಪ್ರಕ್ರಿಯೆಯನ್ನು ಮಾಡುತ್ತಾ, ಉದ್ದಿಷ್ಟ ಸಂಖ್ಯೆಯ ವೃತ್ತದ

ಸ್ವರೂಪವನ್ನು ನಿರ್ಧರಿಸುವುದು. ಉದಾಹರಣೆ—

ಮೂರು ಅಕ್ಷರಗಳ ಪ್ರಸ್ತಾರ (ವೃತ್ತ)ದಲ್ಲಿ, ಎರಡನೆಯ ವೃತ್ತಭೇದವು ಯಾವ ಸ್ವರೂಪವುಳ್ಳದ್ದು? ಎಂಬುದು ಪ್ರಶ್ನೆ. ವೃತ್ತಭೇದದ ಸಂಖ್ಯೆ ಎರಡು. ಇದು ಸಮಸಂಖ್ಯೆಯಾಗಿರುವುದು. ಮೊದಲು ಲಘು ಚಿಹ್ನೆಯನ್ನು ಗುರುತು ಮಾಡಿಕೊಳ್ಳಬೇಕು. ಈ ಎರಡನ್ನು ಅರ್ಧಮಾಡಿದರೆ ಬರುವ ಸಂಖ್ಯೆ-ಒಂದು. ಇದು ವಿಷಮಸಂಖ್ಯೆಯಾಗಿರುವುದರಿಂದ ಮೊದಲ ಲಘುವಿನ ಮುಂದೆ ಗುರುಚಿಹ್ನೆಯನ್ನು ಹಾಕಬೇಕು. ಈಗ ಈ ಒಂದು ಸಂಖ್ಯೆ ವಿಷಮವಾಗಿರುವುದರಿಂದ ಇದಕ್ಕೆ ಒಂದನ್ನು ಸೇರಿಸಬೇಕು. ಅದು ಎರಡು ಆಗುತ್ತದೆ. ಮತ್ತೆ ಇದನ್ನು ಅರ್ಧಿಸಿದರೆ ಒಂದು ಬರುತ್ತದೆ. ಇದು ವಿಷಮಸಂಖ್ಯೆಯಾಗಿರುವುದರಿಂದ ಗುರುವಿನ ಮುಂದೆ ಪುನಃ ಗುರು ಚಿಹ್ನೆಯನ್ನು ಹಾಕಬೇಕು. ಹೀಗೆ ಮೂರು ಪ್ರಸ್ತಾರಗಳು ಅಂದರೆ U — — ದೊರೆಯುತ್ತವೆ. ಅಂದರೆ ಎರಡನೆಯ ಭೇದದ ಸ್ವರೂಪ U— — (ಯಗಣ)ಆಗಿರುತ್ತದೆ. ಹಾಗೆಯೇ ಮೂರನೆಯ ಭೇದವಾವುದು ? ಎಂದರೆ, ಮೂರು ವಿಷಮ ಸಂಖ್ಯೆಯಾಗಿರುವುದರಿಂದ ಮೊದಲು ಗುರುಚಿಹ್ನೆ. ಮೂರು ಅರ್ಧಮಾಡಲು ಬರುವುದಿಲ್ಲವಾದ್ದರಿಂದ, ಇದಕ್ಕೆ ಒಂದನ್ನು ಸೇರಿಸಬೇಕು. ಬರುವ ಸಂಖ್ಯೆ ನಾಲ್ಕು. ಇದನ್ನು ಅರ್ಧಿಸಿದರೆ ಬರುವ ಸಂಖ್ಯೆ ಎರಡು. ಇದು ಸಮಸಂಖ್ಯೆಯಾಗಿರುವುದರಿಂದ ಗುರುವಿನ ಮುಂದೆ ಲಘು ಚಿಹ್ನೆ ಇಡಬೇಕು. ಈ ಎರಡರ ಅರ್ಧ ಒಂದು. ಇದು ವಿಷಮಸಂಖ್ಯೆಯಾಗಿರುವುದರಿಂದ ಗುರು ಚಿಹ್ನೆ ಇಡಬೇಕು ಆಗ —U— ಎಂಬ ರಗಣಾತ್ಮಕ ತೃತೀಯ ಭೇದ ದೊರೆಯುತ್ತದೆ. ಹೀಗೆಯೇ ಇತರ ಭೇದಗಳ ಪರಿಜ್ಞಾನ.

|| ಇತಿ ನಷ್ಟವೃತ್ತವಿಧಿಃ ||

ಇಲ್ಲಿಗೆ ನಷ್ಟವೃತ್ತವಿಧಿಯು ಮುಗಿದುದು

---

### ೩. ಉದ್ದಿಷ್ಟಪಾದಸಂಖ್ಯಾವಿಧಿ (ಕಾರಿಕೆ — ೫)

ಉದ್ದಿಷ್ಟಂ ದ್ವಿಗುಣಾನಂಕಾನುಪರ್ಯಾದ್ಯಾತ್ ಸಮಾಲಿಖೇತ್ |
ಲಘುಸ್ಥಾನೇ ತು ಯೇಽಂಕಾಃ ಸ್ಯುಸ್ತೈಃ ಸೈಕೈರ್ಮಿಶ್ರಿತೈರ್ಭವೇತ್ || ೫ ||

ಉದ್ದಿಷ್ಟವಾದ ವೃತ್ತಪಾದದ ಹೆಸರನ್ನು ಬರೆದುಕೊಂಡು, ಮೊದಲ ಅಕ್ಷರದ ಕೆಳಗೆ ಒಂದು (1) ಎಂಬ ಸಂಖ್ಯೆಯನ್ನು ಬರೆಯಬೇಕು. ಅನಂತರ ಎರಡನೆಯ ಅಕ್ಷರದ ಕೆಳಗೆ ಒಂದರ ಎರಡರಷ್ಟು ಅಂದರೆ 1 x 2 = 2, ಹೀಗೆ ಗುಣಿತದಿಂದ ಬಂದ ಎರಡು —ಸಂಖ್ಯೆಯನ್ನು ಬರೆಯಬೇಕು. ಹಾಗೆಯೇ ಮೂರನೆಯ ಅಕ್ಷರದ ಕೆಳಗೆ, ಈ ಎರಡು ಸಂಖ್ಯೆಯ ದ್ವಿಗುಣಿತ ಅಂದರೆ 2x 2=4, ನಾಲ್ಕು— ಸಂಖ್ಯೆಯನ್ನು ಬರೆಯಬೇಕು. ಹೀಗೆ ಹೀಗೆಯೇ ಮುಂದು ಮುಂದಿನ ಅಕ್ಷರಗಳ ಅಡಿಯಲ್ಲಿ ಎರಡರಷ್ಟು ಎರಡರಷ್ಟು ಸಂಖ್ಯೆಯನ್ನು ಬರೆಯುತ್ತಾ ಸಾಗಬೇಕು. ಹಿಂದಿನಲ್ಲಿ ಲಘ್ವಕ್ಷರದ ಕೆಳಗೆ ಯಾವ ಸಂಖ್ಯೆಯುಂಟೋ, ಆ ಸಂಖ್ಯೆಗೆ ಒಂದನ್ನು ಸೇರಿಸಬೇಕು. ಹೀಗೆ ಸೇರಿಸುವುದರಿಂದ ಬರುವ ಸಂಖ್ಯೆಯೇ ಉದ್ದಿಷ್ಟವೃತ್ತದ ಸಂಖ್ಯೆಯಾಗುತ್ತದೆ. ಉದಾಹರಣೆ—

ಮಧ್ಯಾಛಂದಸ್ಸಿನ (ಮೂರು ಅಕ್ಷರ) 'ಮೃಗೀ' ವೃತ್ತದ ಲಕ್ಷಣ ಹೀಗಿದೆ- 'ರೋ ಮೃಗೀ' ಇದರ ಕೆಳಗೆ ಕ್ರಮವಾಗಿ 1 2 4 ಬರೆಯಬೇಕು — (ರೋ ಮೃಗೀ / 1 2 4)

(1, 1 x 2 = 2, 2 x 2 = 4)

ಹೀಗೆ ಬರೆದ ಬಳಿಕ, ಲಘ್ವಕ್ಷರವಾದ 'ಮೃ' ವರ್ಣದ ಕೆಳಗೆ ಇರುವ ಸಂಖ್ಯೆ ಎರಡಕ್ಕೆ ಒಂದನ್ನು ಸೇರಿಸಬೇಕು (2+1=3) ಬರುವ ಸಂಖ್ಯೆ 'ಮೂರು', ಈ ವೃತ್ತದ ಸಂಖ್ಯೆಯನ್ನು ಸೂಚಿಸುತ್ತದೆ. ಅಂದರೆ, 'ಮಧ್ಯಾ' ಛಂದಸ್ಸಿನಲ್ಲಿ, 'ಮೃಗೀ' ಎಂಬ ವೃತ್ತವು ಮೂರನೆಯದಾಗಿರುತ್ತದೆ.— ಎಂದು ತಿಳಿಯಬೇಕು. ಹೀಗೆಯೇ ಇತರ ವೃತ್ತಗಳ ಬಗ್ಗೆ ಸಹ ತಿಳಿಯುವುದು.

|| ಇತಿ ಉದ್ದಿಷ್ಟಪಾದಸಂಖ್ಯಾವಿಧಿಃ ||

ಇಲ್ಲಿಗೆ ಉದ್ದಿಷ್ಟಪಾದಸಂಖ್ಯಾವಿಧಿಯು ಮುಗಿದುದು

---

೪. ಏಕ — ದ್ವ್ಯಾದಿಗುರುಲಘುಸಂಖ್ಯಾವಿಧಿ — (ಕಾರಿಕೆ ೬ + ೭)

ವರ್ಣಾನ್ ವೃತ್ತಭವಾನ್ ಸೈಕಾನೌತ್ತರಾಧರ್ಯತಃ ಸ್ಥಿತಾನ್ |
ಏಕಾದಿಕ್ರಮತಶ್ಚೈತಾನುಪರ್ಯುಪರಿ ನಿಕ್ಷಿಪೇತ್ || ೬ ||
ಉಪಾಂತ್ಯತೋ ನಿವರ್ತೇತ ತ್ಯಜನ್ನೇಕೈಕಮೂರ್ಧ್ವತಃ |
ಉಪರ್ಯಾದ್ಯಾದ್ಗುರೋರೇವಮೇಕದ್ವ್ಯಾದಿ ಲಗಕ್ರಿಯಾ || ೭ ||

(ಯುಗ್ಮಮ್)

ಯಾವುದೇ ವೃತ್ತವು ಎಷ್ಟು ವರ್ಣವುಳ್ಳದ್ದು? ಎಂಬುದನ್ನು ಮೊದಲು ತಿಳಿಯಬೇಕು. ಅಷ್ಟು ಅಕ್ಷರಗಳಿಗೆ ಒಂದನ್ನು ಸೇರಿಸಿ ಕಂಬಾಕಾರವಾಗಿ ಒಂದು, ಒಂದು, ಒಂದು ಹೀಗೆ ಬರೆದುಕೊಳ್ಳಬೇಕು. ಕಡೆಯ ಒಂದು -ಸಂಖ್ಯೆಯ ಮುಂದೆ ವೃತ್ತಪಾದದ ವರ್ಣಗಳಷ್ಟೇ ಸಂಖ್ಯೆಯ ಒಂದು - ಒಂದು -ಇತ್ಯಾದಿ ಅಡ್ಡಸಾಲಿನಲ್ಲಿ ಬರೆದುಕೊಳ್ಳಬೇಕು. ಮೊದಲನೆಯ ಕಂಬಸಾಲನ್ನು ಬಿಟ್ಟು, ಎರಡನೆಯ ಕಂಬಸಾಲಿನ ಕಡೆಯ ಒಂದಕ್ಕೆ ಮೊದಲ ಕಂಬಸಾಲಿನಲ್ಲಿ ಐದನೆಯ ಸ್ಥಾನದಲ್ಲಿರುವ ಒಂದಕ್ಕೂ ಸೇರಿಸಿ, ಎರಡನೆಯ ಕಂಬಸಾಲಿನ, ಕೆಳಗಿನಿಂದ ಎರಡನೆಯ ಸ್ಥಾನದಲ್ಲಿ ಬರೆಯಬೇಕು. ಹೀಗೆಯೇ ಈ ಕ್ರಮವನ್ನು ಒಂದು ಉದಾಹರಣೆಯೊಂದಿಗೆ ತಿಳಿಯುವುದು ಸೂಕ್ತ.

ಉದಾಹರಣೆಗೆ - ಸುಪ್ರತಿಷ್ಠಾ-ಛಂದಸ್ಸನ್ನು ನೋಡೋಣ. ಈ ಛಂದಸ್ಸು ಐದು ಅಕ್ಷರಗಳನ್ನುಳ್ಳದ್ದು. ಆದ್ದರಿಂದ 5 + 1 = 6 ಈ ಸಂಖ್ಯೆಯನ್ನು ಮೊದಲ ಕಂಬಸಾಲಿನಲ್ಲಿ ಬರೆದುಕೊಳ್ಳಬೇಕು.

| | ① | ② | ③ | ④ | ⑤ |
|---|---|---|---|---|---|
| 1 ↓ | ① | | | | |
| 2 | 1 | (4+1) ⑤ | — | | |
| 3 ↓ | 1 | (3+1) 4 | (6+4) ⑩ | | |
| 4 | 1 | (2+1) 3 | (3+3) 6 | (4+6) ⑩ | |
| 5 ↓ | 1 | ↑ (1+1) 2 | (1+2) 3 | (1+3) 4 | (1+4) ⑤ |
| 6 | 1 | 1 | 1 | 1 | ① |
| | → | | → | | |

ಎರಡನೆಯ ಕಂಬಸಾಲಿನಲ್ಲಿನ ಕಡೆಯ ಒಂದಕ್ಕೆ ಒಂದನ್ನು ಸೇರಿಸಿ ಐದನೆಯ ಸಾಲಿನ, ಎರಡನೆಯ ಕಂಬಸಾಲಿನಲ್ಲಿ ಬರೆಯಬೇಕು. ಈ ಎರಡಕ್ಕೆ ಒಂದನ್ನು ಸೇರಿಸಿ ನಾಲ್ಕನೆಯ ಸಾಲಿನ, ಎರಡನೆಯ ಕಂಬಸಾಲಿನ ಮೂರನೆಯದನ್ನಾಗಿ ಬರೆಯಬೇಕು. ಈ ಮೂರು ಸಂಖ್ಯೆಗೆ ಒಂದನ್ನು ಸೇರಿಸಿ ಮೂರನೆಯ ಸಾಲಿನ ಎರಡನೆಯ ಕಂಬಸಾಲಿನಲ್ಲಿ ಬರೆಯಬೇಕು. ಈ ನಾಲ್ಕಕ್ಕೆ ಒಂದನ್ನು ಸೇರಿಸಿ, ಐದನ್ನು ಎರಡನೆಯ ಸಾಲಿನ -ಎರಡನೆಯ ಕಂಬಸಾಲಿನಲ್ಲಿ ಬರೆಯಬೇಕು. ಹೀಗೆಯೇ ಈ ಮೇಲೆ ಕಾಣಿಸಿರುವಂತೆ, ಮೂರನೆಯ ಕಂಬಸಾಲಿನಲ್ಲಿ ಕ್ರಮವಾಗಿ ಒಂದು, ಮೂರು, ಆರು, ಹತ್ತನ್ನು ಗುರುತಿಸಬೇಕು. ನಾಲ್ಕನೆಯ ಕಂಬಸಾಲಿನಲ್ಲಿ ಒಂದು, ನಾಲ್ಕು, ಹತ್ತು-ಗುರುತಿಸಬೇಕು. ಕಡೆಯಸಾಲಿನಲ್ಲಿ ಒಂದು, ಐದು-ಬರುತ್ತದೆ. ಈಗ ವೃತ್ತದಲ್ಲಿ ಗುರುತಿಸಿರುವ ಒಂದು, ಐದು, ಹತ್ತು, ಐದು, ಒಂದು -ಈ ಸಂಖ್ಯೆಗಳನ್ನು ಕೂಡಿಸಿದರೆ ಒಟ್ಟು ಮೂವತ್ತೆರಡು ಸಂಖ್ಯೆ ಬರುತ್ತದೆ. ಈ ಸಂಖ್ಯೆಯು, ಐದಕ್ಷರದ ವೃತ್ತ ಭೇದಗಳನ್ನು ತಿಳಿಸುತ್ತದೆ. ಅಂದರೆ, ಸುಪ್ರತಿಷ್ಠಾದಲ್ಲಿ ಒಟ್ಟು ಮುವತ್ತೆರಡು ಭೇದಗಳಾಗುತ್ತವೆ - ಎಂದು ತಿಳಿಯಬೇಕು.

ಈಗ ಗುರ್ವಕ್ಷರ, ಲಘ್ವಕ್ಷರಗಳ ಪರಿಜ್ಞಾನ, ಹೇಗೆಂದರೆ, ಗುರ್ವಕ್ಷರ ಸಂಖ್ಯೆಯನ್ನು ಮೇಲಿನಿಂದಲೂ, ಲಘ್ವಕ್ಷರ ಸಂಖ್ಯೆಯನ್ನು ಕೆಳಗಿನಿಂದಲೂ ತಿಳಿಯಬೇಕು. ಅಂದರೆ 1. ಐದು ಗುರುಗಳನ್ನುಳ್ಳ ವೃತ್ತ ಒಂದು ವಿಧ 2. ನಾಲ್ಕು ಗುರುಗಳನ್ನುಳ್ಳ ವೃತ್ತಗಳು ಐದು 3. ಮೂರು ಗುರುಗಳನ್ನುಳ್ಳ ವೃತ್ತಗಳು ಹತ್ತು 4. ಎರಡು ಗುರುಗಳನ್ನುಳ್ಳ ವೃತ್ತಗಳು ಹತ್ತು 5. ಒಂದು ಗುರುವನ್ನುಳ್ಳ ವೃತ್ತಗಳು ಐದು. ಹಾಗೆಯೇ, 6. ಐದು ಲಘುಗಳನ್ನುಳ್ಳವೃತ್ತ ಒಂದು 7. ನಾಲ್ಕು ಲಘುಗಳನ್ನುಳ್ಳ ವೃತ್ತಗಳು ಐದು 8. ಮೂರು ಲಘುಗಳನ್ನುಳ್ಳ ವೃತ್ತಗಳು ಹತ್ತು 9. ಎರಡು ಲಘುಗಳನ್ನುಳ್ಳ ವೃತ್ತಗಳು ಹತ್ತು ಮತ್ತು 10. ಒಂದು ಲಘುವನ್ನುಳ್ಳವೃತ್ತಗಳು ಐದು -ಎಂದು ತಿಳಿಯುವುದು.

|| ಇತ್ಯೇಕ-ದ್ವ್ಯಾದಿಗುರುಲಘುಸಂಖ್ಯಾವಿಧಿಃ ||

ಇಲ್ಲಿಗೆ ಏಕ-ದ್ವ್ಯಾದಿಗುರುಲಘುಸಂಖ್ಯಾವಿಧಿಯು ಮುಗಿದುದು

**೫. ವೃತ್ತಸಂಖ್ಯಾವಿಧಿ ( ಕಾರಿಕೆ - ೮)**

**ಲಗಕ್ರಿಯಾಂಕಸಂದೋಹೇ ಭವೇತ್ ಸಂಖ್ಯಾ ವಿಮಿಶ್ರಿತೇ |**
**ಉದ್ದಿಷ್ಟಾಂಕಸಮಾಹಾರಃ ಸೈಕೋ ವಾ ಜನಯೇದಿಮಾಮ್ || ೮ ||**

ಯಾವುದೇ ಒಂದು ಛಂದಸ್ಸಿನಲ್ಲಿ ಎಷ್ಟು ಅವಾಂತರಭೇದಗಳಿರಬಹುದು? ಎಂಬ ಪ್ರಶ್ನೆಗೆ ಈ ಕಾರಿಕೆ ಉತ್ತರವಾಗಿರುತ್ತದೆ. ಈ ಮೇಲಿನ ಆರು, ಏಳನೆಯ ಕಾರಿಕೆಗಳಲ್ಲಿ ವಿವರಿಸಿರುವಂತೆ ವೃತ್ತ ಭೇದ ಸಂಖ್ಯೆಯನ್ನು ತಿಳಿಯುವುದು ಮೊದಲ ವಿಧವೆಂದು ಈ ಕಾರಿಕೆಯ ಪೂರ್ವಾರ್ಧದಲ್ಲಿ ವಿವರಿಸಲಾಗಿದೆ. ಉದಾಹರಣೆಗೆ - ಐದು ವರ್ಣಗಳುಳ್ಳ ಸುಪ್ರತಿಷ್ಠಾ ಛಂದಸ್ಸಿನಲ್ಲಿ ಈ ಮೇಲೆ ನೋಡಿದಂತೆ ಒಟ್ಟು ಮುವತ್ತೆರಡು ಭೇದಗಳಿರುತ್ತವೆ. ಇದು ಒಂದು ವಿಧ. ಮತ್ತೊಂದು ಅಂದರೆ

ಎರಡನೆಯ ವಿಧವನ್ನು ಈ ಕಾರಿಕೆಯ ಉತ್ತರಾರ್ಧದಲ್ಲಿ ವಿವರಿಸುತ್ತಾನೆ. ಹೇಗೆಂದರೆ - ವೃತ್ತದ ವರ್ಣಗಳ ಸಂಖ್ಯೆಯನ್ನು 1,2,3 ಇತ್ಯಾದಿ ಬರೆದುಕೊಳ್ಳಬೇಕು. ಈ ಸಂಖ್ಯೆಗಳ ಕೆಳಗೆ ಕ್ರಮವಾಗಿ, 1, 1 x 2= 2, 2 x 2= 4, ಇತ್ಯಾದಿ ಬರೆದುಕೊಳ್ಳಬೇಕು. ಕಡೆಯ ಸಂಖ್ಯೆಯನ್ನು ದ್ವಿಗುಣಗೊಳಿಸಿದರೆ ಬರುವ ಸಂಖ್ಯೆಯೇ ವೃತ್ತಗಳ ಭೇದ. ಅಥವಾ ಹಾಗೆ ಇಟ್ಟುಕೊಂಡ ಸಂಖ್ಯೆಗಳ ಮೊತ್ತಕ್ಕೆ ಒಂದನ್ನು ಸೇರಿಸಿದರೆ ಬರುವ ಮೊತ್ತವೇ ವೃತ್ತಭೇದದ ಸಂಖ್ಯೆ. ಉದಾಹರಣೆ—

ಮಧ್ಯಾಛಂದಸ್- 3 ವರ್ಣ

1 2 3

1 2 4 4 x 2 = 8 } (8 ವೃತ್ತ ಭೇದ)

(1 x 2) (2 x 2)

ಅಥವಾ 1 + 2 + 4 =7

7 + 1 = 8

ಸುಪ್ರತಿಷ್ಠಾಛಂದಸ್ — 5ವರ್ಣ (32 ವೃತ್ತ ಭೇದ)

1 2 3 4 5

(1x2) (2x2) (4x2) (8x2)

1 2 4 8 16 16 X 2 = 32

ಅಥವಾ 1 + 2 + 4 + 8 + 16 = 31

31 + 1= 32 ಹೀಗೆ ತಿಳಿಯುವುದು

|| ಇತಿ ವೃತ್ತ ಸಂಖ್ಯಾವಿಧಿಃ ||

ಇಲ್ಲಿಗೆ ವೃತ್ತಸಂಖ್ಯಾವಿಧಿಯು ಮುಗಿದುದು

೬. ಪ್ರಸ್ತಾರಭೂಮಿಮಾನವಿಧಿ — ( ಕಾರಿಕೆ ೯)

ಸಂಖ್ಯೈವ ದ್ವಿಗುಣೈಕೋನಾ ಸದ್ಭಿರಧ್ವಾ ಪ್ರಕೀರ್ತಿತಃ |
ವೃತ್ತಸ್ಯಾಂಗುಲಿಕೀ ವ್ಯಾಪ್ತಿರಧಃ ಕುರ್ಯಾತ್ತಥಾಂಗುಲಿಮ್ ||೯||

ಈ ಮೇಲೆ ನಿರೂಪಿಸಿರುವಂತೆ ಪ್ರತಿ ಛಂದಸ್ಸಿನ ವೃತ್ತಭೇದದ ಸಂಖ್ಯೆಗಳನ್ನು ತಿಳಿಯುವ ಕ್ರಮವನ್ನು ಛಂಧಶ್ಶಾಸ್ತ್ರವಿದ್ವಾಂಸರು ಪ್ರಕಟಪಡಿಸಿರುವರು. ಈ ವೃತ್ತಪಾದಗಳಲ್ಲಿ ಲಘು - ಗುರು-ಗಣ ವಿನ್ಯಾಸಕ್ಕಾಗಿ ಒಂದು ಅಂಗುಲದಷ್ಟು ಅವಕಾಶವನ್ನು ಇಟ್ಟುಕೊಳ್ಳಬೇಕು. ಒಟ್ಟು ವೃತ್ತಭೇದ ಸಂಖ್ಯೆಯನ್ನು ಎರಡರಿಂದ ಗುಣಿಸಿ, ಅದರಲ್ಲಿ ಒಂದನ್ನು ಕಳೆದರೆ, ಶೇಷವು ವೃತ್ತ ಪದ್ಯಪಾದದ ವ್ಯಾಪ್ತಿಯಾಗುತ್ತದೆ. ವೃತ್ತಭೇದ ಸಂಖ್ಯೆಯಲ್ಲಿ ಒಂದನ್ನು ಕಳೆದರೆ ಬರುವ ಸಂಖ್ಯೆ ವೃತ್ತಗಳ ಅಂತರಾಂಗುಲವಾಗುತ್ತದೆ.

**ಉದಾಹರಣೆಗೆ** - ಮಧ್ಯಾಛಂದಸ್. ಇದು ಮೂರು ವರ್ಣಗಳ ಛಂದಸ್. ಇದರಲ್ಲಿ ಒಟ್ಟು ಎಂಟು ಭೇದಗಳುಂಟು. ಈ ಎಂಟರಲ್ಲಿ ಒಂದನ್ನು ಕಳೆದರೆ ಬರುವ ಏಳು ಅಂತರಾಂಗುಲವಾಗುತ್ತದೆ. ಹಾಗೆಯೇ ಎಂಟನ್ನು ಎರಡರಿಂದ ಗುಣಿಸಿದರೆ ಹದಿನಾರು ಬರುತ್ತದೆ. ಈ ಹದಿನಾರರಲ್ಲಿ ಒಂದನ್ನು ಕಳೆದರೆ, ಹದಿನೈದು ಬರುತ್ತದೆ. ಈ ಹದಿನೈದು ಸಂಖ್ಯೆ ಈ ವೃತ್ತದ ವಿಸ್ತಾರವನ್ನು ತಿಳಿಸುತ್ತದೆ.

|| ಇತಿ ಪ್ರಸ್ತಾರ ಭೂಮಿಮಾನವಿಧಿಃ ||

ಇಲ್ಲಿಗೆ ಪ್ರಸ್ತಾರ ಭೂಮಿಮಾನವಿಧಿಯು ಮುಗಿದುದು

---

## ಮುಕ್ತಾಯ ವಾಕ್ಯ

ವಂಶೇಽಭೂತ್ ಕಶ್ಯಪಸ್ಯ ಪ್ರಕಟಗುಣಗಣಃ ಶೈವಸಿದ್ಧಾಂತವೇತ್ತಾ |
ವಿಪ್ರಃ ಪಟ್ಟೇಕ ನಾಮಾ ವಿಮಲತರಮತಿರ್ವೇದಶಾಸ್ತ್ರಾರ್ಥಬೋಧೀ |
ಕೇದಾರಸ್ತಸ್ಯ ಸೂನುಃ ಶಿವಚರಣಯುಗಾರಾಧನೈಕಾಗ್ರಚಿತ್ತಃ |
ಛಂದಸ್ತೇನಾಭಿರಾಮಂ ಪ್ರವಿರಚಿತಮಿದಂ ವೃತ್ತರತ್ನಾಕರಾಖ್ಯಮ್ ||

ಇತಿ ವೃತ್ತರತ್ನಾಕರಾಖ್ಯೇ ಛಂದಸಿ ಪ್ರಸ್ತಾರಾದಿಕಥನಂ ನಾಮ

|| ಷಷ್ಠೋಽಧ್ಯಾಯ ||

|| ಸಮಾಪ್ತಶ್ಚಾಯಂ ಗ್ರಂಥಃ ||

ಅನೇಕ ಸದ್ಗುಣಗಳಿಂದ ಕೂಡಿದವನೂ, ಶೈವಸಿದ್ಧಾಂತವನ್ನು ಚೆನ್ನಾಗಿ ಬಲ್ಲವನೂ, ಪರಿಶುದ್ಧ ಜ್ಞಾನಾದಿಗಳನ್ನುಳ್ಳವನೂ, ವೇದ-ಶಾಸ್ತ್ರಾದಿಗಳ ಅರ್ಥಗಳನ್ನು ಬಲ್ಲವನೂ ಮತ್ತು ಬೋಧಿಸತಕ್ಕವನೂ, ಕಶ್ಯಪಗೋತ್ರದಲ್ಲಿ ಜನಿಸಿದವನೂ ಆದ ಪಟ್ಟೇಕ ಎಂಬ ಹೆಸರಿನ ಬ್ರಾಹ್ಮಣ ಶ್ರೇಷ್ಠನಿರುವನು. ಇವನ ಪುತ್ರನಾದ ಕೇದಾರನೆಂಬುವನು ಸದಾಕಾಲ ಶಿವನ ಪಾದಯುಗಲದ ಸಮಾರಾಧನೆಯಲ್ಲಿಯೇ ತೊಡಗಿರುವ ಮನಸ್ಸುಳ್ಳವನು. ಈ ಇವನು ಈ ವೃತ್ತರತ್ನಾಕರವೆಂಬ ಹೆಸರಿನ ಅತ್ಯಂತ ಸುಂದರವಾದ ಛಂದಶ್ಶಾಸ್ತ್ರ ಸಂಬಂಧಿ ಗ್ರಂಥವನ್ನು ಉತ್ತಮವಾಗಿ ರಚಿಸಿರುವನು.

ಇಲ್ಲಿಗೆ ವೃತ್ತರತ್ನಾಕರವೆಂಬ ಹೆಸರಿನ ಛಂದೋಗ್ರಂಥದಲ್ಲಿ ಪ್ರಸ್ತಾರಾದಿಕಥನವೆಂಬ ಆರನೆಯ ಅಧ್ಯಾಯ ಮುಗಿದುದು

|| ಇಲ್ಲಿಗೆ ಈ ಗ್ರಂಥವು ಮುಗಿದುದು ||

|| ಶಿವಂ ಭೂಯಾತ್ ||